ಇಂದ್ರೋಽಹಂ ಸರ್ವದೇವಾನಾಂ ವಸೂನಾಮಸ್ಮಿ ಹವ್ಯವಾಟ್ ।
ಆದಿತ್ಯಾನಾಮಹಂ ವಿಷ್ಣೂ ರುದ್ರಾಣಾಂ ನೀಲಲೋಹಿತಃ
॥ ೧೩ ॥

ಬ್ರಹ್ಮರ್ಷೀಣಾಂ ಭೃಗುರಹಂ ರಾಜರ್ಷೀಣಾಮಹಂ ಮನುಃ ।
ದೇವರ್ಷೀಣಾಂ ನಾರದೋಽಹಂ ಹವಿರ್ಧಾನ್ಯಸ್ಮಿ ಧೇನುಷು
॥ ೧೪ ॥

ಸಿದ್ಧೇಶ್ವರಾಣಾಂ ಕಪಿಲಃ ಸುಪರ್ಣೋಽಹಂ ಪತತ್ರಿಣಾಮ್ ।
ಪ್ರಜಾಪತೀನಾಂ ದಕ್ಷೋಽಹಂ ಪಿತೄಣಾಮಹಮರ್ಯಮಾ
॥ ೧೫ ॥

ಮಾಂ ವಿದ್ಧ್ಯುದ್ಧವ ದೈತ್ಯಾನಾಂ ಪ್ರಹ್ಲಾದಮಸುರೇಶ್ವರಮ್ ।
ಸೋಮಂ ನಕ್ಷತ್ರೌಷಧೀನಾಂ ಧನೇಶಂ ಯಕ್ಷರಕ್ಷಸಾಮ್
॥ ೧೬ ॥

ಐರಾವತಂ ಗಜೇಂದ್ರಾಣಾಂ ಯಾದಸಾಂ ವರುಣಂ ಪ್ರಭುಮ್ ।
ತಪತಾಂ ದ್ಯುಮತಾಂ ಸೂರ್ಯಂ ಮನುಷ್ಯಾಣಾಂ ಚ ಭೂಪತಿಮ್
॥ ೧೭ ॥

ಉಚ್ಚೈಃಶ್ರವಾಸ್ತುರಂಗಾಣಾಂ ಧಾತೂನಾಮಸ್ಮಿ ಕಾಂಚನಮ್ ।
ಯಮಃ ಸಂಯಮತಾಂ ಚಾಹಂ ಸರ್ಪಾಣಾಮಸ್ಮಿ ವಾಸುಕಿಃ
॥ ೧೮ ॥

ನಾಗೇಂದ್ರಾಣಾಮನಂತೋಽಹಂ ಮೃಗೇಂದ್ರಃ ಶೃಂಗಿದಂಷ್ಟ್ರಿಣಾಮ್ ।
ಆಶ್ರಮಾಣಾಮಹಂ ತುರ್ಯೋ ವರ್ಣಾನಾಂ ಪ್ರಥಮೋಽನಘ
॥ ೧೯ ॥

ತೀರ್ಥಾನಾಂ ಸ್ರೋತಸಾಂ ಗಂಗಾ ಸಮುದ್ರಃ ಸರಸಾಮಹಮ್ ।
ಆಯುಧಾನಾಂ ಧನುರಹಂ ತ್ರಿಪುರಘ್ನೋ ಧನುಷ್ಮತಾಮ್
॥ ೨೦ ॥

ಧಿಷ್ಣ್ಯಾನಾಮಸ್ಮ್ಯಹಂ ಮೇರುರ್ಗಹನಾನಾಂ ಹಿಮಾಲಯಃ ।
ವನಸ್ಪತೀನಾಮಶ್ವತ್ಥ ಓಷಧೀನಾಮಹಂ ಯವಃ
॥ ೨೧ ॥

ಪುರೋಧಸಾಂ ವಸಿಷ್ಠೋಽಹಂ ಬ್ರಹ್ಮಿಷ್ಠಾನಾಂ ಬೃಹಸ್ಪತಿಃ ।
ಸ್ಕಂದೋಽಹಂ ಸರ್ವಸೇನಾನ್ಯಾಮಗ್ರಣ್ಯಾಂ ಭಗವಾನಜಃ
॥ ೨೨ ॥

ಯಜ್ಞಾನಾಂ ಬ್ರಹ್ಮಯಜ್ಞೋಽಹಂ ವ್ರತಾನಾಮವಿಹಿಂಸನಮ್ ।
ವಾಯ್ವಗ್ನ್ಯರ್ಕಾಂಬುವಾಗಾತ್ಮಾ ಶುಚೀನಾಮಪ್ಯಹಂ ಶುಚಿಃ
॥ ೨೩ ॥

ಯೋಗಾನಾಮಾತ್ಮಸಂರೋಧೋ ಮಂತ್ರೋಽಸ್ಮಿ ವಿಜಿಗೀಷತಾಮ್ ।
ಆನ್ವೀಕ್ಷಿಕೀ ಕೌಶಲಾನಾಂ ವಿಕಲ್ಪಃ ಖ್ಯಾತಿವಾದಿನಾಮ್
॥ ೨೪ ॥

ಸ್ತ್ರೀಣಾಂ ತು ಶತರೂಪಾಹಂ ಪುಂಸಾಂ ಸ್ವಾಯಂಭುವೋ ಮನುಃ ।
ನಾರಾಯಣೋ ಮುನೀನಾಂ ಚ ಕುಮಾರೋ ಬ್ರಹ್ಮಚಾರಿಣಾಮ್
॥ ೨೫ ॥

ಸಮಸ್ತ ದೇವತೆಗಳಲ್ಲಿ ಇಂದ್ರನೂ, ಎಂಟು ವಸುಗಳಲ್ಲಿ ಅಗ್ನಿಯೂ, ದ್ವಾದಶಾದಿತ್ಯರಲ್ಲಿ ವಿಷ್ಣುವೂ, ಏಕಾದಶ ರುದ್ರರಲ್ಲಿ ನೀಲಲೋಹಿತ ಹೆಸರಿನ ರುದ್ರನು ನಾನೇ ಆಗಿದ್ದೇನೆ. ಬ್ರಹ್ಮರ್ಷಿಗಳಲ್ಲಿ ಭೃಗು, ರಾಜರ್ಷಿಗಳಲ್ಲಿ ಮನು, ದೇವರ್ಷಿಗಳಲ್ಲಿ ನಾರದ, ಹಸುಗಳಲ್ಲಿ ಕಾಮಧೇನು ನಾನೇ ಆಗಿರುವೆನು. ॥ ೧೩-೧೪॥ ಸಿದ್ಧೇಶ್ವರರಲ್ಲಿ ಕಪಿಲನೂ, ಪಕ್ಷಿಗಳಲ್ಲಿ ಗರುಡನೂ, ಪ್ರಜಾಪತಿಗಳಲ್ಲಿ ದಕ್ಷಪ್ರಜಾಪತಿಯೂ, ಪಿತೃಗಳಲ್ಲಿ ಅರ್ಯಮಾ ನಾನಾಗಿದ್ದೇನೆ. ॥ ೧೫ ॥ ಪ್ರಿಯ ಉದ್ಧವಾ ! ನಾನು ದೈತ್ಯರಲ್ಲಿ ದೈತ್ಯರಾಜ ಪ್ರಹ್ಲಾದನು, ನಕ್ಷತ್ರಗಳ ಅಧಿಪತಿ, ವನಸ್ಪತಿಗಳನ್ನು ಪುಷ್ಟಗೊಳಿಸುವ ಚಂದ್ರನು, ಯಕ್ಷ-ರಾಕ್ಷಸರಲ್ಲಿ ಧನಪತಿ ಕುಬೇರನು ನಾನೇ ಆಗಿದ್ದೇನೆ. ॥ ೧೬ ॥ ಗಜೇಂದ್ರರಲ್ಲಿ ಐರಾವತವೂ, ಜಲಚರಗಳ ಅಧಿಪತಿ ವರುಣ, ಬೆಳಗುವವರಲ್ಲಿ ಪ್ರಕಾಶಕೊಡುವಂತಹ ಸೂರ್ಯನೂ, ಮನುಷ್ಯರಲ್ಲಿ ರಾಜನೂ ನಾನೇ ಆಗಿದ್ದೇನೆ. ॥ ೧೭ ॥ ಕುದುರೆಗಳಲ್ಲಿ ಉಚ್ಚೈಶ್ರವಸ್ಸು ಧಾತುಗಳಲ್ಲಿ ಚಿನ್ನ, ದಂಡಧಾರಿಗಳಲ್ಲಿ ಯಮ, ಸರ್ಪಗಳಲ್ಲಿ ವಾಸುಕಿ ನಾನೇ ಆಗಿರುವೆನು. ॥ ೧೮ ॥ ಪುಣ್ಯಾತ್ಮಾ ಉದ್ಧವನೇ ! ನಾನೇ ನಾಗರಾಜರಲ್ಲಿ ಆದಿಶೇಷನೂ, ಕೊಂಬು ಮತ್ತು ದಾಡೆಗಳುಳ್ಳ ಪ್ರಾಣಿಗಳಲ್ಲಿ ಅವರ ರಾಜನಾದ ಸಿಂಹನೂ, ಆಶ್ರಮಗಳಲ್ಲಿ ಸಂನ್ಯಾಸವೂ, ವರ್ಣಗಳಲ್ಲಿ ಬ್ರಾಹ್ಮಣನೂ ಆಗಿದ್ದೇನೆ. ॥ ೧೯ ॥ ತೀರ್ಥಗಳಲ್ಲಿ ಹಾಗೂ ನದಿಗಳಲ್ಲಿ ಗಂಗೆಯೂ, ಜಲಾಶಯಗಳಲ್ಲಿ ಸಮುದ್ರವೂ, ಅಸ್ತ್ರ-ಶಸ್ತ್ರಗಳಲ್ಲಿ ಧನುಸ್ಸೂ, ಧನುರ್ಧಾರಿಗಳಲ್ಲಿ ತ್ರಿಪುರಾರೀ ಶಂಕರನೂ ನಾನೇ ಆಗಿರುವೆನು. ॥ ೨೦ ॥

ನಿವಾಸಸ್ಥಾನಗಳಲ್ಲಿ ಸುಮೇರುವೂ, ದುರ್ಗಮ ಸ್ಥಾನಗಳಲ್ಲಿ ಹಿಮಾಲಯವೂ, ವನಸ್ಪತಿಗಳಲ್ಲಿ ಅರಳೀಮರವೂ, ಧಾನ್ಯಗಳಲ್ಲಿ ಜವೆಯೂ ನಾನೇ ಆಗಿದ್ದೇನೆ. ॥ ೨೧ ॥ ಪುರೋಹಿತರಲ್ಲಿ ವಸಿಷ್ಠನೂ, ವೇದವೇತ್ತರಲ್ಲಿ ಬೃಹಸ್ಪತಿಯೂ, ಎಲ್ಲ ಸೇನಾಪತಿಗಳಲ್ಲಿ ಸ್ಕಂದನೂ, ಸನ್ಮಾರ್ಗ ಪ್ರವರ್ತಕರಲ್ಲಿ ಭಗವಾನ್ ಬ್ರಹ್ಮನೂ ನಾನೇ ಆಗಿರುವೆನು. ॥ ೨೨ ॥ ಪಂಚ ಮಹಾಯಜ್ಞಗಳಲ್ಲಿ ಬ್ರಹ್ಮಯಜ್ಞ (ಸ್ವಾಧ್ಯಾಯಯಜ್ಞ)ವೂ, ವ್ರತಗಳಲ್ಲಿ ಅಹಿಂಸಾವ್ರತವೂ, ಶುದ್ಧ ಮಾಡುವ ಪದಾರ್ಥಗಳಲ್ಲಿ ನಿತ್ಯಶುದ್ಧ ವಾಯುವೂ ಹಾಗೂ ಅಗ್ನಿ, ಸೂರ್ಯ, ಜಲ, ವಾಣಿ ಮತ್ತು ಆತ್ಮಾ ನಾನೇ ಆಗಿರುವೆನು. ॥ ೨೩ ॥ ಯೋಗಗಳಲ್ಲಿ ಮನೋನಿರೋಧರೂಪೀ ಸಮಾಧಿ ಯೋಗವೂ, ಗೆಲ್ಲುವ ಇಚ್ಛೆಯುಳ್ಳವರಲ್ಲಿ ಗುಪ್ತವಾಗಿಡುವಂತಹ ಮಂತ್ರಾಲೋಚನೆಯೂ, ಆತ್ಮಾನಾತ್ಮ ವಿವೇಕದ ಚರ್ಚೆಯಲ್ಲಿ ಬ್ರಹ್ಮವಿದ್ಯೆಯೂ ನಾನೇ ಆಗಿದ್ದೇನೆ. ತತ್ತ್ವಗಳ ನಿರ್ಣಯ ಮಾಡಲಾಗುವ ವಾದ-ವಿವಾದರೂಪೀ ವಿಕಲ್ಪವೂ ನಾನೇ. (ಏಕೆಂದರೆ ಇಂದಿನವರೆಗೆ ಯಾವುದೇ ತತ್ತ್ವಗಳ ವಿಷಯದಲ್ಲಿ ತತ್ತ್ವಗಳ ಸಂಖ್ಯೆ ಇಷ್ಟೇ ಇದೆ ಎಂಬುದು ನಿರ್ಣಯ ಮಾಡಲಾಗಲಿಲ್ಲ.) ಸ್ತ್ರೀಯರಲ್ಲಿ ಮನುಪತ್ನೀ ಶತರೂಪಾ, ಪುರುಷರಲ್ಲಿ ಸ್ವಾಯಂಭುವ ಮನು, ಮುನೀಶ್ವರರಲ್ಲಿ ನಾರಾಯಣ, ಬ್ರಹ್ಮಚಾರಿಗಳಲ್ಲಿ ಸನತ್ಕುಮಾರರು ನಾನೇ ಆಗಿದ್ದೇನೆ. ॥ ೨೪-೨೫ ॥

ಧರ್ಮಾಣಾಮಸ್ಮಿ ಸಂನ್ಯಾಸಃ ಕ್ಷೇಮಾಣಾಮಬಹಿರ್ಮತಿಃ ।
ಗುಹ್ಯಾನಾಂ ಸೂನೃತಂ ಮೌನಂ ಮಿಥುನಾನಾಮಜಸ್ತ್ವಹಮ್ ॥ ೨೬ ॥

ಸಂವತ್ಸರೋಽಸ್ಮ್ಯನಿಮಿಷಾಮೃತೂನಾಂ ಮಧುಮಾಧವೌ ।
ಮಾಸಾನಾಂ ಮಾರ್ಗಶೀರ್ಷೋಽಹಂ ನಕ್ಷತ್ರಾಣಾಂ ತಥಾಭಿಜಿತ್ ॥ ೨೭ ॥

ಅಹಂ ಯುಗಾನಾಂ ಚ ಕೃತಂ ಧೀರಾಣಾಂ ದೇವಲೋಽಸಿತಃ ।
ದ್ವೈಪಾಯನೋಽಸ್ಮಿ ವ್ಯಾಸಾನಾಂ ಕವೀನಾಂ ಕಾವ್ಯ ಆತ್ಮವಾನ್ ॥ ೨೮ ॥

ವಾಸುದೇವೋ ಭಗವತಾಂ ತ್ವಂ ತು ಭಾಗವತೇಷ್ವಹಮ್ ।
ಕಿಂಪುರುಷಾಣಾಂ ಹನುಮಾನ್ವಿದ್ಯಾಧ್ರಾಣಾಂ ಸುದರ್ಶನಃ ॥ ೨೯ ॥

ರತ್ನಾನಾಂ ಪದ್ಮರಾಗೋಽಸ್ಮಿ ಪದ್ಮಕೋಶಃ ಸುಪೇಶಸಾಮ್ ।
ಕುಶೋಽಸ್ಮಿ ದರ್ಭಜಾತೀನಾಂ ಗವ್ಯಮಾಜ್ಯಂ ಹವಿಃಷ್ವಹಮ್ ॥ ೩೦ ॥

ವ್ಯವಸಾಯಿನಾಮಹಂ ಲಕ್ಷ್ಮೀಃ ಕಿತವಾನಾಂ ಛಲಗ್ರಹಃ ।
ತಿತಿಕ್ಷಾಸ್ಮಿ ತಿತಿಕ್ಷೂಣಾಂ ಸತ್ತ್ವಂ ಸತ್ತ್ವವತಾಮಹಮ್ ॥ ೩೧ ॥

ಓಜಃ ಸಹೋ ಬಲವತಾಂ ಕರ್ಮಾಹಂ ವಿದ್ಧಿ ಸಾತ್ವತಾಮ್ ।
ಸಾತ್ವತಾಂ ನವಮೂರ್ತೀನಾಮಾದಿಮೂರ್ತಿರಹಂ ಪರಾ ॥ ೩೨ ॥

ವಿಶ್ವಾವಸುಃ ಪೂರ್ವಚಿತ್ತಿರ್ಗಂಧರ್ವಾಪ್ಸರಸಾಮಹಮ್ ।
ಭೂಧರಾಣಾಮಹಂ ಸ್ಥೈರ್ಯಂ ಗಂಧಮಾತ್ರಮಹಂ ಭುವಃ ॥ ೩೩ ॥

ಅಪಾಂ ರಸಶ್ಚ ಪರಮಸ್ತೇಜಿಷ್ಠಾನಾಂ ವಿಭಾವಸುಃ ।
ಪ್ರಭಾ ಸೂರ್ಯೇಂದುತಾರಾಣಾಂ ಶಬ್ದೋಽಹಂ ನಭಸಃ ಪರಃ ॥ ೩೪ ॥

ಬ್ರಹ್ಮಣ್ಯಾನಾಂ ಬಲಿರಹಂ ವೀರಾಣಾಮಹಮರ್ಜುನಃ ।
ಭೂತಾನಾಂ ಸ್ಥಿತಿರುತ್ಪತ್ತಿರಹಂ ವೈ ಪ್ರತಿಸಂಕ್ರಮಃ ॥ ೩೫ ॥

ಗತ್ಯುಕ್ತ್ಯುತ್ಸರ್ಗೋಪಾದಾನಮಾನಂದಸ್ಪರ್ಶಲಕ್ಷಣಮ್ ।
ಆಸ್ವಾದಶ್ರುತ್ಯವಘ್ರಾಣಮಹಂ ಸರ್ವೇಂದ್ರಿಯೇಂದ್ರಿಯಮ್ ॥ ೩೬ ॥

ಧರ್ಮಗಳಲ್ಲಿ ಸಂನ್ಯಾಸ ಧರ್ಮವು ಶ್ರೇಯಸ್ಕಾಮೀ ಪುರುಷರ ಅಂತರ್ಮುಖೀ ವೃತ್ತಿಯೂ, ಯಾವುದೇ ಮಾತನ್ನು ಗೋಪನೀಯ ವಾಗಿಡುವುದಕ್ಕಾಗಿ ಮಧುರವಾಣೀ ಮತ್ತು ಮೌನ ನಾನೇ ಆಗಿದ್ದೇನೆ. ಯಾರ ಶರೀರದ ಎರಡು ಭಾಗಗಳಿಂದ ಸ್ತ್ರೀ-ಪುರುಷರ ಮೊದ ಲನೆಯ ಜೋಡಿಯು ಉತ್ಪನ್ನವಾಯಿತೋ ಆ ಬ್ರಹ್ಮದೇವರು ನಾನೇ ಆಗಿದ್ದೇನೆ. ॥ ೨೬ ॥ ಸದಾಕಾಲವೂ ಎಚ್ಚರವಾಗಿರುವವರಲ್ಲಿ ಸಂವತ್ಸರರೂಪೀ ಕಾಲವು ನಾನೇ. ಋತುಗಳಲ್ಲಿ ವಸಂತನೂ, ತಿಂಗಳು ಗಳಲ್ಲಿ ಮಾರ್ಗಶೀರ್ಷವೂ, ನಕ್ಷತ್ರಗಳಲ್ಲಿ ಅಭಿಜಿತ್ ನಾನೇ ಆಗಿದ್ದೇನೆ. ॥ ೨೭ ॥ ಯುಗಗಳಲ್ಲಿ ಕೃತಯುಗವೂ, ವಿವೇಕಿಗಳಲ್ಲಿ ದೇವರ್ಷಿ ದೇವಲ ಮತ್ತು ಅಸಿತನೂ, ವ್ಯಾಸರಲ್ಲಿ ಶ್ರೀಕೃಷ್ಣದ್ವೈ ಪಾಯನ ವ್ಯಾಸ ಹಾಗೂ ಕವಿಗಳಲ್ಲಿ ಮನಸ್ವೀ ಶುಕ್ರಾಚಾರ್ಯರೂ ನಾನೇ ಆಗಿರುವೆನು. ॥ ೨೮॥ ಷಡ್‌ಗುಣೈಶ್ವರ್ಯಗಳಲ್ಲಿ ಭಗವಾನ್ ವಾಸುದೇವನು ನಾನೇ. ನನ್ನ ಪ್ರೇಮಿ ಭಕ್ತರಲ್ಲಿ ನೀನು (ಉದ್ಧವ), ಕಿಂಪುರುಷರಲ್ಲಿ ಹನುಮಂತನೂ, ವಿದ್ಯಾಧರರಲ್ಲಿ ಸುದರ್ಶನವೂ (ಅವನು ಅಜಗರ ರೂಪದಿಂದ ನಂದರಾಜನನ್ನು ನುಂಗಿದ್ದನು ಮತ್ತೆ ಭಗವಂತನ ಪಾದಸ್ಪರ್ಶದಿಂದ ಮುಕ್ತನಾಗಿದ್ದನು.) ನಾನೇ ಆಗಿದ್ದೇನೆ. ॥ ೨೯ ॥ ರತ್ನಗಳಲ್ಲಿ ಪದ್ಮರಾಗ (ಕೆಂಪು)ವೂ, ಸುಂದರ ವಸ್ತುಗಳಲ್ಲಿ ಕಮಲದ ಮೊಗ್ಗು, ತೃಣಗಳಲ್ಲಿ ಕುಶ, ಹವಿಸ್ಸುಗಳಲ್ಲಿ ಹಸುವಿನ ತುಪ್ಪ ನಾನೇ ಆಗಿದ್ದೇನೆ. ॥ ೩೦ ॥ ವ್ಯಾಪಾರಿಗಳಲ್ಲಿ ಇರುವ ಲಕ್ಷ್ಮೀಯೂ, ಛಲ-ಕಪಟಮಾಡುವವರಲ್ಲಿ ದ್ಯೂತ ಕ್ರೀಡೆಯೂ, ತಿತಿಕ್ಷುಗಳ ತಿತಿಕ್ಷೆಯೂ, ಸಾತ್ತ್ವಿಕರಲ್ಲಿರುವ ಸತ್ತ್ವ ಗುಣವೂ ನಾನೇ ಆಗಿರುವೆನು. ॥ ೩೧ ॥ ಬಲಿಷ್ಠರಲ್ಲಿ ಉತ್ಸಾಹ ಪರಾಕ್ರಮವೂ, ಭಗವದ್ಭಕ್ತರಲ್ಲಿ ಭಕ್ತಿಯುಕ್ತ ನಿಷ್ಕಾಮಕರ್ಮವೂ, ವೈಷ್ಣವರಲ್ಲಿ ವಾಸುದೇವ ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ, ನಾರಾಯಣ, ಹಯಗ್ರೀವ, ವರಾಹ, ನೃಸಿಂಹ ಮತ್ತು ಬ್ರಹ್ಮಾ– ಈ ಒಂಭತ್ತು ಮೂರ್ತಿಗಳಲ್ಲಿ ಮೊದಲನೆಯದಾದ ಶ್ರೇಷ್ಠ ವಾಸುದೇವ ಮೂರ್ತಿಯೂ ನಾನೇ ಆಗಿದ್ದೇನೆ. ॥ ೩೨ ॥ ಗಂಧರ್ವರಲ್ಲಿ ವಿಶ್ವಾವಸು, ಅಪ್ಸರೆಯರಲ್ಲಿ ಬ್ರಹ್ಮನ ಆಸ್ಥಾನದ ಅಪ್ಸರೆ ಪೂರ್ವಚಿತ್ತಿ, ಪರ್ವತಗಳಲ್ಲಿ ಸ್ಥಿರತೆ, ಪೃಥ್ವಿಯಲ್ಲಿ ಶುದ್ಧಗಂಧ ತನ್ಮಾತ್ರೆಯ ಗುಣ ಶಬ್ದ ನಾನೇ ಆಗಿದ್ದೇನೆ. ॥ ೩೩ ॥ ಜಲದಲ್ಲಿ ರಸವೂ, ತೇಜಸ್ವೀ ಅಗ್ನಿ, ಸೂರ್ಯ, ಚಂದ್ರ, ನಕ್ಷತ್ರಗಳಲ್ಲಿ ಪ್ರಭೆನಾನಾಗಿದ್ದೇನೆ. ಆಕಾಶ ದಲ್ಲಿ ಅದರ ಏಕಮಾತ್ರ ಗುಣವಾದ ಶಬ್ದವು ನಾನೇ ಆಗಿ ದ್ದೇನೆ. ॥ ೩೪ ॥ ಉದ್ಧವನೇ ! ಬ್ರಾಹ್ಮಣಭಕ್ತರಲ್ಲಿ ಬಲಿ, ವೀರರಲ್ಲಿ ಅರ್ಜುನ, ಪ್ರಾಣಿಗಳಲ್ಲಿ ಅವರ ಉತ್ಪತ್ತಿ, ಸ್ಥಿತಿಯೂ, ಕೊನೆಗೆ ಅವರೆಲ್ಲ ನನ್ನ ಮೂಲಸ್ಥಾನದಲ್ಲಿ (ಪ್ರಳಯದಲ್ಲಿ) ಬಂದು ಸೇರುವ ವಿಧಾನವೂ ನಾನೇ ಆಗಿದ್ದೇನೆ. ॥ ೩೫ ॥ ನಾನೇ ಕಾಲುಗಳಿಂದ ನಡೆಯುವ ಶಕ್ತಿ, ವಾಣಿಯಿಂದ ಮಾತಾಡುವ ಶಕ್ತಿ , ವಾಯುವಿನಲ್ಲಿ ಮಲತ್ಯಾಗದ ಶಕ್ತಿ , ಕೈಗಳಲ್ಲಿ ಹಿಡಿಯುವ ಶಕ್ತಿ , ಜನನೇಂದ್ರಿಯದಲ್ಲಿ ಆನಂದೋಪಭೋಗದ ಶಕ್ತಿ , ತ್ವಚೆಯಲ್ಲಿ ಸ್ಪರ್ಶದ, ನೇತ್ರಗಳಲ್ಲಿ ದರ್ಶನದ, ರಸನೆಯಲ್ಲಿ ರುಚಿಯಾಗುವ, ಕಿವಿಗಳಲ್ಲಿ ಶ್ರವಣದ, ಮೂಗಿನಲ್ಲಿ ಮೂಸುವ ಶಕ್ತಿಯೂ ಸಮಸ್ತ ಇಂದ್ರಿಯಗಳ ಇಂದ್ರಿಯಶಕ್ತಿಯೂ ನಾನೇ ಆಗಿದ್ದೇನೆ. ಪೃಥ್ವೀ, ವಾಯು, ಆಕಾಶ,

ಪೃಥಿವೀ ವಾಯುರಾಕಾಶ ಆಪೋ ಜ್ಯೋತಿರಹಂ ಮಹಾನ್ ।
ವಿಕಾರಃ ಪುರುಷೋಽವ್ಯಕ್ತಂ ರಜಃ ಸತ್ತ್ವಂ ತಮಃ ಪರಮ್
॥ ೩೭ ॥

ಅಹಮೇತತ್ಪ್ರಸಂಖ್ಯಾನಂ ಜ್ಞಾನಂ ತತ್ತ್ವವಿನಿಶ್ಚಯಃ ।
ಮಯೇಶ್ವರೇಣ ಜೀವೇನ ಗುಣೇನ ಗುಣಿನಾ ವಿನಾ ।
ಸರ್ವಾತ್ಮನಾಪಿ ಸರ್ವೇಣ ನ ಭಾವೋ ವಿದ್ಯತೇ ಕ್ವಚಿತ್
॥ ೩೮ ॥

ಸಂಖ್ಯಾನಂ ಪರಮಾಣೂನಾಂ ಕಾಲೇನ ಕ್ರಿಯತೇ ಮಯಾ ।
ನ ತಥಾ ಮೇ ವಿಭೂತೀನಾಂ ಸೃಜತೋಽಂಡಾನಿ ಕೋಟಿಶಃ
॥ ೩೯ ॥

ತೇಜಃ ಶ್ರೀಃ ಕೀರ್ತಿರೈಶ್ವರ್ಯಂ ಹ್ರೀಸ್ತ್ಯಾಗಃ ಸೌಭಗಂ ಭಗಃ ।
ವೀರ್ಯಂ ತಿತಿಕ್ಷಾ ವಿಜ್ಞಾನಂ ಯತ್ರ ಯತ್ರ ಸ ಮೇಽಂಶಕಃ
॥ ೪೦ ॥

ಏತಾಸ್ತೇ ಕೀರ್ತಿತಾಃ ಸರ್ವಾಃ ಸಂಕ್ಷೇಪೇಣ ವಿಭೂತಯಃ ।
ಮನೋವಿಕಾರಾ ಏವೈತೇ ಯಥಾ ವಾಚಾಭಿಧೀಯತೇ
॥ ೪೧ ॥

ವಾಚಂ ಯಚ್ಛ ಮನೋ ಯಚ್ಛ ಪ್ರಾಣಾನ್ಯಚ್ಛೇಂದ್ರಿಯಾಣಿ ಚ ।
ಆತ್ಮಾನಮಾತ್ಮನಾ ಯಚ್ಛ ನ ಭೂಯಃ ಕಲ್ಪಸೇಽಧ್ವನೇ
॥ ೪೨ ॥

ಯೋ ವೈ ವಾಙ್ಮನಸೀ ಸಮ್ಯಗಸಂಯಚ್ಛನ್ ಧಿಯಾ ಯತಿಃ ।
ತಸ್ಯ ವ್ರತಂ ತಪೋ ಜ್ಞಾನಂ ಸ್ರವತ್ಯಾಮಘಟಾಂಬುವತ್
॥ ೪೩ ॥

ತಸ್ಮಾನ್ಮನೋವಚಃಪ್ರಾಣಾನ್ ನಿಯಚ್ಛೇನ್ಮತ್ಪರಾಯಣಃ ।
ಮದ್ಭಕ್ತಿಯುಕ್ತಯಾ ಬುದ್ಧ್ಯಾ ತತಃ ಪರಿಸಮಾಪ್ಯತೇ
॥ ೪೪ ॥

ಜಲ, ತೇಜ, ಅಹಂಕಾರ, ಮಹತ್ತತ್ತ್ವ, ಪಂಚಮಹಾಭೂತಗಳು, ಜೀವ, ಅವ್ಯಕ್ತ , ಪ್ರಕೃತಿ, ಸತ್ತ್ವ, ರಜ, ತಮ ಇವೆಲ್ಲ ವಿಕಾರಗಳು ಮತ್ತು ಇವುಗಳಿಂದ ಅತೀತವಾಗಿರುವ ಪರಬ್ರಹ್ಮ ಇವೆಲ್ಲವೂ ನಾನೇ ಆಗಿರುವೆನು. ॥ ೩೬-೩೭॥ ಈ ತತ್ತ್ವಗಳ ಗಣನೆ, ಲಕ್ಷಣಗಳ ಮೂಲಕ ಅವುಗಳ ಜ್ಞಾನ, ತತ್ತ್ವಜ್ಞಾನರೂಪೀ ಅದರ ಫಲವೂ ನಾನೇ ಆಗಿದ್ದೇನೆ. ನಾನೇ ಈಶ್ವರನೂ, ಜೀವವೂ, ಗುಣವೂ, ಗುಣಿಯೂ, ಎಲ್ಲರ ಆತ್ಮನೂ, ಸರ್ವರೂಪನೂ ಆಗಿರುವೆನು. ನಾನಲ್ಲದೆ ಬೇರೆ ಯಾವುದೇ ಪದಾರ್ಥ ಎಲ್ಲಿಯೂ ಇಲ್ಲ. ॥ ೩೮ ॥ ಒಂದೊಮ್ಮೆ ಎಣಿಸತೊಡಗಿದರೆ, ಪರಮಾಣುಗಳ ಎಣಿಕೆ ಕದಾಚಿತ್ ಆಗಬಹುದು; ಆದರೆ ನನ್ನ ವಿಭೂತಿಗಳ ಎಣಿಕೆ ಸಾಧ್ಯವಾಗದು. ಏಕೆಂದರೆ, ನಾನು ರಚಿಸಿದ ಕೋಟಿ-ಕೋಟಿ ಬ್ರಹ್ಮಾಂಡಗಳ ಎಣಿಕೆಯೇ ಆಗದಿದ್ದಾಗ, ನನ್ನ ವಿಭೂತಿಗಳ ಗಣನೆಯಾದರೂ ಹೇಗಾಗಬಲ್ಲದು ? ॥ ೩೯ ॥ ಯಾವುದರಲ್ಲೇ ಆಗಲೀ ತೇಜ, ಶ್ರೀ, ಕೀರ್ತಿ, ಐಶ್ವರ್ಯ, ಲಜ್ಜೆ, ತ್ಯಾಗ, ಸೌಂದರ್ಯ, ಸೌಭಾಗ್ಯ, ಪರಾಕ್ರಮ, ತಿತಿಕ್ಷೆ, ವಿಜ್ಞಾನ ಮುಂತಾದ ಇರುವ ಶ್ರೇಷ್ಠಗುಣಗಳೆಲ್ಲ ನನ್ನ ಅಂಶವೇ ಆಗಿದೆ ಎಂದು ತಿಳಿದುಕೊ. ॥ ೪೦ ॥

ಉದ್ಧವನೇ! ನಿನ್ನ ಪ್ರಶ್ನೆಗನುಸಾರ ನಾನು ಸಂಕ್ಷೇಪವಾಗಿ ವಿಭೂತಿಗಳನ್ನು ವರ್ಣಿಸಿರುವೆನು. ಇವೆಲ್ಲವೂ ಪರಮಾರ್ಥವಸ್ತು ಆಗಿರದೆ ಮನೋವಿಕಾರಮಾತ್ರವಾಗಿವೆ. ಏಕೆಂದರೆ, ಮನಸ್ಸಿನಿಂದ ಯೋಚಿಸಿದ, ವಾಣಿಯಿಂದ ಹೇಳಲಾದ ಯಾವುದೇ ವಸ್ತುವೂ ಪರಮಾರ್ಥ (ವಾಸ್ತವಿಕ) ವಾಗಿರುವುದಿಲ್ಲ, ಅದರ ಒಂದು ಕಲ್ಪನೆಯೇ ಆಗಿರುತ್ತದೆ. ॥ ೪೧ ॥ ಆದ್ದರಿಂದ ನೀನು ವಾಣಿಯನ್ನು ವಶಪಡಿಸಿಕೋ. ಮನಸ್ಸಿನ ಸಂಕಲ್ಪ - ವಿಕಲ್ಪಗಳನ್ನು ನಿಲ್ಲಿಸಿಬಿಡು. ಪ್ರಾಣಗಳನ್ನು ವಶಪಡಿಸಿಕೊಂಡು, ಇಂದ್ರಿಯಗಳನ್ನು ದಮನ ಮಾಡು. ಸಾತ್ತ್ವಿಕ ಬುದ್ಧಿಯಮೂಲಕ ಪ್ರಪಂಚಾಭಿಮುಖೀ ಬುದ್ಧಿಯನ್ನು ಶಾಂತಗೊಳಿಸು. ಮತ್ತೆ ನಿನಗೆ ಸಂಸಾರದ ಜನ್ಮ-ಮರಣ ರೂಪೀ ದುಃಖಮಯ ಮಾರ್ಗದಲ್ಲಿ ಅಲೆಯಬೇಕಾಗುವುದಿಲ್ಲ. ॥ ೪೨ ॥ ಬುದ್ಧಿಯ ಮೂಲಕ ವಾಣಿ ಮತ್ತು ಮನಸ್ಸನ್ನು ಪೂರ್ಣವಾಗಿ ವಶಪಡಿಸಿಕೊಳ್ಳಲಾರದ ಸಾಧಕನ ವ್ರತ, ತಪಸ್ಸು, ಜ್ಞಾನ ಇವುಗಳು ಹಸಿಗಡಿಗೆಯಲ್ಲಿ ತುಂಬಿಟ್ಟ ನೀರಿನಂತೆ, ಕ್ಷೀಣವಾಗುತ್ತದೆ. ॥ ೪೩ ॥ ಅದಕ್ಕಾಗಿ ನನ್ನ ಪ್ರೇಮೀ ಭಕ್ತನು ನನ್ನಲ್ಲಿ ಪರಾಯಣನಾಗಿ ಭಕ್ತಿಯುಕ್ತ ಬುದ್ಧಿಯಿಂದ ವಾಣೀ, ಮನಸ್ಸು ಪ್ರಾಣಗಳನ್ನು ಸಂಯಮ ಮಾಡಬೇಕು. ಹೀಗೆ ಮಾಡುವುದರಿಂದ ಮತ್ತೆ ಅವನಿಗೆ ಮಾಡಲು ಯಾವುದೇ ಬಾಕಿ ಇರುವುದಿಲ್ಲ. ಅವನು ಕೃತಕೃತ್ಯನಾಗಿ ಹೋಗುತ್ತಾನೆ. ॥ ೪೪ ॥

ಹದಿನಾರನೆಯ ಅಧ್ಯಾಯವು ಮುಗಿಯಿತು. ॥ ೧೬ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಏಕಾದಶ ಸ್ಕಂಧೇ ಷೋಡಶೋಽಧ್ಯಾಯಃ॥ ೧೬ ॥

# ಹದಿನೇಳನೆಯ ಅಧ್ಯಾಯ

## ವರ್ಣಾಶ್ರಮ ಧರ್ಮದ ನಿರೂಪಣೆ

*ಉದ್ಧವ ಉವಾಚ*

ಯಸ್ತ್ವಯಾಭಿಹಿತಃ ಪೂರ್ವಂ ಧರ್ಮಸ್ತ್ವದ್ಭಕ್ತಿಲಕ್ಷಣಃ ।
ವರ್ಣಾಶ್ರಮಾಚಾರವತಾಂ ಸರ್ವೇಷಾಂ ದ್ವಿಪದಾಮಪಿ ॥ ೧ ॥

ಯಥಾನುಷ್ಠೀಯಮಾನೇನ ತ್ವಯಿ ಭಕ್ತಿರ್ನೃಣಾಂ ಭವೇತ್ ।
ಸ್ವಧರ್ಮೇಣಾರವಿಂದಾಕ್ಷ ತತ್ಸಮಾಖ್ಯಾತುಮರ್ಹಸಿ ॥ ೨ ॥

ಪುರಾ ಕಿಲ ಮಹಾಬಾಹೋ ಧರ್ಮಂ ಪರಮಕಂ ಪ್ರಭೋ ।
ಯತ್ತೇನ ಹಂಸರೂಪೇಣ ಬ್ರಹ್ಮಣೇಽಭ್ಯಾತ್ಥ ಮಾಧವ ॥ ೩ ॥

ಸ ಇದಾನೀಂ ಸುಮಹತಾ ಕಾಲೇನಾಮಿತ್ರಕರ್ಶನ ।
ನ ಪ್ರಾಯೋ ಭವಿತಾ ಮರ್ತ್ಯಲೋಕೇ ಪ್ರಾಗನುಶಾಸಿತಃ ॥ ೪ ॥

ವಕ್ತಾ ಕರ್ತಾವಿತಾ ನಾನ್ಯೋ ಧರ್ಮಸ್ಯಾಚ್ಯುತ ತೇ ಭುವಿ ।
ಸಭಾಯಾಮಪಿ ವೈರಿಂಚ್ಯಾಂ ಯತ್ರ ಮೂರ್ತಿಧರಾಃ ಕಲಾಃ ॥ ೫ ॥

ಕರ್ತ್ರಾವಿತ್ರಾ ಪ್ರವಕ್ತ್ರಾ ಚ ಭವತಾ ಮಧುಸೂದನ ।
ತ್ಯಕ್ತೇ ಮಹೀತಲೇ ದೇವ ವಿನಷ್ಟಂ ಕಃ ಪ್ರವಕ್ಷ್ಯತಿ ॥ ೬ ॥

ತತ್ತ್ವಂ ನಃ ಸರ್ವಧರ್ಮಜ್ಞ ಧರ್ಮಸ್ತ್ವದ್ಭಕ್ತಿಲಕ್ಷಣಃ ।
ಯಥಾ ಯಸ್ಯ ವಿಧೀಯೇತ ತಥಾ ವರ್ಣಯ ಮೇ ಪ್ರಭೋ ॥ ೭ ॥

*ಶ್ರೀಶುಕ ಉವಾಚ*

ಇತ್ಥಂ ಸ್ವಭೃತ್ಯಮುಖ್ಯೇನ ಪೃಷ್ಟಃ ಸ ಭಗವಾನ್ ಹರಿಃ ।
ಪ್ರೀತಃ ಕ್ಷೇಮಾಯ ಮರ್ತ್ಯಾನಾಂ ಧರ್ಮಾನಾಹ ಸನಾತನಾನ್ ॥ ೮ ॥

*ಶ್ರೀಭಗವಾನುವಾಚ*

ಧರ್ಮ್ಯ ಏಷ ತವ ಪ್ರಶ್ನೋ ನೈಃಶ್ರೇಯಸಕರೋ ನೃಣಾಮ್ ।
ವರ್ಣಾಶ್ರಮಾಚಾರವತಾಂ ತಮುದ್ಧವ ನಿಬೋಧ ಮೇ ॥ ೯ ॥

ಆದೌ ಕೃತಯುಗೇ ವರ್ಣೋ ನೃಣಾಂ ಹಂಸ ಇತಿ ಸ್ಮೃತಃ ।
ಕೃತಕೃತ್ಯಾಃ ಪ್ರಜಾ ಜಾತ್ಯಾ ತಸ್ಮಾತ್ ಕೃತಯುಗಂ ವಿದುಃ ॥ ೧೦ ॥

**ಉದ್ಧವನು ಕೇಳಿದನು** – ಕಮಲನಯನ ಶ್ರೀಕೃಷ್ಣಾ! ಈಗ ನೀನು ಧರ್ಮದ ವಿಷಯದಲ್ಲಿ ನಿರೂಪಿಸಿದೆ. ಅದರಿಂದ ನಿನ್ನ ಭಕ್ತಿಯು ಪ್ರಾಪ್ತವಾಗುತ್ತದೆ. ಅದು ಎಲ್ಲ ವರ್ಣ ಆಶ್ರಮದ ಮನುಷ್ಯರಿಗೆ ದೊರೆಯಬಲ್ಲದು. ತಮ್ಮ-ತಮ್ಮ ಧರ್ಮದ ಅನುಷ್ಠಾನವನ್ನು ಮಾಡುತ್ತಾ ಮನುಷ್ಯನು ನಿನ್ನ ಭಕ್ತಿಯನ್ನು ಸಹಜವಾಗಿ ಹೇಗೆ ಪಡೆಯಬಲ್ಲನು ಎಂಬುದನ್ನು ತಿಳಿಸುವ ಕೃಪೆ ಮಾಡಬೇಕು. ॥ ೧-೨ ॥ ಮಹಾಬಾಹು ಮಾಧವಾ ! ಸ್ವಾಮೀ ! ಮೊದಲು ನೀನು ಹಂಸರೂಪದಿಂದ ಅವತರಿಸಿ ಬ್ರಹ್ಮದೇವರಿಗೆ ಪರಮಧರ್ಮವನ್ನು ಉಪದೇಶಿಸಿರುವೆ. ॥ ೩ ॥ ಶತ್ರುಮರ್ದನಾ ! ಅನೇಕ ಕಾಲವು ಕಳೆದುಹೋದ ಕಾರಣ ಅದು ಈಗ ಮರ್ತ್ಯ ಲೋಕದಲ್ಲಿ ಪ್ರಾಯಶಃ ಇಲ್ಲವೆಂದೇ ಆಗಿದೆ. ಏಕೆಂದರೆ, ನೀನು ಅದನ್ನು ಉಪದೇಶಿಸಿ ಬಹಳ ದಿನಗಳು ಕಳೆದುಹೋದುವು. ॥ ೪ ॥ ಅಚ್ಯುತಾ ! ಈ ಪೃಥ್ವಿಯಲ್ಲಾಗಲೀ, ಸಮಸ್ತ ವೇದಗಳು ಮೂರ್ತಿಮಂತವಾಗಿ ವಿರಾಜಿಸುತ್ತಿರುವ ಚತುರ್ಮುಖ ಬ್ರಹ್ಮನ ಆ ಸಭೆಯಲ್ಲಾಗಲೀ, ನಿನ್ನ ಈ ಧರ್ಮದ ಪ್ರವಚನ, ಪ್ರವರ್ತನ ಅಥವಾ ಸಂರಕ್ಷಣ ಮಾಡಬಲ್ಲವರು ನೀನಲ್ಲದೆ ಬೇರೆ ಯಾರೂ ಇಲ್ಲ. ॥ ೫ ॥ ಓ ಮಧುಸೂದನಾ! ನೀನೇ ಈ ಧರ್ಮದ ಪ್ರವರ್ತಕ, ರಕ್ಷಕ ಮತ್ತು ಉಪದೇಶಕನಾಗಿರುವೆ. ಓ ಪರಮಾತ್ಮಾ! ನೀನು ಈ ಮಹೀತಲದಿಂದ ನಿನ್ನ ಲೀಲೆಯನ್ನು ಸಂವರಣಮಾಡಿಕೊಂಡಾಗ ಈ ಧರ್ಮದ ಲೋಪವೇ ಆಗಿ ಹೋದೀತು. ಹಾಗಿರುವಾಗ ಅದನ್ನು ಯಾರು ಹೇಳುವರು ? ॥ ೬ ॥ ಆದ್ದರಿಂದ ಓ ಸರ್ವಧರ್ಮದ ಜ್ಞಾತೃವಾದ ಪ್ರಭೋ ! ನಿನ್ನ ಭಕ್ತಿಯು ಪ್ರಾಪ್ತವಾಗಿಸುವ, ಆ ಧರ್ಮವನ್ನು ನೀನು ವರ್ಣಿಸು. ಯಾರಿಗಾಗಿ ಅದರ ಯಾವ ವಿಧಾನವಾಗಿದೆ, ಅದನ್ನೂ ತಿಳಿಸುವವನಾಗು. ॥ ೭ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಭಕ್ತಶಿರೋಮಣಿ ಉದ್ಧವನು ಈ ವಿಧವಾಗಿ ಪ್ರಶ್ನಿಸಿದಾಗ ಭಗವಾನ್ ಶ್ರೀಕೃಷ್ಣನು ಅತ್ಯಂತ ಪ್ರಸನ್ನನಾಗಿ ಪ್ರಾಣಿಗಳ ಶ್ರೇಯಸ್ಸಿಗಾಗಿ ಸನಾತನ ಧರ್ಮವನ್ನು ಉಪದೇಶಿಸಿದನು. ॥ ೮ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** – ಪ್ರಿಯ ಉದ್ಧವನೇ! ನಿನ್ನ ಪ್ರಶ್ನೆಯು ಧರ್ಮಮಯವಾಗಿದೆ. ಏಕೆಂದರೆ, ಇದು ಎಲ್ಲ ವರ್ಣಾಶ್ರಮಧರ್ಮಿ ಮನುಷ್ಯರಿಗೆ ಪರಮ ಶ್ರೇಯಸ್ಕರ ಮೋಕ್ಷವನ್ನು ಕೊಡುವುದಾಗಿದೆ. ಮನಸ್ಸು ಕೊಟ್ಟು ಕೇಳು. ॥ ೯ ॥

ಈ ಕಲ್ಪದ ಪ್ರಾರಂಭದ ಕೃತಯುಗದಲ್ಲಿ ಎಲ್ಲ ಜನರೂ ಹುಟ್ಟಿದಂದಿನಿಂದಲೇ ಕೃತಕೃತ್ಯರಾಗಿರುತ್ತಿದ್ದರು. ಆಗ ಎಲ್ಲರ ವರ್ಣವು ಹಂಸವೆಂದೇ ಇತ್ತು. ಅದಕ್ಕಾಗಿ ಅದರ ಹೆಸರೂ ಕೂಡ ಕೃತಯುಗವೆಂದಾಯಿತು. ॥ ೧೦ ॥ ಆಗ ಕೇವಲ ಪ್ರಣವವೇ ವೇದವಾಗಿತ್ತು.

ವೇದಃ ಪ್ರಣವ ಏವಾಗ್ರೇ ಧರ್ಮೋಽಹಂ ವೃಷರೂಪಧೃಕ್ ।
ಉಪಾಸತೇ ತಪೋನಿಷ್ಠಾ ಹಂಸಂ ಮಾಂ ಮುಕ್ತಕಿಲ್ಬಿಷಾಃ ॥ ೧೧ ॥

ತ್ರೇತಾಮುಖೇ ಮಹಾಭಾಗ ಪ್ರಾಣಾನ್ಮೇ ಹೃದಯಾತ್ತ್ರಯೀ ।
ವಿದ್ಯಾ ಪ್ರಾದುರಭೂತ್ತಸ್ಯಾ ಅಹಮಾಸಂ ತ್ರಿವೃನ್ಮಖಃ ॥ ೧೨ ॥

ವಿಪ್ರಕ್ಷತ್ರಿಯವಿಟ್ಶೂದ್ರಾ ಮುಖಬಾಹೂರುಪಾದಜಾಃ ।
ವೈರಾಜಾತ್ ಪುರುಷಾಜ್ಜಾತಾ ಯ ಆತ್ಮಾಚಾರಲಕ್ಷಣಾಃ ॥ ೧೩ ॥

ಗೃಹಾಶ್ರಮೋ ಜಘನತೋ ಬ್ರಹ್ಮಚರ್ಯಂ ಹೃದೋ ಮಮ ।
ವಕ್ಷಃಸ್ಥಾನಾದ್ವನೇ ವಾಸೋ ನ್ಯಾಸಃ ಶೀರ್ಷಣಿ ಸಂಸ್ಥಿತಃ ॥ ೧೪ ॥

ವರ್ಣಾನಾಮಾಶ್ರಮಾಣಾಂ ಚ ಜನ್ಮಭೂಮ್ಯನುಸಾರಿಣೀಃ ।
ಆಸನ್ ಪ್ರಕೃತಯೋ ನೄಣಾಂ ನೀಚೈರ್ನೀಚೋತ್ತಮೋತ್ತಮಾಃ ॥ ೧೫ ॥

ಶಮೋ ದಮಸ್ತಪಃ ಶೌಚಂ ಸಂತೋಷಃ ಕ್ಷಾಂತಿರಾರ್ಜವಮ್ ।
ಮದ್ಭಕ್ತಿಶ್ಚ ದಯಾ ಸತ್ಯಂ ಬ್ರಹ್ಮಪ್ರಕೃತಯಸ್ತ್ವಿಮಾಃ ॥ ೧೬ ॥

ತೇಜೋ ಬಲಂ ಧೃತಿಃ ಶೌರ್ಯಂ ತಿತಿಕ್ಷೌದಾರ್ಯಮುದ್ಯಮಃ ।
ಸ್ಥೈರ್ಯಂ ಬ್ರಹ್ಮಣ್ಯತೈಶ್ವರ್ಯಂ ಕ್ಷತ್ರಪ್ರಕೃತಯಸ್ತ್ವಿಮಾಃ ॥ ೧೭ ॥

ಆಸ್ತಿಕ್ಯಂ ದಾನನಿಷ್ಠಾ ಚ ಅದಂಭೋ ಬ್ರಹ್ಮಸೇವನಮ್ ।
ಅತುಷ್ಟಿರರ್ಥೋಪಚಯೈರ್ವೈಶ್ಯಪ್ರಕೃತಯಸ್ತ್ವಿಮಾಃ ॥ ೧೮ ॥

ಶುಶ್ರೂಷಣಂ ದ್ವಿಜಗವಾಂ ದೇವಾನಾಂ ಚಾಪ್ಯಮಾಯಯಾ ।
ತತ್ರ ಲಬ್ಧೇನ ಸಂತೋಷಃ ಶೂದ್ರಪ್ರಕೃತಯಸ್ತ್ವಿಮಾಃ ॥ ೧೯ ॥

ಅಶೌಚಮನೃತಂ ಸ್ತೇಯಂ ನಾಸ್ತಿಕ್ಯಂ ಶುಷ್ಕವಿಗ್ರಹಃ ।
ಕಾಮಃ ಕ್ರೋಧಶ್ಚ ತರ್ಷಶ್ಚ ಸ್ವಭಾವೋಽಂತೇವಸಾಯಿನಾಮ್ ॥ ೨೦ ॥

ತಪಸ್ಸು, ಶೌಚ, ದಯಾ, ಸತ್ಯ ಎಂಬ ನಾಲ್ಕು ಚರಣಗಳಿಂದ ಯುಕ್ತವಾದ ಧರ್ಮವು ವೃಷರೂಪಿಯಾಗಿ ನಾನೇ ಆಗಿದ್ದೆ. ಆಗ ನಿಷ್ಠಾವರೂ, ಪರಮ ತಪಸ್ವಿಗಳೂ ಆದ ಭಕ್ತಜನರು ಹಂಸ ಸ್ವರೂಪಿಯೂ, ಶುದ್ಧ ಪರಮಾತ್ಮನೂ ಆದ ನನ್ನನ್ನು ಉಪಾಸಿಸುತ್ತಿದ್ದರು. ॥ ೧೧ ॥ ಪರಮ ಭಾಗ್ಯಶಾಲಿಯಾದ ಉದ್ಧವನೇ! ಕೃತಯುಗದ ಬಳಿಕ ತ್ರೇತಾಯುಗದ ಪ್ರಾರಂಭದಲ್ಲಿ ನನ್ನ ಹೃದಯದಿಂದ ಪ್ರಾಣಗಳ ಮೂಲಕ ಋಗ್ವೇದ, ಸಾಮವೇದ, ಯಜುರ್ವೇದರೂಪೀ ತ್ರಯೀ ವಿದ್ಯೆ ಪ್ರಕಟವಾಯಿತು ಮತ್ತು ಆ ತ್ರಯೀ ವಿದ್ಯೆಯಿಂದ ಹೋತಾ, ಅಧ್ವರ್ಯು, ಉದ್ಗಾತಾ ಇವರ ಕರ್ಮರೂಪೀ ಮೂರು ಭೇದಗಳುಳ್ಳ ಯಜ್ಞದ ರೂಪದಲ್ಲಿ ನಾನೇ ಪ್ರಕಟನಾದೆ. ॥ ೧೨ ॥ ವಿರಾಟ್‌ಪುರುಷನ ಮುಖದಿಂದ ಬ್ರಾಹ್ಮಣರು, ಭುಜದಿಂದ ಕ್ಷತ್ರಿಯರು, ತೊಡೆಯಿಂದ ವೈಶ್ಯರು, ಚರಣಗಳಿಂದ ಶೂದ್ರರ ಉತ್ಪತ್ತಿಯಾಯಿತು. ಅವರ ಸ್ವಭಾವಕ್ಕನುಸಾರ ಹಾಗೂ ಆಚರಣಗಳಿಂದ ಅವರ ಪರಿಚಯವಾಗುತ್ತದೆ. ॥ ೧೩ ॥ ಉದ್ಧವನೇ! ವಿರಾಟ್‌ಪುರುಷನಾದ ನನ್ನ ತೊಡೆಯಿಂದ ಗೃಹಸ್ಥಾಶ್ರಮವು, ಹೃದಯದಿಂದ ಬ್ರಹ್ಮಚರ್ಯಾಶ್ರಮವೂ, ವಕ್ಷಸ್ಥಳದಿಂದ ವಾನಪ್ರಸ್ಥಾಶ್ರಮವೂ, ಮಸ್ತಕದಿಂದ ಸಂನ್ಯಾಸಾಶ್ರಮವೂ ಉಂಟಾಯಿತು. ॥ ೧೪ ॥

ಈ ವರ್ಣ ಮತ್ತು ಆಶ್ರಮಗಳ ಪುರುಷರ ಸ್ವಭಾವವೂ ಇವರ ಜನ್ಮಸ್ಥಾನಕ್ಕನುಸಾರವೇ ಉತ್ತಮ, ಮಧ್ಯಮ, ಅಧಮ ವೆಂದಾಯಿತು. ಅರ್ಥಾತ್ – ಉತ್ತಮ ಸ್ಥಾನದಿಂದ ಉತ್ಪನ್ನವಾಗುವ ವರ್ಣ ಮತ್ತು ಆಶ್ರಮಗಳ ಸ್ವಭಾವವು ಉತ್ತಮವಾಯಿತು. ಅಧಮ ಸ್ಥಾನದಿಂದ ಉತ್ಪನ್ನರಾದವರ ಸ್ವಭಾವ ಅಧಮವಾಯಿತು. ॥ ೧೫ ॥ ಶಮ, ದಮ, ತಪಸ್ಸು, ಪವಿತ್ರತೆ, ಸಂತೋಷ, ಕ್ಷಮಾಶೀಲತೆ, ಸರಳತೆ, ನನ್ನ ಭಕ್ತಿ, ದಯೆ ಮತ್ತು ಸತ್ಯ – ಇವು ಬ್ರಾಹ್ಮಣವರ್ಣದ ಸ್ವಭಾವವಾಗಿದೆ. ॥ ೧೬ ॥ ತೇಜ, ಬಲ, ಧೈರ್ಯ, ಶೌರ್ಯ, ಸಹನಶೀಲತೆ, ಉದಾರತೆ, ಉದ್ಯೋಗಶೀಲತೆ, ಸ್ಥಿರತೆ, ಬ್ರಾಹ್ಮಣಭಕ್ತಿ, ಐಶ್ವರ್ಯ – ಇವು ಕ್ಷತ್ರಿಯ ಧರ್ಮದ ಸ್ವಾಭಾವಿಕ ಸ್ವಭಾವವಾಗಿವೆ. ॥ ೧೭॥ ಆಸ್ತಿಕತೆ, ದಾನಶೀಲತೆ, ದಂಭಹೀನತೆ, ಬ್ರಾಹ್ಮಣರ ಸೇವೆಮಾಡುವುದು ಮತ್ತು ಧನಸಂಚಯದಿಂದ ಸಂತುಷ್ಟನಾಗುವುದು – ಇವು ವೈಶ್ಯವರ್ಣದ ಸ್ವಭಾವವಾಗಿದೆ. ॥ ೧೮ ॥ ಬ್ರಾಹ್ಮಣ, ಗೋವು ಮತ್ತು ದೇವತೆಗಳ ಸೇವೆಯನ್ನು ನಿಷ್ಕಪಟವಾಗಿ ಮಾಡುವುದು ಹಾಗೂ ಅದರಿಂದ ಏನು ಸಿಗುವುದೋ ಅದರಲ್ಲಿ ಸಂತುಷ್ಟನಾಗಿರುವುದು – ಇವು ಶೂದ್ರವರ್ಣದ ಸ್ವಭಾವವಾಗಿದೆ. ॥ ೧೯ ॥ ಅಪವಿತ್ರತೆ, ಸುಳ್ಳು ಹೇಳುವುದು, ಕಳ್ಳತನ ಮಾಡುವುದು, ಈಶ್ವರ ಮತ್ತು ಪರಲೋಕದ ಪರಿವೆ ಇಲ್ಲದಿರುವುದು, ಸುಳ್ಳು-ಪಳ್ಳು ಜಗಳ ಕಾದುವುದು, ಕಾಮ, ಕ್ರೋಧ, ತೃಷ್ಣೆಯ ವಶವಾಗುವುದು – ಇವು ಅಂತ್ಯಜರ ಸ್ವಭಾವವಾಗಿದೆ. ॥ ೨೦ ॥

ಅಹಿಂಸಾ ಸತ್ಯಮಸ್ತೇಯಮಕಾಮಕ್ರೋಧಲೋಭತಾ ।
ಭೂತಪ್ರಿಯಹಿತೇಹಾ ಚ ಧರ್ಮೋಽಯಂ ಸಾರ್ವವರ್ಣಿಕಃ
॥ ೨೦ ॥

ದ್ವಿತೀಯಂ ಪ್ರಾಪ್ಯಾನುಪೂರ್ವ್ಯಾಜ್ಜನ್ಮೋಪನಯನಂ ದ್ವಿಜಃ ।
ವಸನ್ ಗುರುಕುಲೇ ದಾಂತೋ ಬ್ರಹ್ಮಾಧೀಯೀತ ಚಾಹುತಃ
॥ ೨೧ ॥

ಮೇಖಲಾಜಿನದಂಡಾಕ್ಷಬ್ರಹ್ಮಸೂತ್ರಕಮಂಡಲೂನ್ ।
ಜಟಿಲೋಽಧೌತದದ್ವಾಸೋಽರಕ್ತಪೀಠಃ ಕುಶಾನ್ ದಧತ್
॥ ೨೨ ॥

ಸ್ನಾನಭೋಜನಹೋಮೇಷು ಜಪೋಚ್ಚಾರೇ ಚ ವಾಗ್ಯತಃ ।
ನಚ್ಛಿಂದ್ಯಾನ್ನಖರೋಮಾಣಿ ಕಕ್ಷೋಪಸ್ಥಗತಾನ್ಯಪಿ
॥ ೨೩ ॥

ರೇತೋ ನಾವಕಿರೇಜ್ಜಾತು ಬ್ರಹ್ಮವ್ರತಧರಃ ಸ್ವಯಮ್ ।
ಅವಕೀರ್ಣೇಽವಗಾಹ್ಯಾಪ್ಸು ಯತಾಸುಸ್ತ್ರಿಪದೀಂ ಜಪೇತ್
॥ ೨೪ ॥

ಅಗ್ನ್ಯರ್ಕಾಚಾರ್ಯಗೋವಿಪ್ರಗುರುವೃದ್ಧಸುರಾನ್ಶುಚಿಃ ।
ಸಮಾಹಿತ ಉಪಾಸೀತ ಸಂಧ್ಯೇ ಚ ಯತವಾಗ್ಜಪನ್
॥ ೨೫ ॥

ಆಚಾರ್ಯಂ ಮಾಂ ವಿಜಾನೀಯಾನ್ನಾವಮನ್ಯೇತ ಕರ್ಹಿಚಿತ್ ।
ನ ಮರ್ತ್ಯಬುದ್ಧ್ಯಾಸೂಯೇತ ಸರ್ವದೇವಮಯೋ ಗುರುಃ
॥ ೨೬ ॥

ಸಾಯಂ ಪ್ರಾತರುಪಾನೀಯ ಭೈಕ್ಷ್ಯಂ ತಸ್ಮೈ ನಿವೇದಯೇತ್ ।
ಯಚ್ಚಾನ್ಯದಪ್ಯನುಜ್ಞಾತಮುಪಯುಂಜೀತ ಸಂಯತಃ
॥ ೨೭ ॥

ಶುಶ್ರೂಷಮಾಣ ಆಚಾರ್ಯಂ ಸದೋಪಾಸೀತ ನೀಚವತ್ ।
ಯಾನಶಯ್ಯಾಸನಸ್ಥಾನೈರ್ನಾತಿದೂರೇ ಕೃತಾಂಜಲಿಃ
॥ ೨೮ ॥

ಉದ್ಧವನೇ ! ನಾಲ್ಕೂ ವರ್ಣಗಳಿಗೆ ಮತ್ತು ನಾಲ್ಕೂ ಆಶ್ರಮಗಳಿಗೆ – ಮನ, ವಾಣಿ ಮತ್ತು ಶರೀರದಿಂದ ಯಾರನ್ನೂ ಹಿಂಸಿಸದಿರುವುದು, ಸತ್ಯದಲ್ಲಿ ದೃಢವಾಗಿರುವುದು, ಕಳ್ಳತನ ಮಾಡದಿರುವುದು, ಕಾಮ, ಕ್ರೋಧ, ಲೋಭದಿಂದ ಬದುಕುಳಿದು, ಸಮಸ್ತ ಪ್ರಾಣಿಗಳ ಪ್ರಸನ್ನತೆ, ಅವರ ಒಳಿತು ಆಗುವಂತಹ ಕೆಲಸಗಳನ್ನೇ ಮಾಡುವುದು – ಇವು ಸಾಧಾರಣ ಧರ್ಮಗಳಾಗಿವೆ. ॥ ೨೦ ॥ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಇವರು ಗರ್ಭಾಧಾನಾದಿ ಸಂಸ್ಕಾರಗಳ ಕ್ರಮದಿಂದ ಉಪನಯನ ಸಂಸ್ಕಾರರೂಪೀ ದ್ವಿತೀಯ ಜನ್ಮವನ್ನು ಪಡೆದು ಗುರುಕುಲದಲ್ಲಿ ಇದ್ದು, ತಮ್ಮ ಇಂದ್ರಿಯಗಳನ್ನು ವಶದಲ್ಲಿರಿಸಿ ಕೊಳ್ಳಬೇಕು. ಆಚಾರ್ಯರಿಂದ ವೇದಾಧ್ಯಯನ ಗೈದು, ಅದರ ಅರ್ಥವನ್ನೂ ವಿಚಾರಮಾಡಬೇಕು. ॥ ೨೧ ॥ ಮೇಖಲೆ, ಮೃಗಚರ್ಮ, ವರ್ಣಕ್ಕನುಸಾರ ದಂಡ, ರುದ್ರಾಕ್ಷದ ಮಾಲೆ, ಯಜ್ಞೋಪವೀತ ಮತ್ತು ಕಮಂಡಲು ಧರಿಸಬೇಕು. ತಲೆಯಲ್ಲಿ ಶಿಖೆ ಇರಿಸಿಕೊಳ್ಳಬೇಕು. ದಂತಧಾವನ ಮತ್ತು ಬಟ್ಟೆ ತೊಳೆಯುವ ಹವ್ಯಾಸವಿರಬಾರದು. ಬಣ್ಣ-ಬಣ್ಣದ ಆಸನದಲ್ಲಿ ಕುಳಿತುಕೊಳ್ಳಬಾರದು. ಕುಶವನ್ನು ಧರಿಸಿಕೊಳ್ಳಬೇಕು. ॥ ೨೨ ॥ ಸ್ನಾನ, ಭೋಜನ, ಹವನ, ಜಪ ಹಾಗೂ ಮಲ-ಮೂತ್ರದ ಸಮಯದಲ್ಲಿ ಮೌನವಾಗಿರಬೇಕು. ಕಕ್ಷ ಮತ್ತು ಗುಹ್ಯೇಂದ್ರಿಯದ ಕೂದಲುಗಳನ್ನು ಮತ್ತು ಉಗುರುಗಳನ್ನು ಎಂದೂ ಕತ್ತರಿಸಬಾರದು.॥ ೨೩ ॥ ಪೂರ್ಣರೂಪದಿಂದ ಬ್ರಹ್ಮಚರ್ಯವನ್ನು ಪಾಲಿಸಬೇಕು. ಸ್ವತಃ ವೀರ್ಯಪಾತವನ್ನು ಎಂದೂ ಮಾಡಿಕೊಳ್ಳಬಾರದು. ಸ್ವಪ್ನಾದಿಗಳಲ್ಲಿ ವೀರ್ಯಸ್ಖಲನವಾದರೆ ನೀರಿನಲ್ಲಿ ಸ್ನಾನಮಾಡಿ, ಪ್ರಾಣಾಯಾಮ ಮಾಡಿ, ಗಾಯತ್ರಿಯನ್ನು ಜಪಿಸಬೇಕು. ॥ ೨೪ ॥ ಬ್ರಹ್ಮಚಾರಿಯು ಪವಿತ್ರತೆಯಿಂದ ಏಕಾಗ್ರಚಿತ್ತನಾಗಿ ಅಗ್ನಿ, ಸೂರ್ಯ, ಆಚಾರ್ಯ, ಗೋವು, ಬ್ರಾಹ್ಮಣ, ಗುರು, ಹಿರಿಯರು ಹಾಗೂ ದೇವತೆಗಳನ್ನು ಉಪಾಸಿಸಬೇಕು. ಸಾಯಂಕಾಲ ಮತ್ತು ಪ್ರಾತಃಕಾಲಗಳಲ್ಲಿ ಮೌನವಾಗಿದ್ದು ಸಂಧ್ಯೋ ಪಾಸನೆ ಮಾಡಿ ಗಾಯತ್ರಿಜಪವನ್ನು ಮಾಡಬೇಕು. ॥ ೨೫ ॥ ಆಚಾರ್ಯರನ್ನು ನನ್ನ ಸ್ವರೂಪವೆಂದೇ ತಿಳಿದು, ಎಂದೂ ಅವರ ತಿರಸ್ಕಾರ ಮಾಡಬಾರದು. ಅವರನ್ನು ಸಾಮಾನ್ಯ ಮನುಷ್ಯನೆಂದು ತಿಳಿದು ದೋಷ ದೃಷ್ಟಿ ಇರಿಸಬಾರದು. ಏಕೆಂದರೆ ಗುರುವು ಸರ್ವದೇವಮಯನಾಗಿರುವನು. ॥ ೨೬ ॥ ಸಾಯಂಕಾಲ ಮತ್ತು ಪ್ರಾತಃಕಾಲ ಎರಡೂ ಹೊತ್ತು ಭಿಕ್ಷೆಯಲ್ಲಿ ದೊರೆತುದನ್ನು ತಂದು ಗುರುಗಳ ಮುಂದಿರಿಸಿ, ಇನ್ನೇನಾದರೂ ಇದ್ದರೂ ಅದನ್ನೂ ಗುರುಗಳಿಗೆ ನಿವೇದಿಸಬೇಕು. ಅವರ ಅಪ್ಪಣೆಯ ಬಳಿಕವೇ ಅದನ್ನು ಉಪಯೋಗಿಸಬೇಕು. ॥ ೨೭ ॥ ಆಚಾರ್ಯರು ನಡೆದು ಹೋಗುತ್ತಿದ್ದರೆ, ಅವರ ಹಿಂದೆ-ಹಿಂದೆ ನಡೆಯಬೇಕು. ಅವರು ಮಲಗಿದ ಬಳಿಕವೇ ತುಂಬಾ ಎಚ್ಚರಿಕೆಯಿಂದ ಅವರಿಂದ ಸ್ವಲ್ಪ ದೂರದಲ್ಲಿ ಮಲಗಬೇಕು. ಅವರು ಬಳಲಿದ್ದರೆ ಹತ್ತಿರ ಕುಳಿತು ಪಾದಸೇವೆ (ಕಾಲು ಒತ್ತುವುದು) ಮಾಡಬೇಕು. ಅವರು ಕುಳಿತಿದ್ದರೆ ಅವರ ಆದೇಶವನ್ನು ನಿರೀಕ್ಷಿಸುತ್ತಾ ಕೈ ಜೋಡಿಸಿಕೊಂಡು ಹತ್ತಿರದಲ್ಲೇ ನಿಂತಿರಬೇಕು. ಹೀಗೆ ಅತ್ಯಂತ ನಮ್ರನಾಗಿ ಸೇವೆ-ಶುಶ್ರೂಷೆಗಳಿಂದ ಸದಾಕಾಲ ಆಚಾರ್ಯರ ಆಜ್ಞೆಯಲ್ಲಿ ತತ್ಪರನಾಗಿರಬೇಕು. ॥ ೨೮ ॥

ಏವಂವೃತ್ತೋ ಗುರುಕುಲೇ ವಸೇದ್ಭೋಗವಿವರ್ಜಿತಃ ।
ವಿದ್ಯಾ ಸಮಾಪ್ಯತೇ ಯಾವದ್ಬಿಭ್ರದ್ವ್ರತಮಖಂಡಿತಮ್
॥ ೩೦ ॥

ಯದ್ಯಸೌ ಛಂದಸಾಂ ಲೋಕಮಾರೋಕ್ಷ್ಯನ್ ಬ್ರಹ್ಮವಿಷ್ಟಪಮ್ ।
ಗುರವೇ ವಿನ್ಯಸೇದ್ದೇಹಂ ಸ್ವಾಧ್ಯಾಯಾರ್ಥಂ ಬೃಹದ್ವ್ರತಃ
॥ ೩೧ ॥

ಅಗ್ನೌ ಗುರಾವಾತ್ಮನಿ ಚ ಸರ್ವಭೂತೇಷು ಮಾಂ ಪರಮ್ ।
ಅಪೃಥಗ್ಧೀರುಪಾಸೀತ ಬ್ರಹ್ಮವರ್ಚಸ್ವ್ಯಕಲ್ಮಷಃ
॥ ೩೨ ॥

ಸ್ತ್ರೀಣಾಂ ನಿರೀಕ್ಷಣಸ್ಪರ್ಶಸಂಲಾಪಕ್ಷ್ವೇಲನಾದಿಕಮ್ ।
ಪ್ರಾಣಿನೋ ಮಿಥುನೀಭೂತಾನಗೃಹಸ್ಥೋಽಗ್ರತಸ್ತ್ಯಜೇತ್
॥ ೩೩ ॥

ಶೌಚಮಾಚಮನಂ ಸ್ನಾನಂಸಂಧ್ಯೋಪಾಸನಮಾರ್ಜವಮ್ ।
ತೀರ್ಥಸೇವಾ ಜಪೋಽಸ್ಪೃಶ್ಯಾಭಕ್ಷ್ಯಾಸಂಭಾಷ್ಯವರ್ಜನಮ್
॥ ೩೪ ॥

ಸರ್ವಾಶ್ರಮಪ್ರಯುಕ್ತೋಽಯಂ ನಿಯಮಃ ಕುಲನಂದನ ।
ಮದ್ಭಾವಃ ಸರ್ವಭೂತೇಷು ಮನೋವಾಕ್ಕಾಯಸಂಯಮಃ
॥ ೩೫ ॥

ಏವಂ ಬೃಹದ್ವ್ರತಧರೋ ಬ್ರಾಹ್ಮಣೋಽಗ್ನಿರಿವ ಜ್ವಲನ್ ।
ಮದ್ಭಕ್ತಸ್ತೀವ್ರತಪಸಾ ದಗ್ಧಕರ್ಮಾಶಯೋಽಮಲಃ
॥ ೩೬ ॥

ಅಥಾನಂತರಮಾವೇಕ್ಷ್ಯನ್ ಯಥಾ ಜಿಜ್ಞಾಸಿತಾಗಮಃ ।
ಗುರವೇ ದಕ್ಷಿಣಾಂ ದತ್ತ್ವಾ ಸ್ನಾಯಾದ್ಗುರ್ವನುಮೋದಿತಃ
॥ ೩೭ ॥

ಗೃಹಂ ವನಂ ವೋಪವಿಶೇತ್ ಪ್ರವ್ರಜೇದ್ವಾ ದ್ವಿಜೋತ್ತಮಃ ।
ಆಶ್ರಮಾದಾಶ್ರಮಂ ಗಚ್ಛೇನ್ನಾನ್ಯಥಾ ಮತ್ಪರಶ್ಚರೇತ್
॥ ೩೮ ॥

ವಿದ್ಯಾಧ್ಯಯನವು ಸಮಾಪ್ತವಾಗುವ ತನಕ ಎಲ್ಲ ರೀತಿಯ ಭೋಗಗಳಿಂದ ದೂರವಿದ್ದು, ಇದೇ ಪ್ರಕಾರ ಗುರುಕುಲದಲ್ಲಿ ವಾಸಿಸಬೇಕು. ಎಂದಿಗೂ ತನ್ನ ಬ್ರಹ್ಮಚರ್ಯವನ್ನು ಭಂಗಗೊಳಿಸಬಾರದು. ॥ ೩೦ ॥ ಬ್ರಹ್ಮಚಾರಿಯು ಮೂರ್ತಿಮಂತ ವೇದಗಳ ನಿವಾಸಸ್ಥಾನವಾದ ಬ್ರಹ್ಮಲೋಕಕ್ಕೆ ಹೋಗಲು ಬಯಸಿದರೆ, ಅವನು ಆಜೀವನ ಬ್ರಹ್ಮಚರ್ಯವ್ರತವನ್ನು ಕೈಗೊಳ್ಳಬೇಕು ಹಾಗೂ ವೇದಗಳ ಸ್ವಾಧ್ಯಾಯಕ್ಕಾಗಿ ತನ್ನ ಇಡೀ ಜೀವನವನ್ನು ಆಚಾರ್ಯರ ಸೇವೆಯಲ್ಲೇ ಸಮರ್ಪಿಸಿ ಕೊಳ್ಳಬೇಕು. ॥ ೩೧ ॥ ಇಂತಹ ಬ್ರಹ್ಮಚಾರಿಯು ನಿಜವಾಗಿಯೂ ಬ್ರಹ್ಮತೇಜದಿಂದ ಸಂಪನ್ನನಾಗಿ, ಅವನ ಎಲ್ಲ ಪಾಪಗಳು ನಾಶವಾಗಿ ಹೋಗುತ್ತವೆ. ಅವನು ಅಗ್ನಿ, ಗುರು, ತನ್ನ ಶರೀರ ಮತ್ತು ಸಮಸ್ತ ಪ್ರಾಣಿಗಳಲ್ಲಿ ನನ್ನನ್ನೇ ಉಪಾಸಿಸಬೇಕು. ನನ್ನ ಹಾಗೂ ಎಲ್ಲರ ಹೃದಯದಲ್ಲಿ ಒಂದೇ ಪರಮಾತ್ಮನು ವಿರಾಜಮಾನನಾಗಿದ್ದಾನೆ ಎಂದು ಭಾವಿಸಬೇಕು. ॥ ೩೨ ॥ ಬ್ರಹ್ಮಚಾರೀ, ವಾನಪ್ರಸ್ಥ, ಸಂನ್ಯಾಸಿಗಳು ಸ್ತ್ರೀಯರನ್ನು ನೋಡುವುದು, ಸ್ಪರ್ಶಿಸುವುದು, ಅವರೊಂದಿಗೆ ಮಾತು-ಕತೆಯಾಡುವುದು, ಹಾಸ್ಯ-ವಿನೋದ ಮುಂತಾದವುಗಳಿಂದ ದೂರವುಳಿಯಬೇಕು. ಮೈಥುನದಲ್ಲಿ ತೊಡಗಿರುವ ಪ್ರಾಣಿಗಳ ಕಡೆಗೆ ಕಣ್ಣೆತ್ತಿಯೂ ನೋಡಬಾರದು. ॥ ೩೩ ॥ ಪ್ರಿಯ ಉದ್ಧವನೇ! ಶೌಚ, ಆಚಮನ, ಸ್ನಾನ, ಸಂಧ್ಯೋಪಾಸನೆ, ಸರಳತೆ, ತೀರ್ಥಸೇವನೆ, ಜಪ, ಸಮಸ್ತ ಪ್ರಾಣಿಗಳಲ್ಲಿ ನನ್ನನ್ನೇ ನೋಡುವುದು, ಮನ, ವಾಣೀ, ಶರೀರದ ಸಂಯಮ – ಇವು ಬ್ರಹ್ಮಚಾರೀ, ಗೃಹಸ್ಥ ವಾನಪ್ರಸ್ಥ, ಸಂನ್ಯಾಸಿ ಎಲ್ಲರಿಗಾಗಿ ಒಂದೇ ನಿಯಮಗಳಾಗಿವೆ. ಅಸ್ಪೃಶ್ಯರನ್ನು ಮುಟ್ಟದಿರುವುದು, ಅಭಕ್ಷ್ಯ ವಸ್ತುಗಳನ್ನು ತಿನ್ನದಿರುವುದು, ಯಾರೊಂದಿಗೆ ಮಾತಾಡಬಾರದೋ ಅವರೊಂದಿಗೆ ಮಾತಾಡದೇ ಇರುವುದು, ಈ ನಿಯಮಗಳೂ ಕೂಡ ಎಲ್ಲರಿಗಾಗಿಯೇ ಇವೆ. ॥ ೩೪-೩೫ ॥ ನೈಷ್ಠಿಕ ಬ್ರಹ್ಮಚಾರೀ ಬ್ರಾಹ್ಮಣನು ಈ ನಿಯಮಗಳನ್ನು ಪಾಲಿಸುವುದರಿಂದ ಅಗ್ನಿಯಂತೆ ತೇಜಸ್ವೀಯಾಗುತ್ತಾನೆ. ತೀವ್ರ ತಪಸ್ಸಿನ ಕಾರಣ ಅವನ ಕರ್ಮ-ಸಂಸ್ಕಾರಗಳು ಭಸ್ಮವಾಗಿ ಹೋಗುತ್ತವೆ. ಅಂತಃಕರಣ ಶುದ್ಧವಾಗುತ್ತದೆ. ಅವನು ನನ್ನ ಭಕ್ತನಾಗಿ ನನ್ನನ್ನೇ ಪಡೆದುಕೊಳ್ಳುತ್ತಾನೆ. ॥ ೩೬ ॥

ಪ್ರಿಯ ಉದ್ಧವನೇ! ಬ್ರಹ್ಮಚಾರಿಯು ಗೃಹಸ್ಥಾಶ್ರಮದಲ್ಲಿ ಪ್ರವೇಶಿಸಲು ಬಯಸಿದರೆ ವಿಧಿಪೂರ್ವಕ ವೇದಾಧ್ಯಯನವನ್ನು ಮುಗಿಸಿ, ಆಚಾರ್ಯರಿಗೆ ದಕ್ಷಿಣೆಯನ್ನಿತ್ತು, ಅವರ ಅನುಮತಿ ಪಡೆದು ಸಮಾವರ್ತನ ಸಂಸ್ಕಾರ ಮಾಡಿಕೊಂಡು, ಸ್ನಾತಕನಾಗಿ ಗೃಹಸ್ಥಾಶ್ರಮವನ್ನು ಸ್ವೀಕರಿಸಬೇಕು. ॥ ೩೭ ॥ ಬ್ರಹ್ಮಚಾರಿಯು ಬ್ರಹ್ಮಚರ್ಯಾಶ್ರಮದ ಬಳಿಕ ಬೇಕಾದರೆ ಗೃಹಸ್ಥ ಅಥವಾ ವಾನಪ್ರಸ್ಥ ಆಶ್ರಮವನ್ನು ಪ್ರವೇಶಿಸಲಿ. ಬ್ರಾಹ್ಮಣನಾಗಿದ್ದರೆ ಸಂನ್ಯಾಸವನ್ನು ಸ್ವೀಕರಿಸಲಿ, ಅಥವಾ ಕ್ರಮವಾಗಿ ಒಂದು ಆಶ್ರಮದಿಂದ ಮತ್ತೊಂದು ಆಶ್ರಮವನ್ನೂ ಪ್ರವೇಶಿಸಲಿ. ನನ್ನ ಪರಾಯಣನಾದ ಭಕ್ತನು ಎಂದೂ ಆಶ್ರಮವಿಲ್ಲದೆ ಇರಬಾರದು. ಮನಬಂದಂತೆ ಆಶ್ರಮ ಬದಲಾವಣೆ ಮಾಡುವ ಉಚ್ಛೃಂಖಲ ಪ್ರವೃತ್ತಿಯೂ ಸಲ್ಲದು. ॥ ೩೮ ॥

ಗೃಹಾರ್ಥೀ ಸದೃಶೀಂ ಭಾರ್ಯಾಮುದ್ವಹೇದಜುಗುಪ್ಸಿತಾಮ್ ।
ಯವೀಯಸೀಂ ತು ವಯಸಾ ತಾಂ ಸವರ್ಣಾಮನುಕ್ರಮಾತ್ ॥ ೩೯ ॥

ಇಜ್ಯಾಧ್ಯಯನದಾನಾನಿ ಸರ್ವೇಷಾಂ ಚ ದ್ವಿಜನ್ಮನಾಮ್ ।
ಪ್ರತಿಗ್ರಹೋಽಧ್ಯಾಪನಂ ಚ ಬ್ರಾಹ್ಮಣಸ್ಯೈವ ಯಾಜನಮ್ ॥ ೪೦ ॥

ಪ್ರತಿಗ್ರಹಂ ಮನ್ಯಮಾನಸ್ತಪಸ್ತೇಜೋಯಶೋನುದಮ್ ।
ಅನ್ಯಾಭ್ಯಾಮೇವ ಜೀವೇತ ಶಿಲೈರ್ವಾ ದೋಷದೃಕ್ ತಯೋಃ ॥ ೪೧ ॥

ಬ್ರಾಹ್ಮಣಸ್ಯ ಹಿ ದೇಹೋಽಯಂ ಕ್ಷುದ್ರಕಾಮಾಯ ನೇಷ್ಯತೇ ।
ಕೃಚ್ಛ್ರಾಯ ತಪಸೇ ಚೇಹ ಪ್ರೇತ್ಯಾನಂತಸುಖಾಯ ಚ ॥ ೪೨ ॥

ಶಿಲೋಂಛವೃತ್ತ್ಯಾ ಪರಿತುಷ್ಟಚಿತ್ತೋ
ಧರ್ಮಂ ಮಹಾಂತಂ ವಿರಜಂ ಜುಷಾಣಃ ।
ಮಯ್ಯರ್ಪಿತಾತ್ಮಾ ಗೃಹ ಏವ ತಿಷ್ಠ-
ನ್ನಾತಿಪ್ರಸಕ್ತಃ ಸಮುಪೈತಿ ಶಾಂತಿಮ್ ॥ ೪೩ ॥

ಸಮುದ್ಧರಂತಿ ಯೇ ವಿಪ್ರಂ ಸೀದಂತಂ ಮತ್ಪರಾಯಣಮ್ ।
ತಾನುದ್ಧರಿಷ್ಯೇ ನಚಿರಾದಾಪದ್ಭ್ಯೋ ನೌರಿವಾರ್ಣವಾತ್ ॥ ೪೪ ॥

ಸರ್ವಾಃ ಸಮುದ್ಧರೇದ್ರಾಜಾ ಪಿತೇವ ವ್ಯಸನಾತ್ಪ್ರಜಾಃ ।
ಆತ್ಮಾನಮಾತ್ಮನಾ ಧೀರೋ ಯಥಾ ಗಜಪತಿರ್ಗಜಾನ್ ॥ ೪೫ ॥

ಏವಂವಿಧೋ ನರಪತಿರ್ವಿಮಾನೇನಾರ್ಕವರ್ಚಸಾ ।
ವಿಧೂಯೇಹಾಶುಭಂ ಕೃತ್ಸ್ನಮಿಂದ್ರೇಣ ಸಹ ಮೋದತೇ ॥ ೪೬ ॥

ಪ್ರಿಯ ಉದ್ಧವನೇ! ಬ್ರಹ್ಮಚಾರಿಯು ಬ್ರಹ್ಮಚರ್ಯಾಶ್ರಮದ ಬಳಿಕ ಗೃಹಸ್ಥಾಶ್ರಮವನ್ನು ಸ್ವೀಕರಿಸುವುದಿದ್ದರೆ, ತನಗೆ ಅನುರೂಪ ಹಾಗೂ ಶಾಸ್ತ್ರೋಕ್ತ ಲಕ್ಷಣಗಳಿಂದ ಕೂಡಿದ ಕುಲೀನ ಕನ್ಯೆಯೊಂದಿಗೆ ವಿವಾಹಿತನಾಗಬೇಕು. ಅವಳು ತನ್ನ ವಯಸ್ಸಿನಿಂದ ಕಿರಿಯವಳು ಮತ್ತು ತನ್ನ ವರ್ಣದವಳೇ ಆಗಿರಬೇಕು. ॥ ೩೯ ॥ ಯಜ್ಞ-ಯಾಗಾದಿ ಮಾಡುವುದು, ಅಧ್ಯಯನ, ದಾನಮಾಡುವ ಅಧಿಕಾರ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಿಗೆ ಸಮಾನವಾಗಿ ಇದೆ. ಆದರೆ ದಾನ ಪಡೆಯುವುದು, ಕಲಿಸುವುದು, ಯಜ್ಞಮಾಡಿಸುವ ಅಧಿಕಾರ ಕೇವಲ ಬ್ರಾಹ್ಮಣರಿಗೇ ಇದೆ. ॥ ೪೦ ॥ ಬ್ರಾಹ್ಮಣನು ಈ ಮೂರು ವೃತ್ತಿಗಳಲ್ಲಿ ಪ್ರತಿಗ್ರಹ ಅರ್ಥಾತ್ – ದಾನ ಪಡೆಯುವ ವೃತ್ತಿಯು ತಪಸ್ಸು, ತೇಜ, ಕೀರ್ತಿ ಇವುಗಳನ್ನು ನಾಶಮಾಡುವುದೆಂದು ತಿಳಿದಿದ್ದರೆ, ಅವನು ಕಲಿಸುವುದು, ಯಜ್ಞಮಾಡಿಸುವ ಮೂಲಕವೇ ತನ್ನ ಜೀವನನಿರ್ವಾಹ ಮಾಡಲಿ. ಈ ಎರಡರಲ್ಲಿಯೂ ದೋಷದೃಷ್ಟಿ – ಪರಾವಲಂಬನೆ, ದೀನತೆ ಮುಂತಾದ ದೋಷಗಳು ಕಂಡುಬಂದರೆ, ಪೈರು ಕತ್ತರಿಸಿದ ಬಳಿಕ ಹೊಲದಲ್ಲಿ ಬಿದ್ದಿರುವ ಧಾನ್ಯವನ್ನು ಹೆಕ್ಕಿತಂದು ತನ್ನ ಜೀವನನಿರ್ವಾಹ ಮಾಡಲಿ. ॥ ೪೧ ॥ ಉದ್ಧವನೇ! ಬ್ರಾಹ್ಮಣನ ಶರೀರವು ಅತ್ಯಂತ ದುರ್ಲಭವಾಗಿದೆ. ಇದು ತುಚ್ಛವಾದ ಭೋಗಗಳನ್ನು ಭೋಗಿಸಲಿಕ್ಕಾಗಿ ದೊರೆತುದಲ್ಲ. ಜೀವನವಿಡೀ ಕಠಿಣ ತಪಸ್ಸನ್ನಾಚರಿಸುತ್ತಾ ಕೊನೆಗೆ ಅನಂತ ಆನಂದಸ್ವರೂಪೀ ಮೋಕ್ಷವನ್ನು ಪಡೆಯಲೆಂದೇ ಇದೆ. ॥ ೪೨ ॥

ಬ್ರಾಹ್ಮಣನಾದವನು ಮನೆಯಲ್ಲೇ ಇದ್ದು ತನ್ನ ಮಹಾನ್ ಧರ್ಮವನ್ನು ನಿಷ್ಕಾಮವಾಗಿ ಆಚರಿಸುತ್ತಾ , ಹೊಲದಲ್ಲಿ ಬಿದ್ದಿರುವ ಕಾಳುಗಳನ್ನು ಅಥವಾ ಮಂಡಿಯಲ್ಲಿ ಬಿದ್ದಿರುವ ಕಾಳುಗಳನ್ನು ಹೆಕ್ಕಿತಂದು ಸಂತೋಷವಾಗಿ ತನ್ನ ಜೀವನ ನಿರ್ವಾಹ ಮಾಡುವವನು, ಜೊತೆಗೆ ತನ್ನ ಶರೀರ, ಪ್ರಾಣ, ಅಂತಃಕರಣ ಮತ್ತು ಆತ್ಮವನ್ನು ನನ್ನಲ್ಲಿ ಸಮರ್ಪಿಸುವವನು, ಎಲ್ಲಿಯೂ ಆಸಕ್ತಿಯನ್ನಿಡದವನು ಸಂನ್ಯಾಸ ಸ್ವೀಕರಿಸದೆಯೇ ಪರಮ ಶಾಂತಿ ಸ್ವರೂಪೀ ಪರಮಪದವನ್ನು ಪಡೆದುಕೊಳ್ಳುತ್ತಾನೆ. ॥ ೪೩॥ ವಿಪತ್ತಿ ನಲ್ಲಿ ಬಿದ್ದು ಕಷ್ಟಪಡುವ ನನ್ನ ಭಕ್ತ ಬ್ರಾಹ್ಮಣನನ್ನು ವಿಪತ್ತಿನಿಂದ ಕಾಪಾಡುವವನನ್ನು ನಾನು ಶೀಘ್ರವಾಗಿ, ಸಮುದ್ರದಲ್ಲಿ ಮುಳು ಗುವ ಪ್ರಾಣಿಯನ್ನು ದೋಣಿಯು ಪಾರಾಗಿಸುವಂತೆ, ಅವನನ್ನು ಎಲ್ಲ ವಿಪತ್ತುಗಳಿಂದ ಪಾರಾಗಿಸುತ್ತೇನೆ. ॥ ೪೪ ॥ ರಾಜನಾದವನು ತಂದೆಯಂತೆ, ಗಜರಾಜನು ಬೇರೆ ಆನೆಗಳನ್ನು ರಕ್ಷಿಸುವಂತೆ ಎಲ್ಲ ಪ್ರಜೆಗಳನ್ನು ಕಷ್ಟದಿಂದ ಉದ್ಧಾರಗೈದು, ಅವರನ್ನು ರಕ್ಷಿಸಬೇಕು. ಧೀರನಾಗಿ ಸ್ವಯಂ ತಾನೇ-ತನ್ನನ್ನು ಉದ್ಧರಿಸಿಕೊಳ್ಳಬೇಕು. ॥ ೪೫ ॥ ಈ ವಿಧವಾಗಿ ಪ್ರಜೆಗಳನ್ನು ರಕ್ಷಿಸುವವನು ಎಲ್ಲ ಪಾಪಗಳಿಂದ ಮುಕ್ತನಾಗಿ ಅಂತ್ಯದಲ್ಲಿ ಸೂರ್ಯನಂತಿರುವ ತೇಜಸ್ವೀ ವಿಮಾನದಲ್ಲಿ ಆರೂಢನಾಗಿ ಸ್ವರ್ಗಲೋಕಕ್ಕೆ ಹೋಗುತ್ತಾನೆ ಮತ್ತು ಇಂದ್ರನೊಡನೆ ಸುಖವನ್ನು ಭೋಗಿಸುತ್ತಾನೆ. ॥ ೪೬ ॥

ಸೀದನ್ವಿಪ್ರೋ ವಣಿಗ್ವೃತ್ತ್ಯಾ ಪಣ್ಯೈರೇವಾಪದಂ ತರೇತ್ ।
ಖಡ್ಗೇನ ವಾಽಽಪದಾಕ್ರಾಂತೋ ನ ಶ್ವವೃತ್ತ್ಯಾ ಕಥಂಚನ
॥ ೪೭ ॥

ಬ್ರಾಹ್ಮಣನಾದವನು ಅಧ್ಯಾಪನ ಅಥವಾ ಯಜ್ಞ-ಯಾಗಾದಿಗಳಿಂದ ಜೀವನ ನಿರ್ವಾಹ ನಡೆಯದಿದ್ದರೆ, ವೈಶ್ಯವೃತ್ತಿಯನ್ನು ಅವಲಂಬಿಸಬೇಕು. ಅದೂ ಕೂಡ ವಿಪತ್ತು ದೂರವಾಗುವವರೆಗೆ ಮಾತ್ರ. ಇನ್ನೂ ದೊಡ್ಡ ಆಪತ್ತನ್ನು ಇದಿರಿಸಬೇಕಾದಾಗ ಖಡ್ಗವನ್ನೆತ್ತಿ ಕ್ಷತ್ರಿಯ ವೃತ್ತಿಯಿಂದಲೂ ತನ್ನ ನಿರ್ವಾಹಮಾಡಿಕೊಳ್ಳಬಹುದು. ಆದರೆ ಯಾವುದೇ ಪರಿಸ್ಥಿತಿ ಯಲ್ಲಿಯೂ 'ಶ್ವಾನವೃತ್ತಿ' ಅಂದರೆ ನೀಚರ ಸೇವೆ ಎಂದೂ ಮಾಡಬಾರದು. ॥ ೪೭ ॥

ವೈಶ್ಯವೃತ್ತ್ಯಾತು ರಾಜನ್ಯೋ ಜೀವೇನ್ಮೃಗಯಯಾಽಽಪದಿ ।
ಚರೇದ್ವಾ ವಿಪ್ರರೂಪೇಣ ನ ಶ್ವವೃತ್ತ್ಯಾ ಕಥಂಚನ
॥ ೪೮ ॥

ಹೀಗೆಯೇ ಕ್ಷತ್ರಿಯನಾದವನು ಪ್ರಜಾಪಾಲನಾದಿಗಳಿಂದ ಜೀವನ ನಿರ್ವಾಹ ನಡೆಯದಿದ್ದರೆ ವೈಶ್ಯವೃತ್ತಿಯ ವ್ಯಾಪಾರಾದಿಗಳನ್ನು ಮಾಡಬೇಕು. ಬಹಳ ದೊಡ್ಡ ಆಪತ್ತು ಬಂದೊದಗಿದಾಗ ಬೇಟೆಯಿಂದ ಅಥವಾ ವಿದ್ಯಾರ್ಥಿಗಳಿಗೆ ಕಲಿಸಿ ತನ್ನ ಆಪತ್ತನ್ನು ದೂರಮಾಡಿ ಕೊಳ್ಳಬೇಕು. ಆದರೆ 'ಶ್ವಾನವೃತ್ತಿ' ನೀಚರ ಸೇವೆ ಎಂದೂ ಮಾಡಬಾರದು. ॥ ೪೮ ॥

ಶೂದ್ರವೃತ್ತಿಂ ಭಜೇದ್ವೈಶ್ಯಃ ಶೂದ್ರಃ ಕಾರುಕಟಕ್ರಿಯಾಮ್ ।
ಕೃಚ್ಛ್ರಾನ್ಮುಕ್ತೋ ನ ಗರ್ಹ್ಯೇಣ ವೃತ್ತಿಂ ಲಿಪ್ಸೇತ ಕರ್ಮಣಾ
॥ ೪೯ ॥

ವೈಶ್ಯರೂ ಕೂಡ ಆಪತ್ತಿನ ಸಮಯದಲ್ಲಿ ಶೂದ್ರರ ವೃತ್ತಿ ಸೇವೆಯ ಮೂಲಕ ತಮ್ಮ ಜೀವನನಿರ್ವಾಹ ಮಾಡಿಕೊಳ್ಳಬೇಕು. ಶೂದ್ರರೂ ಕೂಡ ಚಾಪೆ ಹೆಣೆಯುವುದು ಮುಂತಾದ ಕ್ರಿಯೆಗಳಿಂದ ತಮ್ಮ ಜೀವನ ನಡೆಸಬೇಕು. ಆದರೆ ಉದ್ಧವಾ ! ಇವೆಲ್ಲ ಮಾತುಗಳು ಆಪತ್ಕಾಲಕ್ಕಾಗಿ ಇವೆ. ಕಷ್ಟದಿಂದ ಮುಕ್ತನಾಗುವವರೆಗೆ ಮಾತ್ರ ಇಂತಹ ಕೆಲಸ ಮಾಡಬೇಕು. ಆದರೆ ಆಪತ್ತಿನ ಸಮಯ ಕಳೆದುಹೋದಮೇಲೆ ಕೆಳಗಿನ ವರ್ಣಗಳ ವೃತ್ತಿಯನ್ನು ಅವಲಂಬಿಸಿ ಜೀವನ ನಡೆಸುವ ಲೋಭವಿರಿಸಿಕೊಳ್ಳಬಾರದು. ॥ ೪೯ ॥

ವೇದಾಧ್ಯಾಯಸ್ವಧಾಸ್ವಾಹಾಬಲ್ಯನ್ನಾದ್ಯೈರ್ಯಥೋದಯಮ್ ।
ದೇವರ್ಷಿಪಿತೃಭೂತಾನಿ ಮದ್ರೂಪಾಣ್ಯನ್ವಹಂ ಯಜೇತ್
॥ ೫೦ ॥

ಗೃಹಸ್ಥನ ಧರ್ಮವನ್ನು ತಿಳಿಸುವಾಗ ಹೇಳುತ್ತಾರೆ – ಗೃಹಸ್ಥನಾದವನು ವೇದಾಧ್ಯಯನರೂಪೀ ಬ್ರಹ್ಮಯಜ್ಞ, ತರ್ಪಣರೂಪೀ ಪಿತೃಯಜ್ಞ, ಹವನರೂಪೀ ದೇವಯಜ್ಞ, ಕಾಕಬಲಿ ಮುಂತಾದ ಭೂತಯಜ್ಞ, ಅನ್ನದಾನರೂಪೀ ಅತಿಥಿಯಜ್ಞ ಇವುಗಳ ಮೂಲಕ ನನ್ನ ಸ್ವರೂಪಭೂತ ಋಷಿಗಳು, ದೇವತೆಗಳು, ಪಿತೃಗಳು, ಮನುಷ್ಯರು ಹಾಗೂ ಬೇರೆ ಸಮಸ್ತ ಪ್ರಾಣಿಗಳು ಇವುಗಳಲ್ಲಿ ನನ್ನ ಭಾವನೆಯನ್ನೇ ಇರಿಸಿ ಯಥಾಶಕ್ತಿ ಪ್ರತಿದಿನವೂ ಪೂಜಿಸಬೇಕು. ॥ ೫೦ ॥

ಯದೃಚ್ಛಯೋಪಪನ್ನೇನ ಶುಕ್ಲೇನೋಪಾರ್ಜಿತೇನ ವಾ ।
ಧನೇನಾಪೀಡಯನ್ಭೃತ್ಯಾನ್ ನ್ಯಾಯೇನೈವಾಹರೇತ್ಕ್ರತೂನ್
॥ ೫೧ ॥

ಗೃಹಸ್ಥನು ಅನಾಯಾಸವಾಗಿ ದೊರಕಿದ ಅಥವಾ ಶಾಸ್ತ್ರಸಮ್ಮತ ರೀತಿಯಿಂದ ಗಳಿಸಿದ ಶುದ್ಧ ಧನದಿಂದ ತನ್ನ ಭೃತ್ಯರನ್ನು, ಆಶ್ರಿತರನ್ನು ಯಾವುದೇ ವಿಧದಿಂದ ಕಷ್ಟಕೊಡದೆ, ಅರ್ಥಾತ್ ಅವರನ್ನು ಸಂತುಷ್ಟಗೊಳಿಸಿಯೇ ನ್ಯಾಯ ಮತ್ತು ವಿಧ್ಯುಕ್ತವಾಗಿಯೇ ಯಜ್ಞಮಾಡಬೇಕು. ॥ ೫೧ ॥

ಕುಟುಂಬೇಷು ನ ಸಜ್ಜೇತ ನ ಪ್ರಮಾದ್ಯೇತ್ ಕುಟುಂಬ್ಯಪಿ ।
ವಿಪಶ್ಚಿನ್ನಶ್ವರಂ ಪಶ್ಯೇದದೃಷ್ಟಮಪಿ ದೃಷ್ಟವತ್
॥ ೫೨ ॥

ಪ್ರಿಯ ಉದ್ಧವನೇ! ಗೃಹಸ್ಥನು ಕುಟುಂಬದಲ್ಲಿ ಆಸಕ್ತನಾಗಬಾರದು. ಕುಟುಂಬಿಯಾದರೂ ಭಜನೆಯಲ್ಲಿ ಪ್ರಮಾದ ಮಾಡಬಾರದು. ಈ ಲೋಕದ ಸಮಸ್ತ ವಸ್ತುಗಳು ನಾಶವುಳ್ಳವುಗಳಂತೆ ಸ್ವರ್ಗಾದಿ ಪರಲೋಕದ ಭೋಗಗಳೂ ನಾಶಯುಕ್ತವೇ ಆಗಿವೆ ಎಂದು ಬುದ್ಧಿವಂತನಾದವನು ಅರಿತುಕೊಳ್ಳಬೇಕು. ॥ ೫೨ ॥

**ಪುತ್ರದಾರಾಪ್ತಬಂಧೂನಾಂ ಸಂಗಮಃ ಪಾಂಥಸಂಗಮಃ ।**
**ಅನುದೇಹಂ ವಿಯಂತ್ಯೇತೇ ಸ್ವಪ್ನೋ ನಿದ್ರಾನುಗೋ ಯಥಾ ॥ ೫೩ ॥**

ಈ ಪತ್ನೀ, ಪುತ್ರರ, ಬಂಧು- ಬಾಂಧವರ, ಗುರುಹಿರಿಯರ ಕೂಡು ವಿಕೆಯೂ, ಯಾತ್ರೆಯಲ್ಲಿ ವಿವಿಧ ಯಾತ್ರಿಗಳು ಒಂದಾಗಿ, ಅಗಲುವಂತೆ ಇದೆ. ನಿದ್ದೆಯಲ್ಲಿ ಬರುವ ಸ್ವಪ್ನವು ಬೇರೆ-ಬೇರೆಯಾಗಿರುವಂತೆಯೇ ಪ್ರತಿಯೊಂದು ದೇಹದಲ್ಲಿ ಒಂದುಗೂಡುವ – ಅಗಲುವ ವ್ಯಕ್ತಿಗಳೂ ಬೇರೆ – ಬೇರೆಯಾಗಿಯೇ ಇರುತ್ತಾರೆ.* ॥ ೫೩ ॥

**ಇತ್ಥಂ ಪರಿಮೃಶನ್ಮುಕ್ತೋ ಗೃಹೇಷ್ವತಿಥಿವದ್ವಸನ್ ।**
**ನ ಗೃಹೈರನುಬಧ್ಯೇತ ನಿರ್ಮಮೋ ನಿರಹಂಕೃತಃ ॥ ೫೪ ॥**

ಗೃಹಸ್ಥನಾದವನು ಹೀಗೆ ವಿಚಾರಮಾಡಿ ಮನೆ ಸಂಸಾರದಲ್ಲಿ ಸಿಕ್ಕಿಕೊಳ್ಳಬಾರದು. ಅದರಲ್ಲಿ ಯಾರೋ ಅತಿಥಿಯು ವಾಸಿಸುತ್ತಿರುವಂತೆ ಅನಾಸಕ್ತ ಭಾವದಿಂದ ಇರಬೇಕು. ಶರೀರ ಮುಂತಾದವುಗಳಲ್ಲಿ ಅಹಂಕಾರ ಮತ್ತು ಮನೆಯೇ ಮುಂತಾದವುಗಳಲ್ಲಿ ಮಮತೆ ಇಡದಿದ್ದರೆ ಅವನು ಗೃಹಸ್ಥಾಶ್ರಮದಲ್ಲಿ ಬಂಧಿತನಾಗಲಾರನು. ॥ ೫೪ ॥

**ಕರ್ಮಭಿರ್ಗೃಹಮೇಧೀಯೈರಿಷ್ಟ್ವಾ ಮಾಮೇವ ಭಕ್ತಿಮಾನ್ ।**
**ತಿಷ್ಠೇದ್ವನಂ ವೋಪವಿಶೇತ್ ಪ್ರಜಾವಾನ್ವಾ ಪರಿವ್ರಜೇತ್ ॥ ೫೫ ॥**

ನನ್ನ ಭಕ್ತನು ಮಕ್ಕಳೊಂದಿಗನಾಗಿದ್ದರೆ ಗೃಹಸ್ಥೋಚಿತ ಶಾಸ್ತ್ರೋಕ್ತ ಪವಿತ್ರ ಕರ್ಮಗಳ ಮೂಲಕ ನನ್ನ ಆರಾಧನೆ ಮಾಡುತ್ತಾ ಮನೆಯಲ್ಲಿ ಇರಲಿ. ಇಲ್ಲದಿದ್ದರೆ ವಾನಪ್ರಸ್ಥ ಆಶ್ರಮ ಕೈಗೊಳ್ಳಲಿ ಅಥವಾ ಸಂನ್ಯಾಸಾಶ್ರಮವನ್ನು ಸ್ವೀಕರಿಸಲಿ. ॥ ೫೫ ॥

**ಯಸ್ತ್ವಾಸಕ್ತಮತಿರ್ಗೇಹೇ ಪುತ್ರವಿತ್ತೈಷಣಾತುರಃ ।**
**ಸ್ತ್ರೈಣಃ ಕೃಪಣಧೀರ್ಮೂಢೋ ಮಮಾಹಮಿತಿ ಬಧ್ಯತೇ ॥ ೫೬ ॥**

ಪ್ರಿಯ ಉದ್ಧವನೇ! ಮನೆ-ಸಂಸಾರದಲ್ಲೇ ಆಸಕ್ತನಾಗಿ, ಪತ್ನೀ, ಪುತ್ರ, ಧನ ಇವುಗಳ ಕಾಮನೆಗಳಲ್ಲಿ ಸಿಕ್ಕಿಕೊಂಡು ಅಯ್ಯೋ-ಮುರ್‍ರೋ ಎಂದು ಪಾಡು ಪಡುತ್ತಾ ಇರುವ ಜನರು, ಮೂಢತೆಯಿಂದ ಸ್ತ್ರೀಲಂಪಟ ಮತ್ತು ಕೃಪಣರಾಗಿ ನಾನು-ನನ್ನದು ಎಂಬ ಹೊಂಡದಲ್ಲಿ ಬಿದ್ದು ಬಂಧಿತರಾಗುತ್ತಾರೆ. ॥ ೫೬ ॥

**ಅಹೋ ಮೇ ಪಿತರೌ ವೃದ್ಧೌ ಭಾರ್ಯಾ ಬಾಲಾತ್ಮಜಾಽಽತ್ಮಜಾಃ ।**
**ಅನಾಥಾ ಮಾಮೃತೇ ದೀನಾಃ ಕಥಂ ಜೀವಂತಿ ದುಃಖಿತಾಃ ॥ ೫೭ ॥**

ಅವರು ಅಯ್ಯೋ! ಶಿವನೇ! ನನ್ನ ತಂದೆ-ತಾಯಿಯರು ಮುದುಕರಾದರು. ಪತ್ನೀ-ಮಕ್ಕಳು ಇನ್ನು ಸಣ್ಣ-ಸಣ್ಣವರಾಗಿದ್ದಾರೆ. ನಾನಿಲ್ಲದಿದ್ದರೆ ಇವರು ದೀನರೂ, ದುಃಖಿಗಳೂ, ಅನಾಥರಾಗುವರು. ಮತ್ತೆ ಇವರ ಜೀವನ ಹೇಗೆ ನಡೆಯಬಹುದು? ಎಂದು ಯೋಚಿಸುತ್ತಾ ಇರುತ್ತಾರೆ. ॥ ೫೭ ॥

**ಏವಂ ಗೃಹಾಶಯಾಕ್ಷಿಪ್ತಹೃದಯೋ ಮೂಢಧೀರಯಮ್ ।**
**ಅತೃಪ್ತಸ್ತಾನನುಧ್ಯಾಯನ್ಮೃತೋಽಂಧಂ ವಿಶತೇ ತಮಃ ॥ ೫೮ ॥**

ಈ ವಿಧವಾದ ಸಂಸಾರದ ಮಮತೆಯಿಂದ ವಿಕ್ಷಿಪ್ತವಾದ ಚಿತ್ತವುಳ್ಳ ಆ ಮೂಢಬುದ್ಧಿಯು ವಿಷಯಭೋಗಗಳಿಂದ ಎಂದೂ ತೃಪ್ತನಾಗುವುದಿಲ್ಲ. ಅದರಲ್ಲೇ ಸಿಕ್ಕಿಹಾಕಿಕೊಂಡು ತನ್ನ ಜೀವನವನ್ನು ಕಳೆದುಕೊಳ್ಳುವನು. ಸತ್ತಮೇಲೆ ಘೋರ ಅಂಧಕಾರಮಯ ನರಕಕ್ಕೆ ಹೋಗುತ್ತಾನೆ. ॥ ೫೮ ॥

*ಹದಿನೇಳನೆಯ ಅಧ್ಯಾಯವು ಮುಗಿಯಿತು. ॥ ೧೭ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಏಕಾದಶ ಸ್ಕಂಧೇ ಸಪ್ತದಶೋಽಧ್ಯಾಯಃ ॥ ೧೭ ॥



* 'ವಿಯಂತಿ – ವಿವಿಧಾಃ ಯಂತಿ' ಅರ್ಥಾತ್ ಎಲ್ಲ ಬಂಧು-ಬಾಂಧವರು ಬೇರೆ-ಬೇರೆಯೇ ಆಗಿರುತ್ತಾರೆ. ತನ್ನ ಶಾಶ್ವತ ಸಂಬಂಧವಾದರೋ ಪರಮಪಿತಾ ಪರಮೇಶ್ವರನೊಂದಿಗೆ ಇದೆ, ಲೌಕಿಕ ಸಂಬಂಧಗಳಾದರೋ ಮಾಡಿಕೊಂಡದ್ದು ಎಂದು ದೃಢವಾದ ಧಾರಣೆ ಮಾಡಿಕೊಳ್ಳಬೇಕು. ಆದ್ದರಿಂದ ತಮ್ಮ-ತಮ್ಮ ಅಧಿಕಾರಕ್ಕನುಸಾರ ಎಲ್ಲರ ಸೇವೆ ಮಾಡಬೇಕು. ಅವರಲ್ಲಿ ಆಸಕ್ತಿಯನ್ನಿರಿಸಿ ಮೋಸಹೋಗಬಾರದು.

# ಹದಿನೆಂಟನೆಯ ಅಧ್ಯಾಯ

## ವಾನಪ್ರಸ್ಥ ಮತ್ತು ಸಂನ್ಯಾಸಿಯ ಧರ್ಮ

ಶ್ರೀಭಗವಾನುವಾಚ

**ವನಂ ವಿವಿಕ್ಷುಃ ಪುತ್ರೇಷು ಭಾರ್ಯಾಂ ನ್ಯಸ್ಯ ಸಹೈವ ವಾ ।
ವನ ಏವ ವಸೇಚ್ಛಾಂತಸ್ತೃತೀಯಂ ಭಾಗಮಾಯುಷಃ ॥ ೧ ॥**

**ಕಂದಮೂಲಫಲೈರ್ವನ್ಯೈರ್ಮೇಧ್ಯೈರ್ವೃತ್ತಿಂ ಪ್ರಕಲ್ಪಯೇತ್ ।
ವಸೀತ ವಲ್ಕಲಂ ವಾಸಸ್ತೃಣಪರ್ಣಾಜಿನಾನಿ ಚ ॥ ೨ ॥**

**ಕೇಶರೋಮನಖಶ್ಮಶ್ರುಮಲಾನಿ ಬಿಭೃಯಾದ್ದತಃ ।
ನ ಧಾವೇದಪ್ಸು ಮಜ್ಜೇತ ತ್ರಿಕಾಲಂ ಸ್ಥಂಡಿಲೇಶಯಃ ॥ ೩ ॥**

**ಗ್ರೀಷ್ಮೇ ತಪ್ಯೇತ ಪಂಚಾಗ್ನೀನ್ ವರ್ಷಾಸ್ವಾಸಾರಷಾಡ್ಜಲೇ ।
ಆಕಂಠಮಗ್ನಃ ಶಿಶಿರೇ ಏವಂವೃತ್ತಸ್ತಪಶ್ಚರೇತ್ ॥ ೪ ॥**

**ಅಗ್ನಿಪಕ್ವಂ ಸಮಶ್ನೀಯಾತ್ಕಾಲಪಕ್ವಮಥಾಪಿ ವಾ ।
ಉಲೂಖಲಾಶ್ಮಕುಟ್ಟೋ ವಾ ದಂತೋಲೂಖಲ ಏವ ವಾ ॥ ೫ ॥**

**ಸ್ವಯಂ ಸಂಚಿನುಯಾತ್ಸರ್ವಮಾತ್ಮನೋ ವೃತ್ತಿಕಾರಣಮ್ ।
ದೇಶಕಾಲಬಲಾಭಿಜ್ಞೋ ನಾದದೀತಾನ್ಯದಾಽಽಹೃತಮ್ ॥ ೬ ॥**

**ವನ್ಯೈಶ್ಚರುಪುರೋಡಾಶೈರ್ನಿರ್ವಪೇತ್ಕಾಲಚೋದಿತಾನ್ ।
ನ ತು ಶ್ರೌತೇನ ಪಶುನಾ ಮಾಂ ಯಜೇತ ವನಾಶ್ರಮೀ ॥ ೭ ॥**

**ಅಗ್ನಿಹೋತ್ರಂ ಚ ದರ್ಶಶ್ಚ ಪೂರ್ಣಮಾಸಶ್ಚ ಪೂರ್ವವತ್ ।
ಚಾತುರ್ಮಾಸ್ಯಾನಿ ಚ ಮುನೇರಾಮ್ನಾತಾನಿ ಚ ನೈಗಮೈಃ ॥ ೮ ॥**

ಭಗವಾನ್ ಶ್ರೀಕೃಷ್ಣನು ಹೇಳುತ್ತಾನೆ – ಪ್ರಿಯ ಉದ್ಧವನೇ! ಗೃಹಸ್ಥನಾದ ಮನುಷ್ಯನು ವಾನಪ್ರಸ್ಥ ಆಶ್ರಮವನ್ನು ಕೈಗೊಳ್ಳಲು ಬಯಸಿದರೆ, ತನ್ನ ಪತ್ನಿಯನ್ನು ಪುತ್ರರಿಗೆ ಒಪ್ಪಿಸಬೇಕು. ಅಥವಾ ತನ್ನೊಂದಿಗೆ ಕರೆದುಕೊಳ್ಳಲಿ. ಮತ್ತೆ ಶಾಂತಚಿತ್ತದಿಂದ ತನ್ನ ಆಯುಸ್ಸಿನ ಮೂರನೆಯ ಭಾಗವನ್ನು ಕಾಡಿನಲ್ಲೇ ಇದ್ದು ಕಳೆಯಲಿ. ॥ ೧ ॥ ಅವನು ಕಾಡಿನ ಪವಿತ್ರ ಕಂದ-ಮೂಲ, ಫಲಗಳಿಂದಲೇ ಶರೀರ ನಿರ್ವಾಹ ಮಾಡಬೇಕು. ಬಟ್ಟೆಯ ಬದಲಿಗೆ ಮರದ ತೊಗಟೆ (ವಲ್ಕಲ)ಗಳನ್ನು ಧರಿಸಬೇಕು. ಹುಲ್ಲು, ಎಲೆ, ಮರದ ತೊಗಟೆಗಳನ್ನೇ ಉಪಯೋಗಿಸಬೇಕು. ॥ ೨ ॥ ಕೂದಲು, ರೋಮ, ಉಗುರು, ಗಡ್ಡ-ಮೀಸೆ ಮುಂತಾದ ಶರೀರದ ಮಲವನ್ನು ತೆಗೆಯಬಾರದು. ಹಲ್ಲು ಉಜ್ಜಬಾರದು. ನೀರಿನಲ್ಲಿ ಮುಳುಗಿ ತ್ರಿಕಾಲ ಸ್ನಾನ ಮಾಡಬೇಕು. ನೆಲದಲ್ಲೇ ಮಲಗಬೇಕು. ॥ ೩ ॥ ಗ್ರೀಷ್ಮ ಋತು (ಬೇಸಿಗೆ)ವಿನಲ್ಲಿ ಪಂಚಾಗ್ನಿಯ ನಡುವೆ ಇದ್ದು, ವರ್ಷಾಋತು (ಮಳೆಗಾಲ)ವಿನಲ್ಲಿ ತೆರೆದ ಬಯಲಲ್ಲಿ ನಿಂತು ಮಳೆಯನ್ನು ಸಹಿಸಬೇಕು. ಚಳಿಗಾಲದಲ್ಲಿ ಕತ್ತಿನವರೆಗೆ ನೀರಿನಲ್ಲಿ ಮುಳುಗಿರಬೇಕು. ಈ ಪ್ರಕಾರ ಘೋರ ತಪಸ್ಸಾಮಯ ಜೀವನ ನಡೆಸಬೇಕು. ॥ ೪ ॥ ಬೆಂಕಿಯಲ್ಲಿ ಬೆಂದ ಅನ್ನವನ್ನು ಅಥವಾ ಹಣ್ಣಾದ, ಬೆಳೆದ ಕಂದ ಮೂಲ, ಫಲಗಳಿಂದ ತನ್ನ ನಿರ್ವಾಹಮಾಡಿಕೊಳ್ಳಬೇಕು. ಅದನ್ನು ಕುಟ್ಟಬೇಕಾದ ಆವಶ್ಯಕತೆ ಕಂಡರೆ ಒರಳಲ್ಲಿ ಅಥವಾ ಕಲ್ಲಿನ ಮೇಲೆ ಕುಟ್ಟಿಕೊಳ್ಳಬೇಕು. ಇಲ್ಲವೇ ಹಲ್ಲಿನಿಂದ ಅಗಿದೇ ತಿಂದುಬಿಡಬೇಕು. ॥ ೫ ॥ ತನ್ನ ಉದರಪೂರ್ತಿಗಾಗಿ ಉಪಯೋಗೀ ಎಲ್ಲ ಸಾಮಗ್ರಿಗಳನ್ನು ಸ್ವತಃ ತಂದುಕೊಳ್ಳಬೇಕು. ದೇಶ-ಕಾಲ ಮತ್ತು ತನ್ನ ಶಾರೀರಿಕ ಸಾಮರ್ಥ್ಯವನ್ನು ನೋಡಿಕೊಂಡು ಬೇರೆಯವರು ತಂದಿರುವುದನ್ನು ಉಪಯೋಗಿಸಬಾರದು. * ॥ ೬ ॥ ವಾನಪ್ರಸ್ಥಿಯು ವನ್ಯವಸ್ತುಗಳಿಂದಲೇ ಪುರೋಡಾಶ ಮುಂತಾದ ಹವಿಷ್ಯಾನ್ನವನ್ನು ಸಿದ್ಧಗೊಳಿಸಬೇಕು. ಆದರಿಂದಲೇ ಸಮಯಾನುಸಾರ ಯಾವ ಸಮಯಕ್ಕೆ ಯಾವುದನ್ನು ಹೇಳಲಾಗಿದೆಯೋ ಆ ಆಗ್ರಾಯಣ ಇಷ್ಟಿ ಮುಂತಾದ ವೈದಿಕ ಯಜ್ಞಗಳನ್ನು ಮಾಡಬೇಕು. ಪಶುಬಲಿಯಿಂದ ನನ್ನ ಯಜನವನ್ನು ಎಂದೂ ಮಾಡಬಾರದು. ॥ ೭ ॥ ವಾನಪ್ರಸ್ಥಾಶ್ರಮಿಯು ವೇದವಿಹಿತ ಅಗ್ನಿಹೋತ್ರ, ಅಮಾವಾಸ್ಯಾ, ಪೌರ್ಣಮಿ ಹಾಗೂ ಚಾತುರ್ಮಾಸ್ಯ ಮೊದಲಾದವುಗಳಲ್ಲಿ ಶಾಸ್ತ್ರವಿಧಿಯಂತೆ ಯಜ್ಞ-ಯಾಗಾದಿಗಳನ್ನು ಗೃಹಸ್ಥಾಶ್ರಮದಲ್ಲಿ ಮಾಡಿದಂತೆ ವಾನಪ್ರಸ್ಥಿಯೂ ಮಾಡಬೇಕು. ಅವೆಲ್ಲವುಗಳ ಮೂಲಕ ನನ್ನನ್ನೇ ಪೂಜಿಸಬೇಕು. ॥ ೮ ॥

* ಅರ್ಥಾತ್ – ಇಂತಹ ಪದಾರ್ಥ ಎಲ್ಲಿಂದ ತರಬೇಕು, ಯಾವಾಗ ತರಬೇಕು, ಯಾವು-ಯಾವುದು ತನಗೆ ಅನುಕೂಲವಾಗಿದೆ ಎಂದು ಮುನಿಯು ಅರಿತುಕೊಂಡು ಸ್ವತಃ ಹೊಸ-ಹೊಸ ಕಂದ-ಮೂಲ-ಫಲಗಳನ್ನು ಸಂಗ್ರಹಿಸಬೇಕು. ದೇಶ-ಕಾಲವನ್ನು ತಿಳಿಯದ ಬೇರೆ ಜನರಿಂದ ತಂದಿರುವ ಅಥವಾ ಕಾಲಾಂತರದಲ್ಲಿ ಸಂಗ್ರಹಿಸಿದ ಪದಾರ್ಥಗಳ ಸೇವನೆಯಿಂದ ವ್ಯಾಧಿಯಿಂದಾಗಿ ತಪಸ್ಸಿನಲ್ಲಿ ವಿಘ್ನ ಉಂಟಾಗುವ ಆಶಂಕೆ ಇದೆ.

ಏವಂ ಚೀರ್ಣೇನ ತಪಸಾ ಮುನಿರ್ಧಮನಿಸಂತತಃ ।
ಮಾಂ ತಪೋಮಯಮಾರಾಧ್ಯ ಋಷಿಲೋಕಾದುಪೈತಿ ಮಾಮ್ ॥ ೯ ॥

ಯಸ್ತ್ವೇತತ್ಕೃಚ್ಛ್ರತಶ್ಚೀರ್ಣಂ ತಪೋ ನಿಃಶ್ರೇಯಸಂ ಮಹತ್ ।
ಕಾಮಾಯಾಲ್ಪೀಯಸೇ ಯುಂಜ್ಯಾದ್ಬಾಲಿಶಃ ಕೋಽಪರಸ್ತತಃ ॥ ೧೦ ॥

ಯದಾಸೌ ನಿಯಮೇಽಕಲ್ಪೋ ಜರಯಾ ಜಾತವೇಪಥುಃ ।
ಆತ್ಮನ್ಯಗ್ನೀನ್ಸಮಾರೋಪ್ಯ ಮಚ್ಚಿತ್ತೋಽಗ್ನಿಂ ಸಮಾವಿಶೇತ್ ॥ ೧೧ ॥

ಯದಾ ಕರ್ಮವಿಪಾಕೇಷು ಲೋಕೇಷು ನಿರಯಾತ್ಮಸು ।
ವಿರಾಗೋ ಜಾಯತೇ ಸಮ್ಯಙ್ನ್ಯಸ್ತಾಗ್ನಿಃ ಪ್ರವ್ರಜೇತ್ತತಃ ॥ ೧೨ ॥

ಇಷ್ಟ್ವಾ ಯಥೋಪದೇಶಂ ಮಾಂ ದತ್ತ್ವಾ ಸರ್ವಸ್ವಮೃತ್ವಿಜೇ ।
ಅಗ್ನೀನ್ಸ್ವಪ್ರಾಣ ಆವೇಶ್ಯ ನಿರಪೇಕ್ಷಃ ಪರಿವ್ರಜೇತ್ ॥ ೧೩ ॥

ವಿಪ್ರಸ್ಯ ವೈ ಸಂನ್ಯಸತೋ ದೇವಾ ದಾರಾದಿರೂಪಿಣಃ ।
ವಿಘ್ನಾನ್ ಕುರ್ವಂತ್ಯಯಂ ಹ್ಯಸ್ಮಾನಾಕ್ರಮ್ಯ ಸಮಿಯಾತ್ಪರಮ್ ॥ ೧೪ ॥

ಬಿಭೃಯಾಚ್ಚೇನ್ಮುನಿರ್ವಾಸಃ ಕೌಪೀನಾಚ್ಛಾದನಂ ಪರಮ್ ।
ತ್ಯಕ್ತಂ ನ ದಂಡಪಾತ್ರಾಭ್ಯಾಮನ್ಯತ್ಕಿಂಚಿದನಾಪದಿ ॥ ೧೫ ॥

ದೃಷ್ಟಿಪೂತಂ ನ್ಯಸೇತ್ಪಾದಂ ವಸ್ತ್ರಪೂತಂ ಪಿಬೇಜ್ಜಲಮ್ ।
ಸತ್ಯಪೂತಾಂ ವದೇದ್ವಾಚಂ ಮನಃಪೂತಂ ಸಮಾಚರೇತ್ ॥ ೧೬ ॥

ಈ ಪ್ರಕಾರ ತಪಸ್ಸನ್ನು ಆಚರಿಸುತ್ತಾ ಶರೀರವು ಶುಷ್ಕಪ್ರಾಯವಾದಾಗ ಆ ಮುನಿಯು ತಪೋಮೂರ್ತಿಸ್ವರೂಪೀ ಪರಮಾತ್ಮನಾದ ನನ್ನ ಆರಾಧನೆಯ ಫಲಸ್ವರೂಪ ಋಷಿಗಳಿಗೆ ಪ್ರಾಪ್ತವಾಗುವ ಲೋಕಕ್ಕೆ ಹೋಗುತ್ತಾನೆ. ಅರ್ಥಾತ್ – ಮಹರ್ಲೋಕಕ್ಕೆ ಹೋಗಿ ಮತ್ತೆ ನನ್ನ ಲೋಕಕ್ಕೆ ಬರುತ್ತಾನೆ. ॥ ೯ ॥ ಪ್ರಿಯ ಉದ್ಧವಾ ! ಬಹಳ ಕಷ್ಟದಿಂದ ಮಾಡಿರುವ ಮತ್ತು ಮೋಕ್ಷವನ್ನು ಕೊಡುವಂತಹ ಮಹಾನ್ ತಪಸ್ಸನ್ನು ಸ್ವರ್ಗ, ಬ್ರಹ್ಮಲೋಕ ಮುಂತಾದ ಸಣ್ಣ-ಪುಟ್ಟ ಫಲಗಳ ಪ್ರಾಪ್ತಿಗಾಗಿ ಮಾಡುವ ಮನುಷ್ಯನಿಗಿಂತ ಮಿಗಿಲಾದ ಮೂರ್ಖನು ಯಾರಿರಬಹುದು ? ಆದಕ್ಕಾಗಿ ತಪಸ್ಸಿನ ಅನುಷ್ಠಾನವನ್ನು ನಿಷ್ಕಾಮ ಭಾವದಿಂದಲೇ ಮಾಡಬೇಕು. ॥ ೧೦ ॥

ಪ್ರೀತಿಯ ಉದ್ಧವನೇ ! ವಾನಪ್ರಸ್ಥಿಯು ತನ್ನ ಆಶ್ರಮೋಚಿತ ನಿಯಮಗಳನ್ನು ಪಾಲಿಸಲು ಅಸಮರ್ಥನಾದರೆ, ವೃದ್ಧಾಪ್ಯದ ಕಾರಣ ಶರೀರವು ನಡುಗಲು ತೊಡಗಿದರೆ, ಯಜ್ಞಾಗ್ನಿಗಳನ್ನು ಭಾವನೆಯಿಂದ ತನ್ನ ಅಂತಃಕರಣದಲ್ಲಿ ಆರೋಪಿಸಿಕೊಂಡು, ತನ್ನ ಮನಸ್ಸನ್ನು ನನ್ನಲ್ಲಿ ತೊಡಗಿಸಿ ಅಗ್ನಿಪ್ರವೇಶಮಾಡಲಿ. (ವಿರಕ್ತನಲ್ಲದವನಿಗೆ ಮಾತ್ರ ಈ ವಿಧಾನವಿದೆ.) ॥ ೧೧ ॥ ಕರ್ಮಗಳ ಫಲಸ್ವರೂಪ ಪ್ರಾಪ್ತವಾಗುವ ಲೋಕಗಳೆಲ್ಲ ನರಕದಂತೆ ದುಃಖಪೂರ್ಣವಾಗಿವೆ. ಇಂತಹ ಪೂರ್ಣವೈರಾಗ್ಯ ಉಂಟಾದರೆ ವಿಧಿಪೂರ್ವಕ ಅಗ್ನಿಗಳನ್ನು ತ್ಯಜಿಸಿ ಸಂನ್ಯಾಸ ಸ್ವೀಕರಿಸಲಿ. ॥ ೧೨ ॥ ವಾನಪ್ರಸ್ಥಿಯು ಸಂನ್ಯಾಸಿಯಾಗಲು ಬಯಸಿದರೆ ಮೊದಲಿಗೆ ಅವನು ವೈದಿಕವಿಧಾನಕ್ಕನುಸಾರ ಎಂಟೂ ಪ್ರಕಾರದ ಶ್ರಾದ್ಧಗಳನ್ನು ಮತ್ತು ಪ್ರಾಜಾಪತ್ಯ ಯಜ್ಞದಿಂದ ನನ್ನನ್ನು ಆರಾಧಿಸಲಿ. ಇದಾದ ಬಳಿಕ ತನ್ನ ಸರ್ವಸ್ವವನ್ನು ಋತ್ವಿಜರಿಗೆ ಕೊಡಲಿ. ಯಜ್ಞಾಗ್ನಿಗಳನ್ನು ತನ್ನ ಪ್ರಾಣಗಳಲ್ಲಿ ಲೀನಗೊಳಿಸಿಕೊಳ್ಳಲಿ. ಮತ್ತೆ ಯಾವುದೇ ಸ್ಥಾನ, ವಸ್ತು, ವ್ಯಕ್ತಿಗಳ ಅಪೇಕ್ಷೆಯನ್ನಿಡದೆ ಸಂನ್ಯಾಸಿಯಾಗಲಿ. ॥ ೧೩ ॥ ಉದ್ಧವನೇ ! ಬ್ರಾಹ್ಮಣನು ಸಂನ್ಯಾಸವನ್ನು ಕೈಗೊಳ್ಳಲು ತೊಡಗಿದಾಗ ದೇವತೆಗಳು ಪತ್ನೀ, ಪುತ್ರಾದಿ ನೆಂಟರಿಷ್ಟರ ರೂಪವನ್ನು ಧರಿಸಿ ಅವನ ಸಂನ್ಯಾಸಗ್ರಹಣದಲ್ಲಿ ವಿಘ್ನವನ್ನು ತಂದೊಡ್ಡುವರು. ಅವರೆಲ್ಲರೂ ಅರೇ ! ಇವನಾದರೋ ನಮ್ಮಗಳ ಅವಹೇಳನಗೈದು, ನಮ್ಮನ್ನು ಮೀರಿ ಪರಮಾತ್ಮನನ್ನು ಪಡೆಯಲು ಹೋಗುತ್ತಿರುವನಲ್ಲ ! ಎಂದು ಯೋಚಿಸುತ್ತಾರೆ. ॥ ೧೪ ॥

ಸಂನ್ಯಾಸಿಯು ವಸ್ತ್ರವನ್ನು ತೊಟ್ಟುಕೊಳ್ಳಬೇಕೆಂದರೆ ಕೇವಲ ಲಂಗೋಟಿಯನ್ನು ಉಡಬೇಕು ಮತ್ತು ಹೆಚ್ಚೆಂದರೆ ಲಂಗೋಟಿಯನ್ನು ಮುಚ್ಚುವಷ್ಟು ಸಣ್ಣ ತುಂಡುಬಟ್ಟೆಯನ್ನು ಸುತ್ತಿಕೊಳ್ಳಲಿ. ಅವನು ಎಲ್ಲವನ್ನು ತ್ಯಜಿಸಿರುವನು ; ಆದ್ದರಿಂದ ಯಾವುದೇ ಆಪತ್ತು ಬರದಿದ್ದರೆ ಅವನು ಆಶ್ರಮೋಚಿತ ದಂಡ, ಕಮಂಡಲು ಬಿಟ್ಟು ಬೇರೆ ಯಾವ ವಸ್ತುವನ್ನೂ ತನ್ನ ಬಳಿ ಇರಿಸಿಕೊಳ್ಳಬಾರದು. ॥ ೧೫ ॥ ನಡೆಯುವಾಗ ಕಾಲಕೆಳಗೆ ಯಾವ ಜೀವಿಯು ಸಿಕ್ಕಿಕೊಳ್ಳದಿರುವಂತೆ ನೋಡಿಕೊಂಡು ನಡೆಯಬೇಕು. ನೀರನ್ನು ಗಾಳಿಸಿ ಕುಡಿಯಬೇಕು. ಸತ್ಯದಿಂದ ಪವಿತ್ರವಾದ ವಾಣಿಯನ್ನೇ ಮಾತನಾಡಬೇಕು. ಮನಸ್ಸಿಗೆ ಪವಿತ್ರವೆನಿಸಿದಂತೆ ಆಚರಿಸಬೇಕು. ॥ ೧೬ ॥

ಮೌನಾನೀಹಾನಿಲಾಯಾಮಾ ದಂಡಾ ವಾಗ್ದೇಹಚೇತಸಾಮ್ ।
ನ ಹ್ಯೇತೇ ಯಸ್ಯ ಸಂತ್ಯಂಗ ವೇಣುಭಿರ್ನ ಭವೇದ್ಯತಿಃ ॥ ೧೭ ॥

ವಾಣಿಗಾಗಿ ಮೌನ, ಶರೀರಕ್ಕಾಗಿ ನಿಶ್ಚೇಷ್ಟಸ್ಥಿತಿ, ಮನಸ್ಸಿಗಾಗಿ ಪ್ರಾಣಾಯಾಮ ಇವು ದಂಡಗಳಾಗಿವೆ. ಈ ಮೂರು ದಂಡಗಳು ಇಲ್ಲದವನು ಕೇವಲ ಬಿದಿರಿನ ದಂಡದಿಂದ ದಂಡೀಸ್ವಾಮಿ ಆಗುವುದಿಲ್ಲ. ॥ ೧೭ ॥

ಭಿಕ್ಷಾಂ ಚತುರ್ಷು ವರ್ಣೇಷು ವಿಗರ್ಹ್ಯಾನ್ವರ್ಜಯಂಶ್ಚರೇತ್ ।
ಸಪ್ತಾಗಾರಾನ್‌ಅಸಂಕ್ಲ್ಯಪ್ತಾಂಸ್ತುಷ್ಯೇಲ್ಲಬ್ಧೇನ ತಾವತಾ ॥ ೧೮ ॥

ಸಂನ್ಯಾಸಿಯು ನಿಂದಿತ ಅಥವಾ ಪತಿತರನ್ನು ಬಿಟ್ಟು ನಾಲ್ಕೂ ವರ್ಣದವರಿಂದ ಭಿಕ್ಷೆ ಪಡೆಯಬೇಕು. ಮೊದಲು ನಿಶ್ಚಿತಪಡಿಸಿದ ಕೇವಲ ಏಳು ಮನೆಗಳಿಂದ ಭಿಕ್ಷೆ ಪಡೆಯಬೇಕು. ಭಿಕ್ಷೆಯಲ್ಲಿ ಸಿಕ್ಕಿದಷ್ಟರಲ್ಲೇ ಸಂತೋಷ ಪಡಬೇಕು. ॥ ೧೮ ॥

ಬಹಿರ್ಜಲಾಶಯಂ ಗತ್ವಾ ತತ್ರೋಪಸ್ಪೃಶ್ಯ ವಾಗ್ಯತಃ ।
ವಿಭಜ್ಯ ಪಾವಿತಂ ಶೇಷಂ ಭುಂಜೀತಾಶೇಷಮಾಹೃತಮ್ ॥ ೧೯ ॥

ಈ ಪ್ರಕಾರ ಭಿಕ್ಷೆಯನ್ನು ಎತ್ತಿ ಗ್ರಾಮದಿಂದ ಹೊರಗೆ ಜಲಾಶಯದ ಬಳಿಗೆ ಹೋಗಿ, ಅಲ್ಲಿ ಕೈ, ಕಾಲು ತೊಳೆದು ನೀರಿನಿಂದ ಭಿಕ್ಷೆಯನ್ನು ಪವಿತ್ರಗೊಳಿಸಿಕೊಳ್ಳಬೇಕು. ಮತ್ತೆ ಶಾಸ್ತ್ರೋಕ್ತಪದ್ಧತಿಯಿಂದ ಯಾರಿಗೆ ಭಿಕ್ಷೆಯ ಭಾಗವನ್ನು ಕೊಡಬೇಕೋ ಅವರಿಗೆ ಸಲ್ಲಿಸಿ, ಉಳಿದಿರುವುದನ್ನು ಮೌನವಾಗಿ ತಿನ್ನಬೇಕು ಮತ್ತೊಂದು ಸಮಯಕ್ಕೆ ಉಳಿಸಿಡಬಾರದು, ಎಸೆಯಲೂಬಾರದು. ಹಾಗೂ ಹೆಚ್ಚಿಗೆ ಬೇಡಿಕೊಂಡು ತರಬಾರದು. ॥ ೧೯ ॥

ಏಕಶ್ಚರೇನ್ಮಹೀಮೇತಾಂ ನಿಸ್ಸಂಗಃ ಸಂಯತೇಂದ್ರಿಯಃ ।
ಆತ್ಮಕ್ರೀಡ ಆತ್ಮರತ ಆತ್ಮವಾನ್ ಸಮದರ್ಶನಃ ॥ ೨೦ ॥

ಸಂನ್ಯಾಸಿಯು ಪೃಥಿವಿಯಲ್ಲಿ ಒಬ್ಬಂಟಿಗನಾಗಿಯೇ ಸಂಚರಿಸ ಬೇಕು. ಎಂದೂ ಯಾವುದರ ಮೇಲೂ ಆಸಕ್ತಿ ಇಡಬಾರದು. ಇಂದ್ರಿಯಗಳನ್ನು ವಶದಲ್ಲಿರಿಸಿಕೊಳ್ಳಬೇಕು. ತಾನೇ-ತನ್ನಲ್ಲಿ ಸಂತೋಷವಾಗಿರಬೇಕು. ಆತ್ಮ-ಪ್ರೇಮದಲ್ಲಿ ತನ್ಮಯನಾಗಿದ್ದು, ಅತಿ ಪ್ರತಿಕೂಲ ಪರಿಸ್ಥಿತಿಯಲ್ಲಿಯೂ ಧೈರ್ಯಗೆಡಬಾರದು ಮತ್ತು ಸರ್ವತ್ರ ಸಮಾನರೂಪದಿಂದ ಸ್ಥಿತನಾದ ಪರಮಾತ್ಮನನ್ನು ಅನುಭವಿಸುತ್ತಾ ಇರಬೇಕು. ॥ ೨೦ ॥

ವಿವಿಕ್ತಕ್ಷೇಮಶರಣೋ ಮದ್ಭಾವವಿಮಲಾಶಯಃ ।
ಆತ್ಮಾನಂ ಚಿಂತಯೇದೇಕಮಭೇದೇನ ಮಯಾ ಮುನಿಃ ॥ ೨೧ ॥

ಸಂನ್ಯಾಸಿಯು ನಿರ್ಜನ ಮತ್ತು ನಿರ್ಭಯ ಪವಿತ್ರ ಏಕಾಂತಸ್ಥಾನದಲ್ಲಿ ಇರಬೇಕು. ಅವನ ಹೃದಯ ನಿರಂತರ ನನ್ನ ಭಾವನೆಯಿಂದ ವಿಶುದ್ಧವಾಗಿರಬೇಕು. ಅವನು ತನ್ನನ್ನು ನನ್ನಿಂದ ಅಭಿನ್ನ ಹಾಗೂ ಅದ್ವಿತೀಯ, ಅಖಂಡರೂಪದಲ್ಲಿ ಚಿಂತಿಸುತ್ತಿರಬೇಕು. ॥ ೨೧ ॥

ಅನ್ವೀಕ್ಷೇತಾತ್ಮನೋ ಬಂಧಂ ಮೋಕ್ಷಂ ಚ ಜ್ಞಾನನಿಷ್ಠಯಾ ।
ಬಂಧ ಇಂದ್ರಿಯವಿಕ್ಷೇಪೋ ಮೋಕ್ಷ ಏಷಾಂ ಚ ಸಂಯಮಃ ॥ ೨೨ ॥

ಅವನು ತನ್ನ ಜ್ಞಾನನಿಷ್ಠೆಯಿಂದ ಚಿತ್ತದ ಬಂಧನ ಹಾಗೂ ಮೋಕ್ಷವನ್ನು ಕುರಿತು ವಿಚಾರಮಾಡಬೇಕು. ಇಂದ್ರಿಯಗಳು ವಿಷಯಗಳಿಗಾಗಿ ವಿಕ್ಷಿಪ್ತವಾಗುವುದು – ಚಂಚಲವಾಗುವುದು, ಬಂಧನವಾಗಿದೆ. ಅವುಗಳನ್ನು ಸಂಯಮದಲ್ಲಿರಿಸುವುದೇ ಮೋಕ್ಷವಾಗಿದೆ ಎಂದು ನಿಶ್ಚಯಿಸಿಕೊಳ್ಳಬೇಕು. ॥ ೨೨ ॥

ತಸ್ಮಾನ್ನಿಯಮ್ಯ ಷಡ್ವರ್ಗಂ ಮದ್ಭಾವೇನ ಚರೇನ್ಮುನಿಃ ।
ವಿರಕ್ತಃ ಕ್ಷುಲ್ಲಕಾಮೇಭ್ಯೋ ಲಬ್ಧ್ವಾಽಽತ್ಮನಿ ಸುಖಂ ಮಹತ್ ॥ ೨೩ ॥

ಅದಕ್ಕಾಗಿ ಸಂನ್ಯಾಸಿಯು ಮನ ಹಾಗೂ ಐದೂ ಜ್ಞಾನೇಂದ್ರಿಯಗಳನ್ನು ಗೆದ್ದುಕೊಳ್ಳಬೇಕು. ಭೋಗಗಳ ಕ್ಷುದ್ರತೆಯನ್ನು ಅರಿತುಕೊಂಡು, ಅವುಗಳಿಂದ ಸರ್ವಥಾ ವಿಮುಖನಾಗಬೇಕು. ತಾನೇ-ತನ್ನಲ್ಲಿ ಆನಂದವನ್ನು ಅನುಭವಿಸಬೇಕು. ಹೀಗೆ ಅವನು ನನ್ನ ಭಾವನೆಯಿಂದ ತುಂಬಿಕೊಂಡು ಪೃಥಿವಿಯಲ್ಲಿ ವಿಚರಿಸುತ್ತಿರಬೇಕು. ॥ ೨೩ ॥

ಪುರಗ್ರಾಮವ್ರಜಾನ್ ಸಾರ್ಥಾನ್ಭಿಕ್ಷಾರ್ಥಂ ಪ್ರವಿಶಂಶ್ಚರೇತ್ ।
ಪುಣ್ಯದೇಶಸರಿಚ್ಛೈಲವನಾಶ್ರಮವತೀಂ ಮಹೀಮ್ ॥ ೨೪ ॥

ಪವಿತ್ರದೇಶ, ನದೀ, ಪರ್ವತ, ವನ, ಆಶ್ರಮಗಳಿಂದ ಪೂರ್ಣವಾದ ಪೃಥ್ವಿಯಲ್ಲಿ ಎಲ್ಲಿಯೂ ಮಮತೆಯನ್ನಿಡದೆ ತಿರುಗಾಡುತ್ತಾ ಇರಬೇಕು. ನಗರ, ಗ್ರಾಮ, ಗೋವಳರ ಹಟ್ಟಿ ಮೊದಲಾದವುಗಳಿಗೆ ಕೇವಲ ಭಿಕ್ಷೆಗಾಗಿ ಮಾತ್ರ ಹೋಗಬೇಕು. ॥ ೨೪ ॥

ವಾನಪ್ರಸ್ಥಾಶ್ರಮಪದೇಷ್ವಭೀಕ್ಷ್ಣಂ ಭೈಕ್ಷ್ಯಮಾಚರೇತ್ ।
ಸಂಸಿಧ್ಯತ್ಯಾಶ್ವಸಂಮೋಹಃ ಶುದ್ಧಸತ್ತ್ವಃ ಶಿಲಾಂಧಸಾ ॥ ೨೫ ॥

ಭಿಕ್ಷೆಯೂ ಹೆಚ್ಚಾಗಿ ವಾನಪ್ರಸ್ಥಿಗಳ ಆಶ್ರಮಗಳಿಂದಲೇ ಸ್ವೀಕರಿಸಬೇಕು; ಏಕೆಂದರೆ, ವಾನಪ್ರಸ್ಥಿಯಲ್ಲಿ ಶಿಲಾಂಧವಾಗಿರುವುದರಿಂದ ಪವಿತ್ರವಾಗುತ್ತದೆ. ಅದನ್ನು ತಿನ್ನುವುದರಿಂದ ಬೇಗನೇ ಮೋಹ ನಷ್ಟವಾಗುತ್ತದೆ. ಅದರಿಂದ ಚಿತ್ತಶುದ್ಧಿಯು ಶೀಘ್ರವಾಗಿ ಆಗುತ್ತದೆ. ॥ ೨೫ ॥

ನೈತದ್ವಸ್ತುತಯಾ ಪಶ್ಯೇದ್ದೃಶ್ಯಮಾನಂ ವಿನಶ್ಯತಿ।
ಅಸಕ್ತಚಿತ್ತೋ ವಿರಮೇದಿಹಾಮುತ್ರ ಚಿಕೀರ್ಷಿತಾತ್
॥ ೨೬ ॥

ಯದೇತದಾತ್ಮನಿ ಜಗನ್ಮನೋವಾಕ್ ಪ್ರಾಣಸಂಹತಮ್।
ಸರ್ವಂ ಮಾಯೇತಿ ತರ್ಕೇಣ ಸ್ವಸ್ಥಸ್ತ್ಯಕ್ತ್ವಾ ನ ತತ್ಸ್ಮರೇತ್
॥ ೨೭ ॥

ಜ್ಞಾನನಿಷ್ಠೋ ವಿರಕ್ತೋ ವಾ ಮದ್ಭಕ್ತೋ ವಾನಪೇಕ್ಷಕಃ।
ಸಲಿಂಗಾನಾಶ್ರಮಾಂಸ್ತ್ಯಕ್ತ್ವಾ ಚರೇದವಿಧಿಗೋಚರಃ
॥ ೨೮ ॥

ಬುಧೋ ಬಾಲಕವತ್ಕ್ರೀಡೇತ್ಕುಶಲೋ ಜಡವಚ್ಚರೇತ್।
ವದೇದುನ್ಮತ್ತವದ್ವಿದ್ವಾನ್ ಗೋಚರ್ಯಾಂ ನೈಗಮಶ್ಚರೇತ್
॥ ೨೯ ॥

ವೇದವಾದರತೋ ನ ಸ್ಯಾನ್ನ ಪಾಖಂಡೀ ನ ಹೈತುಕಃ।
ಶುಷ್ಕವಾದವಿವಾದೇ ನ ಕಂಚಿತ್ಪಕ್ಷಂ ಸಮಾಶ್ರಯೇತ್
॥ ೩೦ ॥

ನೋದ್ವಿಜೇತ ಜನಾದ್ಧೀರೋ ಜನಂ ಚೋದ್ವೇಜಯೇನ್ನತು।
ಅತಿವಾದಾಂಸ್ತಿತಿಕ್ಷೇತ ನಾವಮನ್ಯೇತ ಕಂಚನ।
ದೇಹಮುದ್ದಿಶ್ಯ ಪಶುವದ್ ವೈರಂ ಕುರ್ಯಾನ್ನ ಕೇನಚಿತ್
॥ ೩೧ ॥

ಏಕ ಏವ ಪರೋ ಹ್ಯಾತ್ಮಾ ಭೂತೇಷ್ವಾತ್ಮನ್ಯವಸ್ಥಿತಃ।
ಯಥೇಂದುರುದಪಾತ್ರೇಷು ಭೂತಾನ್ಯೇಕಾತ್ಮಕಾನಿ ಚ
॥ ೩೨ ॥

ಅಲಬ್ಧ್ವಾ ನ ವಿಷೀದೇತ ಕಾಲೇ ಕಾಲೇಽಶನಂ ಕ್ವಚಿತ್।
ಲಬ್ಧ್ವಾ ನ ಹೃಷ್ಯೇದ್ಧೃತಿಮಾನುಭಯಂ ದೈವತಂತ್ರಿತಮ್
॥ ೩೩ ॥

ವಿಚಾರವಂತ ಸಂನ್ಯಾಸಿಯು ದೃಶ್ಯಮಾನ ಜಗತ್ತನ್ನು ಎಂದಿಗೂ ಸತ್ಯವಾಗಿ ತಿಳಿಯಬಾರದು. ಏಕೆಂದರೆ, ಇದಾದರೋ ಪ್ರತ್ಯಕ್ಷವಾಗಿ ನಾಶವುಳ್ಳದ್ದಾಗಿದೆ. ಎಲ್ಲಿಯೂ ಆಸಕ್ತಿ ಇಡಬಾರದು. ಏನಾದರೂ ಮಾಡುವ ಇಚ್ಛೆ ಉಂಟಾದರೆ ಅದನ್ನೂ ಬಿಟ್ಟುಬಿಡಬೇಕು. ॥ ೨೬ ॥ ಆತ್ಮನಲ್ಲಿರುವ – ಮನ, ವಾಣೀ ಮತ್ತು ಪ್ರಾಣಗಳ ಸಂಘಾತರೂಪೀ ಈ ಜಗತ್ತೆಲ್ಲವೂ ಪೂರ್ಣವಾಗಿ ಮಾಯಾಮಯವಾಗಿದೆ ಎಂದು ಸಂನ್ಯಾಸಿಯು ವಿಚಾರಮಾಡಬೇಕು. ಈ ತರ್ಕದಿಂದ ಇದನ್ನು ನಿರಾಕರಣಮಾಡಿ ಅರ್ಥಾತ್ – ಇದನ್ನು ತ್ಯಜಿಸಿ, ಆತ್ಮಸ್ವರೂಪದಲ್ಲಿ ಸ್ಥಿತನಾಗಿ, ಮತ್ತೆ ಎಂದಿಗೂ ಅದನ್ನು ಸ್ಮರಿಸಬಾರದು. ॥ ೨೭ ॥ ಜ್ಞಾನನಿಷ್ಠ ವಿರಕ್ತ ಸಂನ್ಯಾಸಿ ಮತ್ತು ಯಾವ ಅಪೇಕ್ಷೆಯೂ ಇಲ್ಲದಿರುವ, ನನ್ನನ್ನೇ ಆಶ್ರಯಿಸಿದ ನನ್ನ ಭಕ್ತನಿಗಾಗಿ ಚಿಹ್ನೆ ಅಥವಾ ಆಶ್ರಮದ ಯಾವ ಆವಶ್ಯಕತೆಯೂ ಇಲ್ಲ. ಇವರು ವೇದಶಾಸ್ತ್ರಗಳ ವಿಧಿ-ನಿಷೇಧಗಳಿಂದ ಅತೀತರಾಗಿ ಸ್ವಚ್ಛಂದವಾಗಿ ವಿಚರಿಸಬೇಕು. ॥ ೨೮ ॥ ನನ್ನ ಅವಧೂತ ಭಕ್ತನು ಬುದ್ಧಿವಂತನಾಗಿದ್ದರೂ ಬಾಲಕರಂತೆ ಆಟವಾಡಲಿ. ನಿಪುಣನಾಗಿದ್ದರೂ ಜಡನಂತೆಯೇ ವರ್ತಿಸಲಿ. ವಿದ್ವಾಂಸನಾಗಿದ್ದರೂ ಹುಚ್ಚನಂತೆ ಮಾತು-ಕತೆಯಾಡಲಿ. ಸಮಸ್ತ ವೇದ-ವಿಧಿಗಳನ್ನು ಅರಿತಿದ್ದರೂ ಪಶುವೃತ್ತಿಯಿಂದ, ಅರ್ಥಾತ್ – ಅನಿಯತ ಆಚಾರ ಮಾಡುವವನಂತೆ ಇರಬೇಕು. ॥ ೨೯ ॥ ಅವನು ವೇದಗಳ ಕರ್ಮಕಾಂಡ ಭಾಗದ ವ್ಯಾಖ್ಯೆಯಲ್ಲಿ ತೊಡಗಬಾರದು. ವೇದವನ್ನು ನಿಂದಿಸುವ ಪಾಖಂಡ (ನಾಸ್ತಿಕ)ನೂ ಆಗಿರಬಾರದು. ತರ್ಕ-ವಿತರ್ಕದಿಂದ ದೂರವುಳಿಯಬೇಕು. ನಿಷ್ಪ್ರಯೋಜಕವಾದ ವಿವಾದಗಳಲ್ಲಿ ಯಾವುದೇ ಪಕ್ಷವನ್ನು ವಹಿಸಿಕೊಳ್ಳ ಬಾರದು. ॥ ೩೦ ॥ ಧೀರನಾದ ನನ್ನ ಪರಮಹಂಸ ಭಕ್ತನು ಜನರ ಆಚರಣೆಗಳಿಂದ ಉದ್ವಿಗ್ನನಾಗುವುದಿಲ್ಲ, ತನ್ನ ಆಚರಣೆಯಿಂದ ಯಾವ ಪ್ರಾಣಿಯನ್ನು ಉದ್ವಿಗ್ನಗೊಳಿಸುವುದಿಲ್ಲ. ತನ್ನ ಕುರಿತು ಯಾರಾದರೂ ನಿಂದಿಸಿದರೆ ಸಂತೋಷವಾಗಿ ಸಹಿಸುತ್ತಾನೆ. ಯಾರ ಅಪಮಾನವನ್ನೂ ಮಾಡುವುದಿಲ್ಲ. ದೇಹದ ಸಲುವಾಗಿ ಪಶುಗಳಂತೆ ಯಾರೊಡನೆಯೂ ದ್ವೇಷ ಕಟ್ಟಿಕೊಳ್ಳುವುದಿಲ್ಲ. ॥ ೩೧ ॥ ನೀರು ತುಂಬಿಟ್ಟ ವಿಭಿನ್ನ ಪಾತ್ರೆಗಳಲ್ಲಿ ಚಂದ್ರನು ಬೇರೆ-ಬೇರೆಯಾಗಿ ಪ್ರತಿಬಿಂಬಿಸುವಂತೆ, ಒಬ್ಬನೇ ಪರಮಾತ್ಮನು ಸಮಸ್ತ ಪ್ರಾಣಿಗಳಲ್ಲಿ ಮತ್ತು ತನ್ನಲ್ಲಿಯೂ ಸ್ಥಿತನಾಗಿದ್ದಾನೆ. ಎಲ್ಲರ ಆತ್ಮನಾದರೋ ಒಂದೇ ಆಗಿದೆ. ಎಲ್ಲ ಪ್ರಾಣಿಗಳ ಶರೀರವೂ ಕೂಡ ಒಂದೇ ರೀತಿಯ ಪಂಚಭೂತಗಳಿಂದ ಉಂಟಾಗಿದೆ. ಆದ್ದರಿಂದ ಅವುಗಳಲ್ಲಿರುವ ಪ್ರಾಣವೂ ಒಂದೇ ಆಗಿದೆ ಎಂಬ ತತ್ತ್ವವನ್ನು ನನ್ನ ಪರಮಹಂಸಭಕ್ತನು ಚೆನ್ನಾಗಿ ತಿಳಿದಿರುತ್ತಾನೆ. (ಇಂತಹ ಅವಸ್ಥೆಯಲ್ಲಿ ಯಾರೊಂದಿಗಾದರೂ ವೈರ-ವಿರೋಧ ಮಾಡಿದರೆ ತನ್ನೊಂದಿಗೆ ವೈರ-ವಿರೋಧಮಾಡಿದಂತೆ.) ॥ ೩೨ ॥

ಪ್ರಿಯ ಉದ್ಧವಾ! ಧೈರ್ಯಶಾಲಿಯಾದ ಸಂನ್ಯಾಸಿಯು ಎಂದಾದರೂ ಒಂದುದಿನ ಭಿಕ್ಷೆಯು ದೊರೆಯದಿದ್ದರೆ ವಿಷಾದಿಸಬಾರದು. ಕಾಲ-ಕಾಲಕ್ಕೆ ಸರಿಯಾಗಿ ಸಿಗುತ್ತಿದ್ದರೆ ಹರ್ಷಿತನಾಗಬಾರದು. ಭಿಕ್ಷೆ ದೊರೆಯುವುದು ದೊರಕದಿರುವುದು ಎರಡೂ ಪ್ರಾರಬ್ಧಾಧೀನವೆಂದು ಭಾವಿಸಬೇಕು. ॥ ೩೩ ॥

ಆಹಾರಾರ್ಥಂ ಸಮೀಹೇತ ಯುಕ್ತಂ ತತ್ ಪ್ರಾಣಧಾರಣಮ್ ।
ತತ್ತ್ವಂ ವಿಮೃಶ್ಯತೇ ತೇನ ತದ್ವಿಜ್ಞಾಯ ವಿಮುಚ್ಯತೇ ॥ ೩೪ ॥

ಯದೃಚ್ಛಯೋಪಪನ್ನಾನ್ನಮದ್ಯಾಚ್ಛ್ರೇಷ್ಠ ಮುತಾಪರಮ್ ।
ತಥಾ ವಾಸಸ್ತಥಾ ಶಯ್ಯಾಂ ಪ್ರಾಪ್ತಂ ಪ್ರಾಪ್ತಂ ಭಜೇನ್ಮುನಿಃ ॥ ೩೫ ॥

ಶೌಚಮಾಚಮನಂ ಸ್ನಾನಂ ನ ತು ಚೋದನಯಾ ಚರೇತ್ ।
ಅನ್ಯಾಂಶ್ಚ ನಿಯಮಾನ್ ಜ್ಞಾನೀ ಯಥಾಹಂ ಲೀಲಯೇಶ್ವರಃ ॥ ೩೬ ॥

ನ ಹಿ ತಸ್ಯ ವಿಕಲ್ಪಾಖ್ಯಾ ಯಾ ಚ ಮದ್ವೀಕ್ಷಯಾ ಹತಾ ।
ಆದೇಹಾಂತಾತ್ ಕ್ವಚಿತ್ ಖ್ಯಾತಿಸ್ತತಃ ಸಂಪದ್ಯತೇ ಮಯಾ ॥ ೩೭ ॥

ದುಃಖೋದರ್ಕೇಷು ಕಾಮೇಷು ಜಾತನಿರ್ವೇದ ಆತ್ಮವಾನ್ ।
ಅಜಿಜ್ಞಾಸಿತಮದ್ಧರ್ಮೋ ಗುರುಂ ಮುನಿಮುಪಾವ್ರಜೇತ್ ॥ ೩೮ ॥

ತಾವತ್ಪರಿಚರೇದ್ಭಕ್ತಃ ಶ್ರದ್ಧಾವಾನನಸೂಯಕಃ ।
ಯಾವದ್ಬ್ರಹ್ಮ ವಿಜಾನೀಯಾನ್ಮಾಮೇವ ಗುರುಮಾದೃತಃ ॥ ೩೯ ॥

ಯಸ್ತ್ವಸಂಯತಷಡ್ವರ್ಗಃ ಪ್ರಚಂಡೇಂದ್ರಿಯಸಾರಥಿಃ ।
ಜ್ಞಾನವೈರಾಗ್ಯರಹಿತಸ್ತ್ರಿದಂಡಮುಪಜೀವತಿ ॥ ೪೦ ॥

ಸುರಾನಾತ್ಮಾನಮಾತ್ಮಸ್ಥಂ ನಿಹ್ನುತೇ ಮಾಂ ಚ ಧರ್ಮಹಾ ।
ಅವಿಪಕ್ವಕಷಾಯೋಽಸ್ಮಾದಮುಷ್ಮಾಚ್ಚ ವಿಹೀಯತೇ ॥ ೪೧ ॥

ಸಂನ್ಯಾಸಿಯಾದವನು ಭಿಕ್ಷೆಯನ್ನು ಅವಶ್ಯವಾಗಿ ಬೇಡಲೇಬೇಕು. ಹೀಗೆ ಮಾಡುವುದು ಉಚಿತವೂ ಆಗಿದೆ. ಏಕೆಂದರೆ, ಭಿಕ್ಷೆಯಿಂದಲೇ ಪ್ರಾಣಗಳ ರಕ್ಷಣೆಯಾಗುತ್ತದೆ. ಪ್ರಾಣಗಳು ಉಳಿಯುವುದರಿಂದಲೇ ತತ್ತ್ವದ ವಿಚಾರವಾಗುತ್ತದೆ. ತತ್ತ್ವವಿಚಾರದಿಂದ ತತ್ತ್ವಜ್ಞಾನ ಉಂಟಾಗಿ ಮುಕ್ತಿ ದೊರೆಯುತ್ತದೆ. ॥ ೩೪ ॥ ಸಂನ್ಯಾಸಿಗೆ ಪ್ರಾರಬ್ಧಕ್ಕನುಸಾರ ದೊರೆಯುವ ಭಿಕ್ಷೆಯು ಒಳ್ಳೆದಾಗಲಿ-ಕೆಟ್ಟದಾಗಲೀ ಅದರಿಂದಲೇ ಹೊಟ್ಟೆತುಂಬಿಸಿಕೊಳ್ಳಬೇಕು. ವಸ್ತ್ರ ಮತ್ತು ಹಾಸಿಗೆಯೂ ಕೂಡ ಹೇಗೆ ದೊರೆಯುವುದೋ ಅದರಿಂದಲೇ ನಿರ್ವಾಹ ಮಾಡಬೇಕು. ಅದರಲ್ಲಿ ಒಳ್ಳೆಯದು ಕೆಟ್ಟದು ಎಂಬುದನ್ನು ಕಲ್ಪಿಸಬಾರದು. ॥ ೩೫ ॥ ಪ್ರಪಂಚದಲ್ಲಿ ಈಶ್ವರನಾದ ನನಗೆ ಮಾಡಬೇಕಾದ ಯಾವ ಕರ್ತವ್ಯವೂ ಇಲ್ಲದಿದ್ದರೂ ಲೋಕಸಂಗ್ರಹಾರ್ಥ ಲೀಲೆಯಿಂದಲೇ ಶೌಚಾಚಮನ ಸ್ನಾನಗಳನ್ನು ಶಾಸ್ತ್ರೋಕ್ತವಾಗಿ ನಾನು ಮಾಡುವಂತೆ, ಜ್ಞಾನಿಯೂ ಶೌಚಾಚಮನ ಸ್ನಾನಾದಿ ನಿಯಮಗಳನ್ನು ಲೋಕಸಂಗ್ರಹಾರ್ಥವಾಗಿ ಪಾಲಿಸಬೇಕು. ಶಾಸ್ತ್ರವು ಹೇಳಿದೆ ಎಂಬ ಕಾರಣದಿಂದ ಅದಕ್ಕೆ ಅಂಟಿಕೊಂಡು ಕರ್ಮಮಾಡುವ ಅವಶ್ಯಕತೆ ನನ್ನಂತೆ ಜ್ಞಾನಿಗೂ ಇರುವುದಿಲ್ಲ. ॥ ೩೬ ॥ ಜ್ಞಾನಿಯಾದವನು ಏಕಮಾತ್ರ ಭಗವಂತನನ್ನೇ ಎಲ್ಲೆಡೆ ನೋಡುತ್ತಾನೆ. ಆದ್ದರಿಂದ ಭಗವಂತನು ಇದ್ದಾನೆ ಅಥವಾ ಇಲ್ಲ ಎಂಬ ಭೇದದ ಪ್ರತೀತಿಯೂ ಅವನಿಗಿರುವುದಿಲ್ಲ. ಶರೀರ ಬಿದ್ದುಹೋಗುವ ಮೊದಲು ಎಂದಾದರೂ ಶಾರೀರಿಕ ಕಷ್ಟದಿಂದಾಗಿ ಕೆಲಸಮಯ ಭೇದದ ಪ್ರತೀತಿ ಉಂಟಾದರೂ ಮರಣಾನಂತರ ಅವನು ನನ್ನನ್ನೇ ಸೇರುತ್ತಾನೆ. ॥ ೩೭ ॥

ಉದ್ಧವನೇ ! ಜಿತೇಂದ್ರಿಯ ಪುರುಷನಿಗೆ ಸಾಂಸಾರಿಕ ವಿಷಯ ಭೋಗಗಳ ಫಲವು ದುಃಖವೇ ಆಗಿದೆ ಎಂಬ ನಿಶ್ಚಯವಾದಾಗ, ಅವನು ವಿರಕ್ತನಾಗುವನು. ಅವನು ನನ್ನ ಪ್ರಾಪ್ತಿಯ ಸಾಧನೆಗಳನ್ನು ತಿಳಿಯದಿದ್ದರೆ, ಭಗವಚ್ಚಿಂತನದಲ್ಲಿ ತನ್ಮಯನಾದ ಬ್ರಹ್ಮನಿಷ್ಠ ಸದ್ಗುರುವಿನಲ್ಲಿ ಶರಣುಹೋಗಬೇಕು. ॥ ೩೮ ॥ ಅವನು ಗುರುವಿನಲ್ಲಿ ದೃಢಭಕ್ತಿಗೈದು, ಶ್ರದ್ಧೆಯಿಡಬೇಕು ಮತ್ತು ಅವರಲ್ಲಿ ಎಂದೂ ದೋಷದೃಷ್ಟಿ ಇರಿಸಬಾರದು. ಬ್ರಹ್ಮಜ್ಞಾನ ಆಗುವವರೆಗೆ ತುಂಬಾ ಆದರದಿಂದ ನನ್ನನ್ನೇ ಗುರುವಿನ ರೂಪದಲ್ಲಿ ಅರಿತುಕೊಂಡು ಅವರನ್ನು ಸೇವಿಸಬೇಕು. ॥ ೩೯॥ ಆದರೆ ಐದು ಇಂದ್ರಿಯಗಳು ಮತ್ತು ಮನಸ್ಸು ಈ ಆರರ ಮೇಲೆ ವಿಜಯವನ್ನು ಪಡೆಯದವನು, ಇಂದ್ರಿಯರೂಪೀ ಕುದುರೆಗಳು, ಬುದ್ಧಿರೂಪೀ ಸಾರಥಿಯೂ ಕೆಟ್ಟುಹೋಗಿರುವವನು, ಹೃದಯದಲ್ಲಿ ಜ್ಞಾನ-ವೈರಾಗ್ಯವಿಲ್ಲದವನು, ತ್ರಿದಂಡಿ ಸಂನ್ಯಾಸಿಯ ವೇಷ ತೊಟ್ಟುಕೊಂಡು ಹೊಟ್ಟೆಹೊರೆಯುತ್ತಿದ್ದರೆ, ಅವನು ಸಂನ್ಯಾಸ ಧರ್ಮವನ್ನು ನಾಶಮಾಡುತ್ತಿದ್ದಾನೆ ಹಾಗೂ ತನ್ನ ಹೃದಯದಲ್ಲಿದ್ದ ನನ್ನನ್ನು ಮೋಸಗೊಳಿಸುವ ಚೇಷ್ಟೆ ಮಾಡುತ್ತಾನಷ್ಟೆ. ಇನ್ನೂ ಆ ವೇಷಮಾತ್ರದ ಸಂನ್ಯಾಸಿಯ ವಾಸನೆಗಳು ಕ್ಷೀಣವಾಗಲಿಲ್ಲ; ಆದರಿಂದ ಅವನು ಈ ಲೋಕ ಮತ್ತು ಪರಲೋಕ ಎರಡರಿಂದಲೂ ವಂಚಿತನಾಗಿ ಭ್ರಷ್ಟನಾಗುತ್ತಾನೆ. ॥ ೪೦-೪೧ ॥

ಭಿಕ್ಷೋರ್ಧರ್ಮಃ ಶಮೋಽಹಿಂಸಾ ತಪ ಈಕ್ಷಾ ವನೌಕಸಃ ।
ಗೃಹಿಣೋ ಭೂತರಕ್ಷೇಜ್ಯಾ ದ್ವಿಜಸ್ಯಾಚಾರ್ಯಸೇವನಮ್
॥ ೪೨ ॥

ಬ್ರಹ್ಮಚರ್ಯಂ ತಪಃ ಶೌಚಂ ಸಂತೋಷೋ ಭೂತಸೌಹೃದಮ್ ।
ಗೃಹಸ್ಥಸ್ಯಾಪ್ಯೃತೌ ಗಂತುಃ ಸರ್ವೇಷಾಂ ಮದುಪಾಸನಮ್
॥ ೪೩ ॥

ಇತಿ ಮಾಂ ಯಃ ಸ್ವಧರ್ಮೇಣ ಭಜನ್ನಿತ್ಯಮನನ್ಯಭಾಕ್ ।
ಸರ್ವಭೂತೇಷು ಮದ್ಭಾವೋ ಮದ್ ಭಕ್ತಿಂ ವಿಂದಂತೇ ದೃಢಾಮ್
॥ ೪೪ ॥

ಭಕ್ತ್ಯೋದ್ಧವಾನಪಾಯಿನ್ಯಾ ಸರ್ವಲೋಕಮಹೇಶ್ವರಮ್ ।
ಸರ್ವೋತ್ಪತ್ತ್ಯಪ್ಯಯಂ ಬ್ರಹ್ಮ ಕಾರಣಂ ಮೋಪಯಾತಿ ಸಃ
॥ ೪೫ ॥

ಇತಿ ಸ್ವಧರ್ಮನಿರ್ಣಿಕ್ತಸತ್ತ್ವೋ ನಿರ್ಜ್ಞಾತಮದ್ಗತಿಃ ।
ಜ್ಞಾನವಿಜ್ಞಾನಸಂಪನ್ನೋ ನಚಿರಾತ್ಸಮುಪೈತಿ ಮಾಮ್
॥ ೪೬ ॥

ವರ್ಣಾಶ್ರಮವತಾಂ ಧರ್ಮ ಏಷ ಆಚಾರಲಕ್ಷಣಃ ।
ಸ ಏವ ಮದ್ಭಕ್ತಿಯುತೋ ನಿಃಶ್ರೇಯಸಕರಃ ಪರಃ
॥ ೪೭ ॥

ಏತತ್ತೇಽಭಿಹಿತಂ ಸಾಧೋ
ಭವಾನ್ ಪೃಚ್ಛತಿ ಯಚ್ಚ ಮಾಮ್ ।
ಯಥಾ ಸ್ವಧರ್ಮಸಂಯುಕ್ತೋ
ಭಕ್ತೋ ಮಾಂ ಸಮಿಯಾತ್ಪರಮ್ ॥ ೪೮ ॥

ಶಾಂತಿ ಮತ್ತು ಅಹಿಂಸೆ ಇವು ಸಂನ್ಯಾಸಿಯ ಮುಖ್ಯ ಧರ್ಮಗಳು. ತಪಸ್ಸು ಹಾಗೂ ಭಗವದ್ಭಾವ ವಾನಪ್ರಸ್ಥಿಯ ಮುಖ್ಯ ಧರ್ಮಗಳು. ಪ್ರಾಣಿಗಳ ರಕ್ಷಣೆ, ಯಜ್ಞ-ಯಾಗ ಮಾಡುವುದು, ಇವು ಗೃಹಸ್ಥನ ಮುಖ್ಯ ಧರ್ಮಗಳಾದರೆ, ಬ್ರಹ್ಮಚಾರಿಯ ಮುಖ್ಯ ಧರ್ಮ ಆಚಾರ್ಯರ ಸೇವೆ ಆಗಿದೆ. ॥ ೪೨ ॥ ಗೃಹಸ್ಥನು ಋತು ಕಾಲದಲ್ಲಿ ಮಾತ್ರವೇ ಭಾರ್ಯೆಯೊಡನೆ ಸಮಾಗಮಮಾಡಲಿ. ಅವನಿಗಾಗಿಯೂ ಬ್ರಹ್ಮಚರ್ಯ, ತಪಸ್ಸು, ಶೌಚ, ಸಂತೋಷ, ಸಮಸ್ತಪ್ರಾಣಿಗಳಲ್ಲಿ ಪ್ರೇಮಭಾವ ಇವು ಮುಖ್ಯ ಧರ್ಮಗಳಾಗಿವೆ. ನನ್ನ ಉಪಾಸನೆಯಾದರೋ ಎಲ್ಲರೂ ಮಾಡಬೇಕು. ॥ ೪೩ ॥ ಈ ವಿಧವಾಗಿ ಅನನ್ಯ ಭಾವದಿಂದ ತನ್ನ ವರ್ಣಾಶ್ರಮದ ಮೂಲಕ ನನ್ನ ಸೇವೆಯಲ್ಲಿ ತೊಡಗಿದ್ದು ಸಮಸ್ತ ಪ್ರಾಣಿಗಳಲ್ಲಿ ನನ್ನ ಭಾವನೆ ಇರಿಸುವ ಮನುಷ್ಯನಿಗೆ ನನ್ನ ಅವಿಚಲ ಭಕ್ತಿಯು ಪ್ರಾಪ್ತವಾಗು ತ್ತದೆ. ॥ ೪೪ ॥ ಉದ್ಧವನೇ ! ನಾನೇ ಸಮಸ್ತ ಲೋಕಗಳ ಏಕಮಾತ್ರ ಸ್ವಾಮಿಯೂ, ಎಲ್ಲರ ಉತ್ಪತ್ತಿ, ಪ್ರಳಯದ ಪರಮ ಕಾರಣ ಬ್ರಹ್ಮನೂ ಆಗಿರುವೆನು. ನಿತ್ಯ-ನಿರಂತರ ಅಖಂಡ ಭಕ್ತಿಯಿಂದ ಅವನು ನನ್ನನ್ನೇ ಪಡೆದುಕೊಳ್ಳುವನು. ॥ ೪೫ ॥ ಈ ಪ್ರಕಾರ ಆ ಗೃಹಸ್ಥನು ತನ್ನ ಧರ್ಮಪಾಲನೆಯಿಂದ ಅಂತಃಕರಣವನ್ನು ಚೆನ್ನಾಗಿ ಶುದ್ಧಮಾಡಿಕೊಂಡು ನನ್ನ ಐಶ್ವರ್ಯ-ಸ್ವರೂಪವನ್ನು ತಿಳಿದು ಕೊಳ್ಳುವನು ಹಾಗೂ ಜ್ಞಾನ-ವಿಜ್ಞಾನದಿಂದ ಸಂಪನ್ನನಾಗಿ ಬೇಗನೇ ನನ್ನನ್ನು ಪಡೆದುಕೊಳ್ಳುತ್ತಾನೆ. ॥ ೪೬ ॥ ನಾನು ನಿನಗೆ ಈ ಸದಾಚಾರರೂಪೀ ವರ್ಣಾಶ್ರಮಿಗಳ ಧರ್ಮವನ್ನು ಹೇಳಿರು ವೆನು. ಈ ಧರ್ಮಾನುಷ್ಠಾನದಲ್ಲಿ ನನ್ನ ಭಕ್ತಿಯಿಂದಲೂ ಸಂಪನ್ನ ನಾದರೆ ಇದರಿಂದ ಆಯಾಸವಿಲ್ಲದೆಯೇ ಪರಮ ಶ್ರೇಯಸ್ಕರ ವಾದ ಮೋಕ್ಷದ ಪ್ರಾಪ್ತಿಯಾಗಿ ಹೋಗುತ್ತದೆ. ॥ ೪೭ ॥ ಸಾಧು ಶಿರೋಮಣಿ ಉದ್ಧವಾ ! ನೀನು ನನ್ನಲ್ಲಿ ಪ್ರಶ್ನಿಸಿದುದರ ಉತ್ತರವನ್ನು ನಾನು ಕೊಟ್ಟಿರುವೆನು. ತನ್ನ ಧರ್ಮವನ್ನು ಪಾಲಿಸುವ ಭಕ್ತನು ಪರಬ್ರಹ್ಮಸ್ವರೂಪೀ ನನ್ನನ್ನು ಹೇಗೆ ಪಡೆದುಕೊಳ್ಳುತ್ತಾನೆ ಎಂಬು ದನ್ನೂ ಹೇಳಿರುವೆನು. ॥ ೪೮ ॥

*ಹದಿನೆಂಟನೆಯ ಅಧ್ಯಾಯವು ಮುಗಿಯಿತು. ॥ ೧೮ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಏಕಾದಶ ಸ್ಕಂಧೇ ಅಷ್ಟಾದಶೋಽಧ್ಯಾಯಃ ॥ ೧೮ ॥

# ಹತ್ತೊಂಭತ್ತನೆಯ ಅಧ್ಯಾಯ

## ಜ್ಞಾನ, ಭಕ್ತಿ , ಯಮ, ನಿಯಮ ಮುಂತಾದ ಸಾಧನೆಗಳ ವರ್ಣನೆ

*ಶ್ರೀಭಗವಾನುವಾಚ*

ಯೋ ವಿದ್ಯಾಶ್ರುತಸಂಪನ್ನ
ಆತ್ಮವಾನ್ ನಾನುಮಾನಿಕಃ ।
ಮಾಯಾಮಾತ್ರಮಿದಂ ಜ್ಞಾತ್ವಾ
ಜ್ಞಾನಂ ಚ ಮಯಿ ಸಂನ್ಯಸೇತ್ ॥ ೧ ॥

ಭಗವಾನ್ ಶ್ರೀಕೃಷ್ಣನು ಹೇಳುತ್ತಾನೆ – ಎಲೈ ಉದ್ಧವನೇ ! ಉಪನಿಷದಾದಿ ಶಾಸ್ತ್ರಗಳ ಶ್ರವಣ, ಮನನ, ನಿದಿಧ್ಯಾಸನದ ಮೂಲಕ ಆತ್ಮಸಾಕ್ಷಾತ್ಕಾರ ಪಡೆದಿರುವವನು, ಶ್ರೋತ್ರಿಯ ಹಾಗೂ ಬ್ರಹ್ಮನಿಷ್ಠನಾಗಿರುವವನು, ನಿಶ್ಚಯವು ಕೇವಲ ಯುಕ್ತಿಗಳಿಂದ ಮತ್ತು ಅನುಮಾನದಿಂದ ಪ್ರತ್ಯಕ್ಷವಾಗಿ ಇದೆಲ್ಲವೂ ಮಾಯಾಮಯ ವಾಗಿದೆ ಎಂಬ ಅನುಭವವನ್ನು ಪಡೆದಿರುವವನು ಪಡೆದ ಜ್ಞಾನ ವನ್ನೂ ನನ್ನಲ್ಲೇ ಲೀನಗೊಳಿಸಲಿ. ॥ ೧ ॥

ಜ್ಞಾನಿನಸ್ತ್ವಹಮೇವೇಷ್ಟಃ ಸ್ವಾರ್ಥೋ ಹೇತುಶ್ಚ ಸಂಮತಃ ।
ಸ್ವರ್ಗಶ್ಚೈವಾಪವರ್ಗಶ್ಚ ನಾನ್ಯೋಽರ್ಥೋ ಮದೃತೇ ಪ್ರಿಯಃ
॥ ೨ ॥

ಜ್ಞಾನವಿಜ್ಞಾನಸಂಸಿದ್ಧಾಃ ಪದಂ ಶ್ರೇಷ್ಠಂ ವಿದುರ್ಮಮ ।
ಜ್ಞಾನೀ ಪ್ರಿಯತಮೋಽತೋ ಮೇ ಜ್ಞಾನೇನಾಸೌ ಬಿಭರ್ತಿಮಾಮ್
॥ ೩ ॥

ತಪಸ್ತೀರ್ಥಂ ಜಪೋ ದಾನಂ ಪವಿತ್ರಾಣೀತರಾಣಿ ಚ ।
ನಾಲಂ ಕುರ್ವಂತಿ ತಾಂ ಸಿದ್ಧಿಂ ಯಾ ಜ್ಞಾನಕಲಯಾ ಕೃತಾ
॥ ೪ ॥

ತಸ್ಮಾಜ್ಜ್ಞಾನೇನ ಸಹಿತಂ ಜ್ಞಾತ್ವಾ ಸ್ವಾತ್ಮಾನಮುದ್ಧವ ।
ಜ್ಞಾನವಿಜ್ಞಾನಸಂಪನ್ನೋ ಭಜ ಮಾಂ ಭಕ್ತಿಭಾವಿತಃ
॥ ೫ ॥

ಜ್ಞಾನವಿಜ್ಞಾನಯಜ್ಞೇನ ಮಾಮಿಷ್ಟ್ವಾಽಽತ್ಮಾನಮಾತ್ಮನಿ ।
ಸರ್ವಯಜ್ಞಪತಿಂ ಮಾಂ ವೈ ಸಂಸಿದ್ಧಿಂ ಮುನಯೋಽಗಮನ್
॥ ೬ ॥

ತ್ವಯ್ಯುದ್ಧವಾಶ್ರಯತಿ ಯಸ್ತ್ರಿವಿಧೋ ವಿಕಾರೋ
ಮಾಯಾಂತರಾಽಽಪತತಿ ನಾದ್ಯಪವರ್ಗಯೋರ್ಯತ್ ।
ಜನ್ಮಾದಯೋಽಸ್ಯ ಯದಮೀ ತವ ತಸ್ಯ ಕಿಂ ಸ್ಯು-
ರಾದ್ಯಂತಯೋರ್ಯದಸತೋಽಸ್ತಿ ತದೇವ ಮಧ್ಯೇ
॥ ೭ ॥

*ಉದ್ಧವ ಉವಾಚ*

ಜ್ಞಾನಂ ವಿಶುದ್ಧಂ ವಿಪುಲಂ ಯಥೈತದ್
ವೈರಾಗ್ಯವಿಜ್ಞಾನಯುತಂ ಪುರಾಣಮ್ ।
ಆಖ್ಯಾಹಿ ವಿಶ್ವೇಶ್ವರ ವಿಶ್ವಮೂರ್ತೇ
ತ್ವದ್‌ಭಕ್ತಿಯೋಗಂ ಚ ಮಹದ್ವಿಮೃಗ್ಯಮ್ ॥ ೮ ॥

ತಾಪತ್ರಯೇಣಾಭಿಹತಸ್ಯ ಘೋರೇ
ಸಂತಪ್ಯಮಾನಸ್ಯ ಭವಾಧ್ವನೀಶ ।
ಪಶ್ಯಾಮಿ ನಾನ್ಯಚ್ಛರಣಂ ತವಾಂಘ್ರಿ-
ದ್ವಂದ್ವಾತಪತ್ರಾದಮೃತಾಭಿವರ್ಷಾತ್ ॥ ೯ ॥

ದಷ್ಟಂ ಜನಂ ಸಂಪತಿತಂ ಬಿಲೇಽಸ್ಮಿನ್
ಕಾಲಾಹಿನಾ ಕ್ಷುದ್ರಸುಖೋರುತರ್ಷಮ್ ।
ಸಮುದ್ಧರೈನಂ ಕೃಪಯಾಽಽಪವರ್ಗ್ಯೈಃ
ವಚೋಭಿರಾಸಿಂಚ ಮಹಾನುಭಾವ ॥ ೧೦ ॥

ಜ್ಞಾನಿಗೆ ಅಭೀಷ್ಟವಸ್ತುವು ನಾನೇ ಆಗಿದ್ದೇನೆ. ಅವನ ಸಾಧನೆ ಸಾಧ್ಯ, ಸ್ವರ್ಗ ಮತ್ತು ಅಪವರ್ಗ (ಮೋಕ್ಷ)ವೂ ನಾನೇ ಆಗಿದ್ದೇನೆ. ನಾನಲ್ಲದೆ ಬೇರೆ ಯಾವ ಪದಾರ್ಥವನ್ನು ಅವನು ಪ್ರೇಮಿಸುವುದಿಲ್ಲ. ॥ ೨ ॥ ಜ್ಞಾನ-ವಿಜ್ಞಾನದಿಂದ ಸಂಪನ್ನನಾದ ಸಿದ್ಧಪುರುಷನೇ ನನ್ನ ವಾಸ್ತವಿಕ ಸ್ವರೂಪವನ್ನು ಪರಮಪದವನ್ನು ಅರಿಯುತ್ತಾನೆ. ಅದಕ್ಕಾಗಿ ಜ್ಞಾನಿಯು ನನಗೆ ಪ್ರಿಯನಾಗಿದ್ದಾನೆ. ಉದ್ಧವನೇ ! ಜ್ಞಾನಿಯು ತನ್ನ ಜ್ಞಾನದಿಂದ ನಿರಂತರವಾಗಿ ನನ್ನನ್ನು ತನ್ನ ಅಂತಃಕರಣದಲ್ಲಿ ಧರಿಸಿಕೊಂಡಿರುತ್ತಾನೆ. ॥ ೩ ॥ ಜ್ಞಾನದ ಒಂದು ಕಲೆಯಿಂದ ದೊರೆಯಬಹುದಾದ ಸಿದ್ಧಿಯು, ತಪಸ್ಸು ತೀರ್ಥಯಾತ್ರೆ, ಜಪ, ದಾನ, ಅಥವಾ ಬೇರೆ ಪವಿತ್ರ ಕ್ರಿಯಾಕಲಾಪಗಳಿಂದ ಸಿಗಲಾರದು. ॥ ೪ ॥

ಆದಕ್ಕಾಗಿ ಪ್ರೀತಿಯ ಉದ್ಧವನೇ ! ನೀನು ಜ್ಞಾನದ ಸಹಿತ ನಿನ್ನ ಆತ್ಮಸ್ವರೂಪವನ್ನು ಅರಿತುಕೋ. ಮತ್ತೆ ಜ್ಞಾನ-ವಿಜ್ಞಾನದಿಂದ ಸಂಪನ್ನನಾಗಿ ಭಕ್ತಿಭಾವದಿಂದ ನನ್ನ ಭಜನೆಮಾಡು. ॥ ೫ ॥ ದೊಡ್ಡ ದೊಡ್ಡ ಋಷಿ-ಮುನಿಗಳು ಜ್ಞಾನ-ವಿಜ್ಞಾನರೂಪೀ ಯಜ್ಞದ ಮೂಲಕ ತಮ್ಮ ಅಂತಃಕರಣದಲ್ಲೇ ಸ್ಥಿತನಾದ ಸಮಸ್ತ ಯಜ್ಞಗಳಿಗೂ ಅಧಿಪತಿಯೂ, ಆತ್ಮಸ್ವರೂಪನೂ ಆದ ನನ್ನನ್ನು ಆರಾಧಿಸಿ ಸಿದ್ಧಿಯನ್ನು ಪಡೆದುಕೊಂಡಿರುವರು. ॥ ೬ ॥ ಎಲೈ ಉದ್ಧವನೇ ! ದೇಹ, ಇಂದ್ರಿಯ, ಅಂತಃಕರಣದ ರೂಪದಿಂದ ಯಾವ ತ್ರಿಗುಣಾತ್ಮಿಕಾ ಪ್ರಕೃತಿಯ ವಿಕಾರರೂಪೀ ಶರೀರವಿದೆಯೋ, ಇದನ್ನೇ ನೀನು ಆಶ್ರಯಿಸಿರುವೆ. ಇದು ಅಜ್ಞಾನದ ಕಾರಣವೇ ಆಗಿದೆ. ಮಾಯೆಯಿಂದ ಆವೃತವಾದ್ದರಿಂದಲೇ ಇದರ ಪ್ರತೀತಿಯಾಗುತ್ತಿದೆ. ಇದು ಹುಟ್ಟುವ ಮೊದಲು ಅವ್ಯಕ್ತವಾಗಿತ್ತು , ಸತ್ತ ಬಳಿಕವೂ ಅವ್ಯಕ್ತವಾಗುತ್ತದೆ. ಕೇವಲ ನಡುವಿನಲ್ಲಿ ಮಾಯೆಯ ಕಾರಣದಿಂದ ಕಾಣುತ್ತಿದೆ. ಜನ್ಮ ಮುಂತಾದ ಆರು ವಿಕಾರಗಳು ಇದಕ್ಕೆ ಆಗುತ್ತವೆ. ಇಂತಹ ನಾಶವುಳ್ಳ ಶರೀರದೊಂದಿಗೆ ನಿನಗೆ ಯಾವ ಸಂಬಂಧವಿದೆ. ಅದು ಆದಿಯಲ್ಲಿ ಅಸತ್ತಾಗಿದೆ, ಅಂತ್ಯದಲ್ಲಿಯೂ ಅಸತ್ತಾಗಿದೆ, ಆದ್ದರಿಂದ ಮಧ್ಯದಲ್ಲಿಯೂ ಅಸತ್ತಾಗಿಯೇ ಇದೆ. ॥ ೭ ॥

**ಉದ್ಧವನೆಂದನು** – ಓ ವಿಶ್ವೇಶ್ವರಾ ! ವಿಶ್ವಮೂರ್ತೇ ! ಈಗ ನೀನು ವರ್ಣಿಸಿದ ಜ್ಞಾನವು ವಿಶುದ್ಧ, ವಿಪುಲ, ಸನಾತನವಾಗಿದೆ ; ವೈರಾಗ್ಯ, ವಿಜ್ಞಾನದಿಂದ ಯುಕ್ತವಾಗಿದೆ. ಈಗ ನೀನು ದಯಮಾಡಿ ಬ್ರಹ್ಮಾದಿ ದೇವತೆಗಳೂ ಹುಡುಕುತ್ತಿರುವ ಭಕ್ತಿಯೋಗದ ವಿಷಯದಲ್ಲಿ ಹೇಳು. ॥ ೮ ॥ ನನ್ನ ಸ್ವಾಮಿಯೇ ! ನಾನು ಈ ಭವಸಾಗರದಲ್ಲಿ ಮೂರೂ ತಾಪಗಳಿಗೆ ತುತ್ತಾಗಿ ಅತ್ಯಂತ ಪೀಡಿತನಾಗಿರುವೆನು. ಈ ಸಂಕಟದಿಂದ ಪಾರಾಗಲು ನಿನ್ನ ಈ ಅಮೃತ ವರ್ಷಿಸುವಂತಹ ಶರಣಾಗತರಿಗೆ ಅಭಯ ಕೊಡುವಂತಹ ಚರಣಯುಗಳಗಳಲ್ಲಿ ಶರಣಾಗುವ ಹೊರತು ನನಗೆ ಬೇರೆ ಯಾವ ಉಪಾಯವೂ ಕಾಣುವುದಿಲ್ಲ. ॥ ೯ ॥ ಮಹಾನುಭಾವಾ ! ನಿನ್ನ ಈ ಸೇವಕನು ಕತ್ತಲೆಯ ಮಡುವಿನಲ್ಲಿ ಬಿದ್ದಿರುವನು, ಕಾಲರೂಪೀ ಸರ್ಪವು ಇವನನ್ನು ಕಚ್ಚಿಕೊಂಡಿರುವುದು. ಆದರೂ ವಿಷಯಗಳ ಕ್ಷುದ್ರ ಸುಖ-ಭೋಗಗಳ ತೀವ್ರ ತೃಷ್ಣೆಯು ಇಂಗುವುದಿಲ್ಲ, ಬೆಳೆಯುತ್ತಲೇ ಹೋಗುತ್ತಿದೆ. ನೀನು ದಯಮಾಡಿ ಇವನನ್ನು ಉದ್ಧರಿಸು. ಇದರಿಂದ ಮುಕ್ತಗೊಳಿಸುವಂತಹ ವಾಣಿಯಿಂದ ಅಮೃತ ಸಿಂಚನ ಮಾಡು. ॥ ೧೦ ॥

ಶ್ರೀಭಗವಾನುವಾಚ

**ಇತ್ಥಮೇತತ್ ಪುರಾ ರಾಜಾ ಭೀಷ್ಮಂ ಧರ್ಮಭೃತಾಂ ವರಮ್ ।**
**ಅಜಾತಶತ್ರುಃ ಪಪ್ರಚ್ಛ ಸರ್ವೇಷಾಂ ನೋಽನುಶೃಣ್ವತಾಮ್ ॥ ೧೧ ॥**

**ನಿವೃತ್ತೇ ಭಾರತೇ ಯುದ್ಧೇ ಸುಹೃನ್ನಿಧನವಿಹ್ವಲಃ ।**
**ಶ್ರುತ್ವಾ ಧರ್ಮಾನ್ಬಹೂನ್ಪಶ್ಚಾನ್ಮೋಕ್ಷಧರ್ಮಾನಪೃಚ್ಛತ ॥ ೧೨ ॥**

**ತಾನಹಂ ತೇಽಭಿಧಾಸ್ಯಾಮಿ ದೇವವ್ರತಮುಖಾಚ್ಛ್ರುತಾನ್ ।**
**ಜ್ಞಾನವೈರಾಗ್ಯವಿಜ್ಞಾನಶ್ರದ್ಧಾಭಕ್ತ್ಯುಪಬೃಂಹಿತಾನ್ ॥ ೧೩ ॥**

**ನವೈಕಾದಶ ಪಂಚ ತ್ರೀನ್ಭಾವಾನ್ಭೂತೇಷು ಯೇನ ವೈ ।**
**ಈಕ್ಷೇತಾಥೈಕಮಪ್ಯೇಷು ತಜ್ಜ್ಞಾನಂ ಮಮ ನಿಶ್ಚಿತಮ್ ॥ ೧೪ ॥**

**ಏತದೇವ ಹಿ ವಿಜ್ಞಾನಂ ನ ತಥೈಕೇನ ಯೇನ ಯತ್ ।**
**ಸ್ಥಿತ್ಯುತ್ಪತ್ತ್ಯಪ್ಯಯಾನ್ ಪಶ್ಯೇದ್ಭಾವಾನಾಂ ತ್ರಿಗುಣಾತ್ಮನಾಮ್ ॥ ೧೫ ॥**

**ಆದಾವಂತೇ ಚ ಮಧ್ಯೇ ಚ ಸೃಜ್ಯಾತ್ಸೃಜ್ಯಂ ಯದನ್ವಿಯಾತ್ ।**
**ಪುನಸ್ತತ್ಪ್ರತಿಸಂಕ್ರಾಮೇ ಯಚ್ಛಿಷ್ಯೇತ ತದೇವ ಸತ್ ॥ ೧೬ ॥**

**ಶ್ರುತಿಃ ಪ್ರತ್ಯಕ್ಷಮೈತಿಹ್ಯಮನುಮಾನಂ ಚತುಷ್ಟಯಮ್ ।**
**ಪ್ರಮಾಣೇಷ್ವನವಸ್ಥಾನಾದ್ವಿಕಲ್ಪಾತ್ ಸ ವಿರಜ್ಯತೇ ॥ ೧೭ ॥**

**ಕರ್ಮಣಾಂ ಪರಿಣಾಮಿತ್ವಾದಾವಿರಿಂಚಾದಮಂಗಲಮ್ ।**
**ವಿಪಶ್ಚಿನ್ನಶ್ವರಂ ಪಶ್ಯೇದದೃಷ್ಟಮಪಿ ದೃಷ್ಟವತ್ ॥ ೧೮ ॥**

**ಭಗವಾನ್ ಶ್ರೀಕೃಷ್ಣನು ಹೇಳುತ್ತಾನೆ –** ಉದ್ಧವನೇ! ನೀನು ನನ್ನಲ್ಲಿ ಪ್ರಶ್ನಿಸಿದಂತೆಯೇ ಧರ್ಮರಾಜ ಯುಧಿಷ್ಠಿರನು ಧಾರ್ಮಿಕ ಶಿರೋಮಣಿ ಭೀಷ್ಮಪಿತಾಮಹರಲ್ಲಿ ಪ್ರಶ್ನೆಮಾಡಿದ್ದನು. ಆಗ ನಾವೆಲ್ಲರೂ ಅಲ್ಲಿ ಉಪಸ್ಥಿತರಾಗಿದ್ದೆವು. ॥ ೧೧ ॥ ಮಹಾಭಾರತ ಯುದ್ಧವು ಮುಗಿದು, ಧರ್ಮರಾಜಾ ಯುಧಿಷ್ಠಿರನು ತನ್ನ ಸ್ವಜನ-ಸಂಬಂಧಿಗಳ ಸಂಹಾರದಿಂದಾಗಿ ಶೋಕವಿಹ್ವಲನಾಗಿದ್ದಾಗ, ಅವನು ಭೀಷ್ಮಪಿತಾಮಹರಲ್ಲಿ ಅನೇಕ ಧರ್ಮಗಳ ವಿವರಣೆಯನ್ನು ಕೇಳಿದ ಬಳಿಕ, ಮೋಕ್ಷ ಸಾಧನೆಗಳ ಕುರಿತು ಪ್ರಶ್ನಿಸಿದ್ದನು. ॥ ೧೨ ॥ ಆಗ ಭೀಷ್ಮಪಿತಾಮಹರ ಮುಖದಿಂದ ಕೇಳಿದ ಮೋಕ್ಷಧರ್ಮವನ್ನು ನಾನು ನಿನಗೆ ಹೇಳುವೆನು. ಏಕೆಂದರೆ ಅದು ಜ್ಞಾನ, ವೈರಾಗ್ಯ, ವಿಜ್ಞಾನ, ಶ್ರದ್ಧೆ ಭಕ್ತಿ ಇವುಗಳ ಭಾವಗಳಿಂದ ಪರಿಪೂರ್ಣವಾಗಿದೆ. ॥ ೧೩ ॥ ಉದ್ಧವನೇ! ಪ್ರಕೃತಿ, ಪುರುಷ, ಮಹತ್ತತ್ತ್ವ, ಅಹಂಕಾರ, ಪಂಚತನ್ಮಾತ್ರೆಗಳು ಹೀಗೆ ಈ ಒಂಭತ್ತು ; ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು, ಮನಸ್ಸು ಹೀಗೆ ಹನ್ನೊಂದು ; ಪಂಚಮಹಾಭೂತಗಳು ಹಾಗೂ ತ್ರಿಗುಣಗಳು ಹೀಗೆ ಎಂಟು. ಒಟ್ಟಿಗೆ ಈ ಇಪ್ಪತ್ತೆಂಟು ತತ್ತ್ವಗಳು ಬ್ರಹ್ಮನಿಂದ ಹಿಡಿದು ತೃಣದವರೆಗಿನ ಎಲ್ಲ ಕಾರ್ಯಗಳಲ್ಲಿ ನೋಡಲಾಗುವುದೇ ಜ್ಞಾನವಾಗಿದೆ. ಈ ಇಪ್ಪತ್ತೆಂಟು ತತ್ತ್ವಗಳಲ್ಲಿ ಅನುಗತನಾದ ಪರಮಾತ್ಮ ತತ್ತ್ವವನ್ನು ನೋಡುವುದೇ ವಿಜ್ಞಾನವಾಗಿದೆ ಎಂಬುದು ನನ್ನ ನಿಶ್ಚಿತವಾದ ಅಭಿಪ್ರಾಯವಾಗಿದೆ. ॥ ೧೪ ॥ ಈ ಇಪ್ಪತ್ತೆಂಟು ತತ್ತ್ವಗಳು ಉತ್ಪತ್ತಿ, ಸ್ಥಿತಿ ಮತ್ತು ನಾಶವುಳ್ಳವುಗಳು. ತ್ರಿಗುಣಾತ್ಮಿಕಾ ಮಾಯೆಯ ಕಾರ್ಯವಾಗಿದೆ. ಈ ಭಾವಗಳಿಂದಲೇ ಭಗವಂತನು ಪ್ರಪಂಚದ ಉತ್ಪತ್ತಿ, ಸ್ಥಿತಿ, ಸಂಹಾರ ರೂಪೀ ಲೀಲೆಮಾಡುತ್ತಾನೆ. ಇದರಲ್ಲದರಲ್ಲಿ ಅನುಗತನಾದ ಪರಮಾತ್ಮತತ್ತ್ವವು ಶಾಶ್ವತವಾಗಿದೆ. ಹೀಗೆ ಕೇವಲ ಒಂದೇ ತತ್ತ್ವವು ಅನುಭವದಲ್ಲಿ ಉಳಿದಾಗ, ಅದನ್ನು ವಿಜ್ಞಾನವೆಂದು ಹೇಳುತ್ತಾರೆ. ॥ ೧೫ ॥ ಈ ಪ್ರಕಾರ ಓರ್ವ ಪರಮಾತ್ಮನೇ ಆದಿ, ಮಧ್ಯ ಮತ್ತು ಅಂತ್ಯದಲ್ಲಿಯೂ ಇದ್ದಾನೆ. ಅವನು ತನ್ನಲ್ಲಿಯೇ ಈ ವಿಶ್ವವನ್ನು ಸೃಷ್ಟಿಸಿದನು ಹಾಗೂ ಅವನೇ ಇದರಲ್ಲಿ ಅನುಗತನಾದನು, ಅಂದರೆ ಸೇರಿಕೊಂಡನು. ಮತ್ತೆ ಪ್ರಳಯಮಾಡುವಾಗ ಅವನೇ ಪುನಃ ಇದನ್ನು ತನ್ನಲ್ಲೇ ಲೀನಗೊಳಿಸಿಕೊಳ್ಳುವನು. ಹೀಗೆ ಶೇಷವಾಗಿ ಉಳಿಯುವುದೇ ಸತ್ ತತ್ತ್ವವಾಗಿದೆ. ॥ ೧೬ ॥ ಶ್ರುತಿ (ವೇದ) ಪ್ರಮಾಣದಿಂದ, ಪ್ರತ್ಯಕ್ಷ ಪ್ರಮಾಣದಿಂದ, ಐತಿಹ್ಯ (ಮಹಾಪುರುಷರ ವಚನ)ದಿಂದ ಮತ್ತು ಅನುಮಾನ ಪ್ರಮಾಣದಿಂದ ಭೇದಬುದ್ಧಿಯ ಅಸ್ತಿತ್ವವು ಯಾವುದೇ ರೀತಿಯಿಂದ ಸಿದ್ಧವಾಗುವುದಿಲ್ಲ, ಆದ್ದರಿಂದ ವಿವೇಕಿಯು ಭೇದಬುದ್ಧಿಯಿಂದ ರಹಿತನಾಗಿರುತ್ತಾನೆ. ಅರ್ಥಾತ್ ಅವನ ಜ್ಞಾನದಲ್ಲಿ ಓರ್ವ ಪರಮಾತ್ಮನಲ್ಲದೆ ಬೇರೆ ಏನೂ ಇರುವುದಿಲ್ಲ. ॥ ೧೭ ॥ ಈ ಲೋಕದ ಭೋಗಗಳಿಗೆ ನಾಶವಿರುವಂತೆ, ಯಜ್ಞಾದಿ ಅನುಷ್ಠಾನದ ಫಲಸ್ವರೂಪವಾಗಿ ದೊರೆಯುವ ಸ್ವರ್ಗಾದಿ ಬ್ರಹ್ಮಲೋಕದವರೆಗಿನ ಎಲ್ಲ ಸುಖಗಳು ಅಮಂಗಲ, ದುಃಖದಾಯಕ ಹಾಗೂ ನಾಶವುಳ್ಳವುಗಳೆಂದು ವಿದ್ವಾಂಸನಾದವನು ನೋಡಬೇಕು. ॥ ೧೮ ॥

ಭಕ್ತಿಯೋಗಃ ಪುರೈವೋಕ್ತಃ ಪ್ರೀಯಮಾಣಾಯ ತೇಽನಘ ।
ಪುನಶ್ಚ ಕಥಯಿಷ್ಯಾಮಿ ಮದ್ಭಕ್ತೇಃ ಕಾರಣಂ ಪರಮ್ ॥ ೧೯ ॥

ಶ್ರದ್ಧಾಮೃತಕಥಾಯಾಂ ಮೇ ಶಶ್ವನ್ಮದನುಕೀರ್ತನಮ್ ।
ಪರಿನಿಷ್ಠಾ ಚ ಪೂಜಾಯಾಂ ಸ್ತುತಿಭಿಃ ಸ್ತವನಂ ಮಮ ॥ ೨೦ ॥

ಆದರಃ ಪರಿಚರ್ಯಾಯಾಂ ಸರ್ವಾಂಗೈರಭಿವಂದನಮ್ ।
ಮದ್ಭಕ್ತಪೂಜಾಭ್ಯಧಿಕಾ ಸರ್ವಭೂತೇಷು ಮನ್ಮತಿಃ ॥ ೨೧ ॥

ಮದರ್ಥೇಷ್ವಂಗಚೇಷ್ಟಾ ಚ ವಚಸಾ ಮದ್ಗುಣೇರಣಮ್ ।
ಮಯ್ಯರ್ಪಣಂ ಚ ಮನಸಃ ಸರ್ವಕಾಮವಿವರ್ಜನಮ್ ॥ ೨೨ ॥

ಮದರ್ಥೇಽರ್ಥಪರಿತ್ಯಾಗೋ ಭೋಗಸ್ಯ ಚ ಸುಖಸ್ಯ ಚ ।
ಇಷ್ಟಂ ದತ್ತಂ ಹುತಂ ಜಪ್ತಂ ಮದರ್ಥಂ ಯದ್ವ್ರತಂ ತಪಃ ॥ ೨೩ ॥

ಏವಂ ಧರ್ಮೈರ್ಮನುಷ್ಯಾಣಾಮುದ್ಧವಾತ್ಮನಿವೇದಿನಾಮ್ ।
ಮಯಿ ಸಂಜಾಯತೇ ಭಕ್ತಿಃ ಕೋಽನ್ಯೋಽರ್ಥೋಽಸ್ಯಾವಶಿಷ್ಯತೇ ॥ ೨೪ ॥

ಯದಾಽಽತ್ಮನ್ಯರ್ಪಿತಂ ಚಿತ್ತಂ ಶಾಂತಂ ಸತ್ತ್ವೋಪಬೃಂಹಿತಮ್ ।
ಧರ್ಮಂ ಜ್ಞಾನಂ ಸವೈರಾಗ್ಯಮೈಶ್ವರ್ಯಂ ಚಾಭಿಪದ್ಯತೇ ॥ ೨೫ ॥

ಯದರ್ಪಿತಂ ತದ್ವಿಕಲ್ಪೇ ಇಂದ್ರಿಯೈಃ ಪರಿಧಾವತಿ ।
ರಜಸ್ವಲಂ ಚಾಸನ್ನಿಷ್ಠಂ ಚಿತ್ತಂ ವಿದ್ಧಿ ವಿಪರ್ಯಯಮ್ ॥ ೨೬ ॥

ಧರ್ಮೋ ಮದ್ಭಕ್ತಿಕೃತ್ ಪ್ರೋಕ್ತೋ ಜ್ಞಾನಂ ಚೈಕಾತ್ಮ್ಯದರ್ಶನಮ್ ।
ಗುಣೇಷ್ವಸಂಗೋ ವೈರಾಗ್ಯಮೈಶ್ವರ್ಯಂ ಚಾಣಿಮಾದಯಃ ॥ ೨೭ ॥

ಉದ್ಧವ ಉವಾಚ

ಯಮಃ ಕತಿವಿಧಃ ಪ್ರೋಕ್ತೋ ನಿಯಮೋ ವಾರಿಕರ್ಶನ ।
ಕಃ ಶಮಃ ಕೋ ದಮಃ ಕೃಷ್ಣ ಕಾ ತಿತಿಕ್ಷಾ ಧೃತಿಃ ಪ್ರಭೋ ॥ ೨೮ ॥

ಕಿಂ ದಾನಂ ಕಿಂ ತಪಃ ಶೌರ್ಯಂ ಕಿಂ ಸತ್ಯಮೃತಮುಚ್ಯತೇ ।
ಕಸ್ತ್ಯಾಗಃ ಕಿಂ ಧನಂ ಚೇಷ್ಟಂ ಕೋ ಯಜ್ಞಃ ಕಾ ಚ ದಕ್ಷಿಣಾ ॥ ೨೯ ॥

ಪುಂಸಃ ಕಿಂಸ್ವಿದ್ ಬಲಂ ಶ್ರೀಮನ್ ಭಗೋ ಲಾಭಶ್ಚ ಕೇಶವ ।
ಕಾ ವಿದ್ಯಾ ಹ್ರೀಃ ಪರಾ ಕಾ ಶ್ರೀಃ ಕಿಂ ಸುಖಂ ದುಃಖಮೇವ ಚ ॥ ೩೦ ॥

ಪುಣ್ಯಾತ್ಮನಾದ ಉದ್ಧವನೇ! ಭಕ್ತಿಯೋಗದ ವರ್ಣನೆಯನ್ನು ನಾನು ನಿನಗೆ ಮೊದಲೇ ಮಾಡಿರುವೆನು. ಆದರೆ ಅದರಲ್ಲಿ ನಿನಗೆ ಬಹಳ ಪ್ರೀತಿ ಇದೆ, ಅದಕ್ಕಾಗಿ ನಾನು ನಿನಗೆ ಪುನಃ ಭಕ್ತಿಯು ಪ್ರಾಪ್ತವಾಗುವ ಶ್ರೇಷ್ಠ ಸಾಧನೆಗಳನ್ನು ಹೇಳುತ್ತೇನೆ. ॥ ೧೯ ॥ ನನ್ನ ಭಕ್ತಿಯನ್ನು ಪಡೆಯಲು ಬಯಸುವವನು ನನ್ನ ಅಮೃತಮಯ ಕಥೆಗಳಲ್ಲಿ ಶ್ರದ್ಧೆಯನ್ನಿಡಬೇಕು. ನಿರಂತರ ನನ್ನ ಗುಣ-ಲೀಲೆ, ನಾಮಗಳನ್ನು ಸಂಕೀರ್ತನೆ ಮಾಡಬೇಕು. ನನ್ನ ಪೂಜೆಯಲ್ಲಿ ಅತ್ಯಂತ ನಿಷ್ಠೆಯಿದ್ದು, ಸ್ತೋತ್ರಗಳ ಮೂಲಕ ನನ್ನನ್ನು ಸ್ತುತಿಸಬೇಕು. ॥ ೨೦ ॥ ನನ್ನ ಸೇವೆ-ಪೂಜೆಯಲ್ಲಿ ಶ್ರದ್ಧೆ ಮತ್ತು ಪ್ರೇಮವಿರಲಿ. ನನ್ನಿದಿರಿಗೆ ಸಾಷ್ಟಾಂಗ ಮಲಗಿ ನಮಸ್ಕರಿಸಲಿ. ನನ್ನ ಭಕ್ತರನ್ನು ನನ್ನ ಪೂಜೆಗಿಂತ ಮಿಗಿಲಾಗಿ ಪೂಜಿಸಲಿ ಮತ್ತು ಸಮಸ್ತ ಪ್ರಾಣಿಗಳಲ್ಲಿ ನನ್ನನ್ನೇ ನೋಡಲಿ. ॥ ೨೧ ॥ ತನ್ನ ಎಲ್ಲ ವ್ಯವಹಾರಗಳನ್ನು ಕೇವಲ ನನ್ನದೇ ಸೇವೆಯೆಂದು ಮಾಡಲಿ. ವಾಣಿಯಿಂದ ನನ್ನದೇ ಗುಣಗಳನ್ನು ಹಾಡಲಿ. ತನ್ನ ಮನಸ್ಸನ್ನು ನನ್ನಲ್ಲೇ ಅರ್ಪಿಸಲಿ ಹಾಗೂ ಎಲ್ಲ ಕಾಮನೆಗಳನ್ನು ಬಿಟ್ಟುಬಿಡಲಿ. ॥ ೨೨ ॥ ನನಗಾಗಿ ಧನ, ಭೋಗ, ಸುಖ ಇವುಗಳನ್ನು ಪರಿತ್ಯಾಗಮಾಡಲಿ. ಯಜ್ಞ, ದಾನ, ಹವನ, ಜಪ, ವ್ರತ, ತಪಸ್ಸು ಮುಂತಾದುವೆಲ್ಲವನ್ನು ನನಗಾಗಿಯೇ ಮಾಡಲಿ. ॥ ೨೩ ॥ ಉದ್ಧವನೇ! ಈ ಧರ್ಮಗಳನ್ನು ಪಾಲಿಸುವವನ ಹೃದಯದಲ್ಲಿ ನನ್ನ ಪ್ರೇಮಮಯ ಭಕ್ತಿಯ ಉದಯವಾಗುತ್ತದೆ. ನನ್ನ ಭಕ್ತಿಯು ಪ್ರಾಪ್ತವಾದವನಿಗೆ ಬೇರೆ ಯಾವ ವಸ್ತುವಿನ ಪ್ರಾಪ್ತಿಯು ಬಾಕಿ ಉಳಿಯುವುದಿಲ್ಲ. ॥ ೨೪ ॥ ಈ ಪ್ರಕಾರ ಧರ್ಮಗಳನ್ನು ಪಾಲಿಸುವುದರಿಂದ ಚಿತ್ತದಲ್ಲಿ ಸತ್ತ್ವಗುಣದ ವೃದ್ಧಿಯಾಗಿ ಅವನು ಶಾಂತನಾಗಿ ತನ್ನ ಆತ್ಮವನ್ನು ಏಕಮಾತ್ರ ನನ್ನಲ್ಲೇ ತೊಡಗಿಸುತ್ತಾನೆ. ಆಗ ಸಾಧಕನಿಗೆ ಭಕ್ತಿ , ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯ ಇವುಗಳು ತಾನಾಗಿಯೇ ಪ್ರಾಪ್ತವಾಗುತ್ತವೆ. ॥ ೨೫ ॥ ಮನಸ್ಸು ನಾನಾವಿಧವಾದ ಕಲ್ಪನೆ ಮಾಡತೊಡಗಿದಾಗ ಅವನ ಇಂದ್ರಿಯಗಳು ಅತ್ತ-ಇತ್ತ ಓಡುತ್ತವೆ. ಚಿತ್ತವು ಸ್ಥಿರವಾಗುವುದಿಲ್ಲ, ಅವನ ಚಿತ್ತ ರಜೋಗುಣದಿಂದ ವ್ಯಾಪ್ತವಾಗುತ್ತದೆ. ಇಂತಹ ಸ್ಥಿತಿಯಲ್ಲಿ ಭಕ್ತಿ, ಜ್ಞಾನ, ಧರ್ಮ, ವೈರಾಗ್ಯ, ಐಶ್ವರ್ಯ ಇವುಗಳು ಅವನಿಂದ ದೂರವಾಗುತ್ತವೆ. ॥ ೨೬ ॥ ಉದ್ಧವಾ! ನನ್ನ ಭಕ್ತಿಯು ಯಾವುದರಿಂದ ಉಂಟಾಗುತ್ತದೋ, ಅದೇ ಧರ್ಮವಾಗಿದೆ. ಯಾವುದರಿಂದ ಬ್ರಹ್ಮ ಮತ್ತು ಆತ್ಮದ ಏಕತೆಯ ಸಾಕ್ಷಾತ್ಕಾರವಾಗುವುದೋ ಅದೇ ಜ್ಞಾನವಾಗಿದೆ. ವಿಷಯಗಳಿಂದ ಅಸಂಗ-ನಿರ್ಲೇಪನಾಗುವುದೇ ವೈರಾಗ್ಯವಾಗಿದೆ ಮತ್ತು ಅಣಿಮಾದಿ ಸಿದ್ಧಿಗಳೇ ಐಶ್ವರ್ಯವಾಗಿದೆ. ॥ ೨೭ ॥

**ಉದ್ಧವನೆಂದನು** – ಅರಿಸೂದನಾ! ಯಮ ಮತ್ತು ನಿಯಮಗಳು ಎಷ್ಟು ಪ್ರಕಾರದ್ದಾಗಿವೆ? ಶ್ರೀಕೃಷ್ಣಾ! ಶಮ ಎಂದರೇನು? ದಮ ಎಂದರೇನು? ಸ್ವಾಮಿ! ತಿತಿಕ್ಷಾ ಮತ್ತು ಧೈರ್ಯಯಾವುದು? ॥೨೮॥ ದಾನ, ತಪಸ್ಸು, ಶೌರ್ಯ, ಸತ್ಯ, ಋತ ಇವುಗಳ ಸ್ವರೂಪವನ್ನೂ ನೀನು ನನಗೆ ತಿಳಿಸು. ತ್ಯಾಗ ಎಂದರೇನು? ಅಭೀಷ್ಟಧನವು ಯಾವುದು? ಯಜ್ಞ ಯಾವುದಕ್ಕೆ ಹೇಳುತ್ತಾರೆ? ದಕ್ಷಿಣೆ ಯಾವ ವಸ್ತು ಆಗಿದೆ? ಓ ಕೇಶವಾ! ಪುರುಷನ ನಿಜವಾದ ಬಲವು ಯಾವುದು? ಭಗ ಯಾವುದಕ್ಕೆ ಹೇಳುತ್ತಾರೆ? ಲಾಭವೆಂದರೆ ಯಾವ ವಸ್ತುವಾಗಿದೆ? ಉತ್ತಮ ವಿದ್ಯೆ, ಲಜ್ಜೆ, ಶ್ರೀ, ಸುಖ ಮತ್ತು ದುಃಖ ಇವುಗಳ್ಯಾವುವು? ॥ ೨೯-೩೦ ॥

**ಕಃ ಪಂಡಿತಃ ಕಶ್ಚ ಮೂರ್ಖಃ ಕಃ ಪಂಥಾ ಉತ್ಪಥಶ್ಚ ಕಃ ।**
**ಕಃ ಸ್ವರ್ಗೋ ನರಕಃ ಕಃ ಸ್ವಿತ್ಕೋ ಬಂಧುರುತ ಕಿಂ ಗೃಹಮ್**
**॥ ೩೧ ॥**

**ಕ ಆಢ್ಯಃ ಕೋ ದರಿದ್ರೋ ವಾ ಕೃಪಣಃ ಕಃ ಕ ಈಶ್ವರಃ ।**
**ಏತಾನ್ ಪ್ರಶ್ನಾನ್ ಮಮ ಬ್ರೂಹಿ ವಿಪರೀತಾಂಶ್ಚ ಸತ್ಪತೇ**
**॥ ೩೨ ॥**

ಪಂಡಿತ ಮತ್ತು ಮೂರ್ಖರ ಲಕ್ಷಣಗಳೇನು ? ಸುಮಾರ್ಗ ಹಾಗೂ ಕುಮಾರ್ಗ ಇವುಗಳ ಲಕ್ಷಣಗಳೇನು ? ಸ್ವರ್ಗ ಮತ್ತು ನರಕಗಳು ಯಾವುವು ? ಬಂಧು-ಬಾಂಧವರು ಯಾರು ? ಮನೆ ಯಾವುದು ? ಶ್ರೀಮಂತ ಮತ್ತು ದರಿದ್ರ ಎಂದು ಯಾರನ್ನು ಹೇಳುತ್ತಾರೆ ? ಲೋಭಿಯು ಯಾರು ? ಈಶ್ವರನೆಂದು ಯಾರನ್ನು ಹೇಳುತ್ತಾರೆ ? ಭಕ್ತವತ್ಸಲ ಪ್ರಭುವೇ ! ನೀನು ನನ್ನ ಈ ಪ್ರಶ್ನೆಗಳಿಗೆ ಉತ್ತರವನ್ನು ನೀಡುವವನಾಗು. ಹಾಗೆಯೇ ಇವುಗಳ ವಿರೋಧೀ ಭಾವಗಳನ್ನೂ ಕೂಡ ವ್ಯಾಖ್ಯಾನಿಸು. ॥ ೩೧-೩೨ ॥

*ಶ್ರೀಭಗವಾನುವಾಚ*

**ಅಹಿಂಸಾ ಸತ್ಯಮಸ್ತೇಯಮಸಂಗೋ ಹ್ರೀರಸಂಚಯಃ ।**
**ಆಸ್ತಿಕ್ಯಂ ಬ್ರಹ್ಮಚರ್ಯಂ ಚ ಮೌನಂ ಸ್ಥೈರ್ಯಂ ಕ್ಷಮಾಭಯಮ್**
**॥ ೩೩ ॥**

**ಶೌಚಂ ಜಪಸ್ತಪೋ ಹೋಮಃ ಶ್ರದ್ಧಾಽಽತಿಥ್ಯಂ ಮದರ್ಚನಮ್ ।**
**ತೀರ್ಥಾಟನಂ ಪರಾರ್ಥೇಹಾ ತುಷ್ಟಿರಾಚಾರ್ಯಸೇವನಮ್**
**॥ ೩೪ ॥**

**ಏತೇ ಯಮಾಃ ಸನಿಯಮಾ ಉಭಯೋರ್ದ್ವಾದಶ ಸ್ಮೃತಾಃ ।**
**ಪುಂಸಾಮುಪಾಸಿತಾಸ್ತಾತ ಯಥಾಕಾಮಂ ದುಹಂತಿ ಹಿ**
**॥ ೩೫ ॥**

**ಭಗವಾನ್ ಶ್ರೀಕೃಷ್ಣನು ಹೇಳಿದನು** – ಅಹಿಂಸಾ, ಸತ್ಯ, ಅಸ್ತೇಯ (ಕಳ್ಳತನ ಮಾಡದಿರುವುದು), ಅಸಂಗತೆ, ಲಜ್ಜೆ, ಅಸಂಚಯ (ಆವಶ್ಯಕತೆಗಿಂತ ಹೆಚ್ಚು ಧನವನ್ನು ಸಂಗ್ರಹಿಸದಿರುವುದು), ಆಸ್ತಿಕತೆ, ಬ್ರಹ್ಮಚರ್ಯ, ಮೌನ, ಸ್ಥಿರತೆ, ಕ್ಷಮೆ ಮತ್ತು ಅಭಯ ಇವು ಹನ್ನೆರಡು 'ಯಮ'ಗಳಾಗಿವೆ. ನಿಯಮಗಳ ಸಂಖ್ಯೆಯೂ ಹನ್ನೆರಡಿವೆ :– ಶೌಚ (ಒಳ-ಹೊರಗಿನ ಪವಿತ್ರತೆ), ಜಪ, ತಪಸ್ಸು, ಹವನ, ಶ್ರದ್ಧಾ, ಅತಿಥಿಸೇವೆ, ನನ್ನ ಪೂಜೆ, ತೀರ್ಥಯಾತ್ರೆ, ಪರೋಪಕಾರ ಸಂತೋಷ ಮತ್ತು ಗುರುಸೇವೆ; ಈ ಪ್ರಕಾರ 'ಯಮ' ಮತ್ತು 'ನಿಯಮ' ಎರಡರ ಸಂಖ್ಯೆಯೂ ಹನ್ನೆರಡು ಹನ್ನೆರಡಾಗಿದೆ. ಇವು ಸಕಾಮ ಮತ್ತು ನಿಷ್ಕಾಮ ಎರಡೂ ವಿಧದ ಸಾಧಕರಿಗೆ ಉಪಯೋಗಿಯಾಗಿವೆ. ಉದ್ಧವನೇ ! ಇವನ್ನು ಪಾಲಿಸುವ ಪುರುಷನಿಗೆ ಈ ಯಮ-ನಿಯಮಗಳು ಅವನ ಇಚ್ಛಾನುಸಾರ ಅವನಿಗೆ ಭೋಗ ಹಾಗೂ ಮೋಕ್ಷವನ್ನು ಪ್ರದಾನ ಮಾಡುತ್ತವೆ. ॥ ೩೩-೩೫ ॥ ಬುದ್ಧಿಯನ್ನು ನನ್ನಲ್ಲಿ ತೊಡಗಿಸುವುದೇ 'ಶಮ'ವಾಗಿದೆ. ಇಂದ್ರಿಯಗಳ ಸಂಯಮದ ಹೆಸರು 'ದಮ'ವಾಗಿದೆ. ದುಃಖಗಳನ್ನು ಸಹಿಸುವುದು 'ತಿತಿಕ್ಷೆ', ಜಿಹ್ವೆ ಮತ್ತು ಜನನೇಂದ್ರಿಯದ ಮೇಲೆ ವಿಜಯ ಪಡೆಯುವುದೇ 'ಧೈರ್ಯ'ವಾಗಿದೆ. ॥ ೩೬ ॥ ಯಾರನ್ನೂ ದಂಡಿಸದೆ, ಎಲ್ಲರಿಗೆ ಅಭಯನೀಡುವುದೇ 'ದಾನ'ವಾಗಿದೆ. ಕಾಮನೆಗಳನ್ನು ತ್ಯಜಿಸುವುದೇ 'ತಪಸ್ಸು' ಆಗಿದೆ. ತನ್ನ ವಾಸನೆಗಳನ್ನು ಗೆಲ್ಲುವುದೇ 'ಶೌರ್ಯ'ವಾಗಿದೆ. ಎಲ್ಲೆಡೆ ಸಮತ್ವರೂಪೀ, ಸತ್ಯಸ್ವರೂಪೀ ಪರಮಾತ್ಮನನ್ನು ದರ್ಶಿಸುವುದೇ 'ಸತ್ಯ'ವಾಗಿದೆ. ॥ ೩೭ ॥ ಹೀಗೆಯೇ ಸತ್ಯ ಮತ್ತು ಮಧುರ ಭಾಷಣವನ್ನೇ 'ಋತ'ವೆಂದು ಮಹಾತ್ಮರು ಹೇಳುತ್ತಾರೆ. ಕರ್ಮಗಳಲ್ಲಿ ಆಸಕ್ತನಾಗದಿರುವುದೇ 'ಶೌಚ'ವಾಗಿದೆ. ಕಾಮನೆಗಳ ತ್ಯಾಗವೇ ನಿಜವಾದ ಸಂನ್ಯಾಸವಾಗಿದೆ. ॥ ೩೮ ॥ ಧರ್ಮವೇ ಮನುಷ್ಯರ ಅಭೀಷ್ಟ 'ಧನ'ವಾಗಿದೆ. ಪರಮೇಶ್ವರನಾದ ನಾನೇ 'ಯಜ್ಞ'ನಾಗಿದ್ದೇನೆ. ಜ್ಞಾನವನ್ನು ಉಪದೇಶಿಸುವುದೇ 'ದಕ್ಷಿಣೆ'ಯಾಗಿದೆ. ಪ್ರಾಣಾಯಾಮವೇ ಶ್ರೇಷ್ಠ 'ಬಲ'ವಾಗಿದೆ. ॥ ೩೯ ॥ ನನ್ನ ಐಶ್ವರ್ಯವೇ 'ಭಗ'ವಾಗಿದೆ. ನನ್ನ ಶ್ರೇಷ್ಠ ಭಕ್ತಿಯೇ ಉತ್ತಮ 'ಲಾಭ'ವಾಗಿದೆ. ಬ್ರಹ್ಮ ಮತ್ತು ಆತ್ಮದ ಭೇದ ಅಳಿದುಹೋಗುವಂತಹುದೇ ನಿಜವಾದ 'ವಿದ್ಯೆ'ಯಾಗಿದೆ. ಪಾಪಮಾಡಲು ಜುಗುಪ್ಸೆ ಪಡುವುದೇ 'ಲಜ್ಜೆ'ಯಾಗಿದೆ. ॥ ೪೦ ॥

**ಶಮೋ ಮನ್ನಿಷ್ಠತಾ ಬುದ್ಧೇರ್ದಮ ಇಂದ್ರಿಯಸಂಯಮಃ ।**
**ತಿತಿಕ್ಷಾ ದುಃಖಸಮ್ಮರ್ಷೋ ಜಿಹ್ವೋಪಸ್ಥಜಯೋ ಧೃತಿಃ**
**॥ ೩೬ ॥**

**ದಂಡನ್ಯಾಸಃ ಪರಂ ದಾನಂ ಕಾಮತ್ಯಾಗಸ್ತಪಃ ಸ್ಮೃತಮ್ ।**
**ಸ್ವಭಾವವಿಜಯಃ ಶೌರ್ಯಂ ಸತ್ಯಂ ಚ ಸಮದರ್ಶನಮ್**
**॥ ೩೭ ॥**

**ಋತಂ ಚ ಸೂನೃತಾ ವಾಣೀ ಕವಿಭಿಃ ಪರಿಕೀರ್ತಿತಾ ।**
**ಕರ್ಮಸ್ವಸಂಗಮಃ ಶೌಚಂ ತ್ಯಾಗಃ ಸಂನ್ಯಾಸ ಉಚ್ಯತೇ**
**॥ ೩೮ ॥**

**ಧರ್ಮ ಇಷ್ಟಂ ಧನಂ ನೄಣಾಂ ಯಜ್ಞೋಽಹಂ ಭಗವತ್ತಮಃ ।**
**ದಕ್ಷಿಣಾ ಜ್ಞಾನಸಂದೇಶಃ ಪ್ರಾಣಾಯಾಮಃ ಪರಂ ಬಲಮ್**
**॥ ೩೯ ॥**

**ಭಗೋ ಮ ಐಶ್ವರೋ ಭಾವೋ ಲಾಭೋ ಮದ್ಭಕ್ತಿರುತ್ತಮಃ ।**
**ವಿದ್ಯಾಽಽತ್ಮನಿ ಭಿದಾಬಾಧೋ ಜುಗುಪ್ಸಾ ಹ್ರೀರಕರ್ಮಸು**
**॥ ೪೦ ॥**

ಶ್ರೀರ್ಗುಣಾ ನೈರಪೇಕ್ಷ್ಯಾದ್ಯಾಃ ಸುಖಂ ದುಃಖಸುಖಾತ್ಯಯಃ ।
ದುಃಖಂ ಕಾಮಸುಖಾಪೇಕ್ಷಾ ಪಂಡಿತೋ ಬಂಧಮೋಕ್ಷವಿತ್
॥ ೪೧ ॥

ಮೂರ್ಖೋ ದೇಹಾದ್ಯಹಂಬುದ್ಧಿಃ ಪಂಥಾ ಮನ್ನಿಗಮಃ ಸ್ಮೃತಃ ।
ಉತ್ಪಥಶ್ಚಿತ್ತವಿಕ್ಷೇಪಃ ಸ್ವರ್ಗಃ ಸತ್ತ್ವಗುಣೋದಯಃ
॥ ೪೨ ॥

ನರಕಸ್ತಮಉನ್ನಾಹೋ ಬಂಧುರ್ಗುರುರಹಂ ಸಖೇ ।
ಗೃಹಂ ಶರೀರಂ ಮಾನುಷ್ಯಂ ಗುಣಾಢ್ಯೋ ಹ್ಯಾಢ್ಯ ಉಚ್ಯತೇ
॥ ೪೩ ॥

ದರಿದ್ರೋ ಯಸ್ತ್ವಸಂತುಷ್ಟಃ ಕೃಪಣೋ ಯೋಽಜಿತೇಂದ್ರಿಯಃ ।
ಗುಣೇಷ್ವಸಕ್ತಧೀರೀಶೋ ಗುಣಸಂಗೋ ವಿಪರ್ಯಯಃ
॥ ೪೪ ॥

ಏತ ಉದ್ಧವ ತೇ ಪ್ರಶ್ನಾಃ ಸರ್ವೇ ಸಾಧು ನಿರೂಪಿತಾಃ ।
ಕಿಂ ವರ್ಣಿತೇನ ಬಹುನಾ ಲಕ್ಷಣಂ ಗುಣದೋಷಯೋಃ ।
ಗುಣದೋಷದೃಶಿರ್ದೋಷೋ ಗುಣಸ್ತೂಭಯವರ್ಜಿತಃ
॥ ೪೫ ॥

ಶರೀರಾದಿಗಳಲ್ಲಿ ನಾನು-ನನ್ನದು ಇರುವವನೇ 'ಮೂರ್ಖ' ನಾಗಿದ್ದಾನೆ. ಸಂಸಾರದಿಂದ ನಿವೃತ್ತಿಗೊಳಿಸಿ, ನನ್ನನ್ನು ಪ್ರಾಪ್ತಿಮಾಡಿ ಕೊಡುವುದೇ ನಿಜವಾದ 'ಸುಮಾರ್ಗ', ಚಿತ್ತದ ಬಹಿರ್ಮುಖಿತೆಯೇ 'ಕುಮಾರ್ಗ'ವಾಗಿದೆ. ಸಖನೇ! ಸತ್ತ್ವಗುಣದ ವೃದ್ಧಿಯೇ 'ಸ್ವರ್ಗ' ಮತ್ತು ತಮೋಗುಣದ ಹೆಚ್ಚಳವೇ 'ನರಕ'ವಾಗಿದೆ. ಗುರುವೇ ನಿಜವಾದ 'ಬಂಧು'ವಾಗಿದ್ದು ಆ ಗುರುವು ನಾನೇ ಆಗಿದ್ದೇನೆ. ಈ ಮನುಷ್ಯ ಶರೀರವೇ ನಿಜವಾದ 'ಮನೆ'ಯಾಗಿದೆ. ಗುಣಗಳಿಂದ ಸಂಪನ್ನನಾಗಿದ್ದು ಗುಣಗಳ ಭಂಡಾರವೇ ಬಳಿಯಲ್ಲಿ ಇರುವವನೇ ನಿಜವಾದ 'ಶ್ರೀಮಂತ'ನಾಗಿದ್ದಾನೆ. ॥ ೪೨-೪೩ ॥ ಯಾರ ಚಿತ್ತದಲ್ಲಿ ಅಸಂತೋಷವಿದ್ದು ಅಭಾವದ ಬೋಧವಿರುವವನೇ 'ದರಿದ್ರ'ನು. ಜಿತೇಂದ್ರಿಯನಲ್ಲದವನೇ 'ಕೃಪಣ'ನು. ಚಿತ್ತವೃತ್ತಿಯು ವಿಷಯಗಳಲ್ಲಿ ಆಸಕ್ತನಾಗದವನೇ ಈಶ್ವರನಾಗಿದ್ದಾನೆ. ಇದಕ್ಕೆ ವಿಪರೀತವಾಗಿ ವಿಷಯಗಳಲ್ಲಿ ಆಸಕ್ತನಾದವನು ಸರ್ವಥಾ 'ಅಸಮರ್ಥ'ನು. ॥ ೪೪ ॥ ಪ್ರಿಯ ಉದ್ಧವನೇ! ನೀನು ಕೇಳಿದ ಎಲ್ಲ ಪ್ರಶ್ನೆಗಳಿಗೆ ಉತ್ತರವನ್ನು ನಾನು ನೀಡಿರುವೆನು. ಇವುಗಳನ್ನು ತಿಳಿದುಕೊಳ್ಳುವುದು ಮೋಕ್ಷಮಾರ್ಗಕ್ಕೆ ಸಹಾಯಕವಾಗಿದೆ. ನಾನು ನಿನಗೆ ಗುಣ ಮತ್ತು ದೋಷಗಳ ಲಕ್ಷಣಗಳು ಬೇರೆ-ಬೇರೆಯಾಗಿ ಎಷ್ಟೊಂದು ಹೇಳಲಿ? ಎಲ್ಲದರ ಸಾರಾಂಶವಿಷ್ಟೇ – ಗುಣ ಮತ್ತು ದೋಷಗಳಲ್ಲಿ ದೃಷ್ಟಿ ಹರಿಸುವುದೇ ದೊಡ್ಡ ದೋಷವಾಗಿದೆ. ಗುಣ-ದೋಷಗಳ ಕಡೆಗೆ ದೃಷ್ಟಿಹೋಗದೆ ತನ್ನ ಶಾಂತ ನಿಃಸಂಕಲ್ಪ ಸ್ವರೂಪದಲ್ಲಿ ಸ್ಥಿತನಾಗಿರುವುದೇ ಎಲ್ಲಕ್ಕಿಂತ ದೊಡ್ಡ ಗುಣವಾಗಿದೆ. ॥ ೪೫ ॥

*ಹತ್ತೊಂಭತ್ತನೆಯ ಅಧ್ಯಾಯವು ಮುಗಿಯಿತು. ॥ ೧೯ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಏಕಾದಶ ಸ್ಕಂಧೇ ಏಕೋನವಿಂಶೋಽಧ್ಯಾಯಃ ॥ ೧೯ ॥

# ಇಪ್ಪತ್ತನೆಯ ಅಧ್ಯಾಯ

## ಜ್ಞಾನಯೋಗ, ಕರ್ಮಯೋಗ, ಭಕ್ತಿಯೋಗ

*ಉದ್ಧವ ಉವಾಚ*

ವಿಧಿಶ್ಚ ಪ್ರತಿಷೇಧಶ್ಚ ನಿಗಮೋ ಹೀಶ್ವರಸ್ಯ ತೇ ।
ಅವೇಕ್ಷತೇಽರವಿಂದಾಕ್ಷ ಗುಣಂ ದೋಷಂ ಚ ಕರ್ಮಣಾಮ್
॥ ೧ ॥

ವರ್ಣಾಶ್ರಮವಿಕಲ್ಪಂ ಚ ಪ್ರತಿಲೋಮಾನುಲೋಮಜಮ್ ।
ದ್ರವ್ಯದೇಶವಯಃಕಾಲಾನ್ಸ್ವರ್ಗಂ ನರಕಮೇವ ಚ
॥ ೨ ॥

ಗುಣದೋಷಭಿದಾದೃಷ್ಟಿಮಂತರೇಣ ವಚಸ್ತವ ।
ನಿಃಶ್ರೇಯಸಂ ಕಥಂ ನೃಣಾಂ ನಿಷೇಧವಿಧಿಲಕ್ಷಣಮ್
॥ ೩ ॥

ಉದ್ಧವನು ಹೇಳಿದನು – ಅರವಿಂದಾಕ್ಷನೇ! ವೇದಗಳೇ ನಿನ್ನ ಆಜ್ಞಾರೂಪಿ ವಾಣಿಯಾಗಿದೆ. ವಿಧಿ ಮತ್ತು ನಿಷೇಧಗಳನ್ನು ನಿರ್ಣಯಿಸಲು ಹಾಗೂ ಕರ್ಮಗಳ ಗುಣದೋಷಗಳೂ ಕೂಡ ಈ ವೇದ ವಾಣಿಯನ್ನೇ ಆಧರಿಸಿದೆ. ॥ ೧ ॥ ವರ್ಣಾಶ್ರಮ ಭೇದ, ಪ್ರತಿಲೋಮ ಮತ್ತು ಅನುಲೋಮ ರೂಪಿ ವರ್ಣ ಸಂಕರ ಕರ್ಮಗಳ ಉಪಯುಕ್ತ ಹಾಗೂ ಅನುಪಯುಕ್ತ ದ್ರವ್ಯ, ದೇಶ, ಆಯು, ಕಾಲ, ಸ್ವರ್ಗ, ನರಕ ಇವುಗಳ ಭೇದಗಳ ಅರಿವು ವೇದಗಳಿಂದಲೇ ಆಗುವುದು. ॥ ೨ ॥ ಈ ಪ್ರಕಾರ ವಿಧಿನಿಷೇಧದ ಲಕ್ಷಣಗಳನ್ನು ಹೇಳುವ ನಿನ್ನದೇ ವೇದವಾಣಿಯಲ್ಲಿ ಗುಣ-ದೋಷಗಳ ಕುರಿತು ಕೂಡ ಹೇಳಲಾಗಿದೆ. ಹಾಗಿರುವಾಗ ಗುಣ-ದೋಷಗಳನ್ನು ಮನುಷ್ಯನು ತಿಳಿಯದಿರುವವರೆಗೆ ಅವನ ಶ್ರೇಯಸ್ಸಾದರೂ ಹೇಗಾಗಬಹುದು? ॥ ೩ ॥ ಓ ಸರ್ವಶಕ್ತಿವಂತ

ಪಿತೃದೇವಮನುಷ್ಯಾಣಾಂ ವೇದಶ್ಚಕ್ಷುಸ್ತವೇಶ್ವರ ।
ಶ್ರೇಯಸ್ತ್ವನುಪಲಬ್ಧೇಽರ್ಥೇ ಸಾಧ್ಯಸಾಧನಯೋರಪಿ
॥ ೪ ॥

ಗುಣದೋಷಭಿದಾದೃಷ್ಟಿರ್ನಿಗಮಾತ್ತೇ ನ ಹಿ ಸ್ವತಃ ।
ನಿಗಮೇನಾಪವಾದಶ್ಚ ಭಿದಾಯಾ ಇತಿ ಹ ಭ್ರಮಃ
॥ ೫ ॥

*ಶ್ರೀಭಗವಾನುವಾಚ*

ಯೋಗಾಸ್ತ್ರಯೋ ಮಯಾ ಪ್ರೋಕ್ತಾ ನೃಣಾಂ ಶ್ರೇಯೋವಿಧಿತ್ಸಯಾ ।
ಜ್ಞಾನಂ ಕರ್ಮ ಚ ಭಕ್ತಿಶ್ಚ ನೋಪಾಯೋಽನ್ಯೋಽಸ್ತಿ ಕುತ್ರಚಿತ್
॥ ೬ ॥

ನಿರ್ವಿಣ್ಣಾನಾಂ ಜ್ಞಾನಯೋಗೋ ನ್ಯಾಸಿನಾಮಿಹ ಕರ್ಮಸು ।
ತೇಷ್ವನಿರ್ವಿಣ್ಣಚಿತ್ತಾನಾಂ ಕರ್ಮಯೋಗಸ್ತು ಕಾಮಿನಾಮ್
॥ ೭ ॥

ಯದೃಚ್ಛಯಾ ಮತ್ಕಥಾದೌ ಜಾತಶ್ರದ್ಧಸ್ತು ಯಃ ಪುಮಾನ್ ।
ನ ನಿರ್ವಿಣ್ಣೋ ನಾತಿಸಕ್ತೋ ಭಕ್ತಿಯೋಗೋಽಸ್ಯ ಸಿದ್ಧಿದಃ
॥ ೮ ॥

ತಾವತ್ ಕರ್ಮಾಣಿ ಕುರ್ವೀತ ನ ನಿರ್ವಿದ್ಯೇತ ಯಾವತಾ ।
ಮತ್ಕಥಾಶ್ರವಣಾದೌ ವಾ ಶ್ರದ್ಧಾ ಯಾವನ್ನ ಜಾಯತೇ
॥ ೯ ॥

ಸ್ವಧರ್ಮಸ್ಥೋ ಯಜನ್ಯಜ್ಞೈರನಾಶೀಃ ಕಾಮ ಉದ್ಧವ ।
ನ ಯಾತಿ ಸ್ವರ್ಗನರಕೌ ಯದ್ಯನ್ಯನ್ನ ಸಮಾಚರೇತ್
॥ ೧೦ ॥

ಅಸ್ಮಿಂಲ್ಲೋಕೇ ವರ್ತಮಾನಃ ಸ್ವಧರ್ಮಸ್ಥೋಽನಘಃ ಶುಚಿಃ ।
ಜ್ಞಾನಂ ವಿಶುದ್ಧಮಾಪ್ನೋತಿ ಮದ್ಭಕ್ತಿಂ ವಾ ಯದೃಚ್ಛಯಾ
॥ ೧೧ ॥

ಸ್ವರ್ಗಿಣೋಽಪ್ಯೇತಮಿಚ್ಛಂತಿ ಲೋಕಂ ನಿರಯಿಣಸ್ತಥಾ ।
ಸಾಧಕಂ ಜ್ಞಾನಭಕ್ತಿಭ್ಯಾಮುಭಯಂ ತದಸಾಧಕಮ್
॥ ೧೨ ॥

ನಾದ ಪರಮೇಶ್ವರನೇ! ನಿನ್ನ ವೇದಗಳೇ – ಪಿತೃಗಳು, ದೇವತೆಗಳು, ಮನುಷ್ಯರು ಇವರಿಗೆ ಶ್ರೇಯಸ್ಸಿನ ಮಾರ್ಗವನ್ನು ತೋರಿಸುವ ಕಣ್ಣುಗಳಾಗಿವೆ. ಈ ನೇತ್ರಗಳನ್ನು ಕಾಣದವನು ಶ್ರೇಯಸ್ಸು ಎಂದರೇನು ? ಸಾಧ್ಯ ಯಾವುದು, ಸಾಧನೆ ಯಾವುದು ? ಇವನ್ನು ನೋಡಲಾರನು. ॥ ೪ ॥ ಗುಣ-ದೋಷಗಳ ಭೇದಗಳು ಕೂಡ ನಿನ್ನ ವೇದವಾಣಿಯ ಮೂಲಕವೇ ನಿರ್ಣಯ ಮಾಡಲಾಗಿದೆ. ಇದು ಯಾರ ಕಲ್ಪನೆಯೂ ಅಲ್ಲ, ಇದು ತನ್ನಿಂದ ತಾನೇ ಉಂಟಾಗದೆ, ವೇದದಿಂದಲೇ ಗುಣ-ದೋಷಗಳ ದೃಷ್ಟಿ ಉಂಟಾಗಿದೆ. ಇದರಿಂದ ನನಗೆ ಭ್ರಮೆ ಆಗುತ್ತಾ ಇದೆ. ॥ ೫ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** – ಪ್ರಿಯ ಉದ್ಧವನೇ! ನಾನೇ ವೇದಗಳಲ್ಲಿ ಮತ್ತು ಬೇರೆಡೆಗಳಲ್ಲಿಯೂ ಮನುಷ್ಯರ ಶ್ರೇಯಸ್ಸಿಗಾಗಿ ಅಧಿಕಾರ ಭೇದದಿಂದ ಜ್ಞಾನ, ಕರ್ಮ, ಭಕ್ತಿಗಳೆಂಬ ಮೂರು ಪ್ರಕಾರದ ಯೋಗಗಳನ್ನು ಉಪದೇಶಿಸಿರುವೆನು. ಇವುಗಳಲ್ಲದೆ ಮನುಷ್ಯನ ಪರಮ ಶ್ರೇಯಸ್ಸಿಗೆ ಬೇರೆ ಯಾವ ಉಪಾಯವೂ ಇಲ್ಲ. ॥ ೬ ॥ ಉದ್ಧವನೇ! ಕರ್ಮಗಳು ಮತ್ತು ಅವುಗಳ ಫಲದಿಂದ ವಿರಕ್ತರಾದವರು, ಅವನ್ನು ತ್ಯಜಿಸಿದ ಜನರು ಜ್ಞಾನಯೋಗದ ಅಧಿಕಾರಿಗಳಾಗಿದ್ದಾರೆ. ಇದಕ್ಕೆ ವಿಪರೀತವಾಗಿ ಯಾರಿಗೆ ಚಿತ್ತದಲ್ಲಿ ಕರ್ಮಗಳು ಮತ್ತು ಅವುಗಳ ಫಲದಿಂದ ವೈರಾಗ್ಯ ಉಂಟಾಗಿಲ್ಲವೋ, ಅವುಗಳಲ್ಲಿ ದುಃಖಬುದ್ಧಿಯು ಉಂಟಾಗಲಿಲ್ಲವೋ ಆ ಸಕಾಮ ವ್ಯಕ್ತಿಯು ಕರ್ಮಯೋಗದ ಅಧಿಕಾರಿಯು. ॥ ೭ ॥ ಯಾರು ಅತ್ಯಂತ ವಿರಕ್ತನಲ್ಲವೋ, ಅತ್ಯಂತ ಆಸಕ್ತನಲ್ಲವೋ, ಹಾಗೂ ಯಾವುದೋ ಪೂರ್ವಜನ್ಮದ ಶುಭ ಕರ್ಮಗಳಿಂದ ಸೌಭಾಗ್ಯವಶ ನನ್ನ ಲೀಲೆ-ಕಥೆಗಳಲ್ಲಿ ಶ್ರದ್ಧೆ ಉಂಟಾಗಿದೆಯೋ ಅವರು ಭಕ್ತಿಯೋಗದ ಅಧಿಕಾರಿಗಳು. ಅವರಿಗೆ ಭಕ್ತಿಯೋಗದಿಂದಲೇ ಸಿದ್ಧಿ ದೊರೆಯಬಲ್ಲದು. ॥ ೮ ॥ ಕರ್ಮದ ಸಂಬಂಧವಾಗಿ ಇರುವ ವಿಧಿ-ನಿಷೇಧಗಳನುಸಾರ ಕರ್ಮಮಯ ಜಗತ್ತು ಮತ್ತು ಅದರಿಂದ ದೊರೆಯುವ ಸ್ವರ್ಗಾದಿ ಸುಖಗಳಲ್ಲಿ ವೈರಾಗ್ಯ ಉಂಟಾಗುವವರೆಗೆ ಅಥವಾ ನನ್ನ ಲೀಲೆ ಕಥೆಗಳ ಶ್ರವಣ ಕೀರ್ತನಾದಿಗಳಲ್ಲಿ ಶ್ರದ್ಧೆ ಉಂಟಾಗುವವರೆಗೆ ಕರ್ಮಗಳನ್ನು ಮಾಡುತ್ತಾ ಇರಬೇಕು. ॥ ೯ ॥ ಉದ್ಧವನೇ! ಹೀಗೆ ತನ್ನ ವರ್ಣ, ಆಶ್ರಮಕ್ಕೆ ಅನುಕೂಲ ಧರ್ಮದಲ್ಲಿ ಸ್ಥಿತನಾಗಿದ್ದು ಯಜ್ಞಗಳ ಮೂಲಕ ಯಾವುದೇ ಆಸೆ-ಕಾಮನೆಯಿಲ್ಲದೆ ನನ್ನನ್ನು ಆರಾಧಿಸುತ್ತಿದ್ದು, ನಿಷಿದ್ಧ ಕರ್ಮಗಳಿಂದ ದೂರವಿರಬೇಕು. ಕೇವಲ ವಿಹಿತ ಕರ್ಮಗಳನ್ನೇ ಆಚರಿಸಿದರೆ ಅವನಿಗೆ ಸ್ವರ್ಗ ಅಥವಾ ನರಕಕ್ಕೆ ಹೋಗಬೇಕಾಗುವುದಿಲ್ಲ. ॥ ೧೦ ॥ ತನ್ನ ಧರ್ಮದಲ್ಲಿ ನಿಷ್ಠೆಯುಳ್ಳ ಪುರುಷನ ಪಾಪಗಳು ಉಳಿಯುವುದಿಲ್ಲ. ಅವನು ಪವಿತ್ರನಾಗಿ ಹೋಗುತ್ತಾನೆ. ಅವನು ಈ ಲೋಕದಲ್ಲಿ ವ್ಯವಹಾರ ಮಾಡುತ್ತಾ ವಿಶುದ್ಧ ಜ್ಞಾನವನ್ನು ಪಡೆದುಕೊಳ್ಳುತ್ತಾನೆ. ಅವನಿಗೆ ಆಯಾಸವಿಲ್ಲದೆಯೇ ನನ್ನ ಭಕ್ತಿಯು ಪ್ರಾಪ್ತವಾಗುತ್ತದೆ. ॥ ೧೧ ॥ ಈ ಮನುಷ್ಯಶರೀರವು ಅತ್ಯಂತ ದುರ್ಲಭವಾಗಿದೆ. ಸ್ವರ್ಗದ ದೇವತೆಗಳೂ ಇದನ್ನು ಬಯಸುತ್ತಾರೆ ಹಾಗೂ ನರಕದ ಜನರೂ ಕೂಡ ಇದಕ್ಕೆ ಆಸೆಪಡುತ್ತಾರೆ. ಜ್ಞಾನಮಾರ್ಗ ಮತ್ತು ಭಕ್ತಿ ಮಾರ್ಗದ ಸಾಧಕರೂ ಮನುಷ್ಯಶರೀರವನ್ನು ಇಚ್ಛಿಸುತ್ತಾರೆ. ಏಕೆಂದರೆ ಸ್ವರ್ಗ ಅಥವಾ ನರಕಗಳಲ್ಲಿ ಭಗವತ್ಪ್ರಾಪ್ತಿಯಾಗಲಾರದು. ಆದರೆ ಮನುಷ್ಯ ಶರೀರದಲ್ಲಿ ಆಗಬಲ್ಲದು. ॥ ೧೨ ॥

ನ ನರಃ ಸ್ವರ್ಗತಿಂ ಕಾಂಕ್ಷೇನ್ನಾರಕೀಂ ವಾ ವಿಚಕ್ಷಣಃ ।
ನೇಮಂ ಲೋಕಂ ಚ ಕಾಂಕ್ಷೇತ ದೇಹಾವೇಶಾತ್ಪ್ರಮಾದ್ಯತಿ
॥ ೧೩ ॥

ಏತದ್ವಿದ್ವಾನ್ ಪುರಾ ಮೃತ್ಯೋರಭವಾಯ ಘಟೇತ ಸಃ ।
ಅಪ್ರಮತ್ತ ಇದಂ ಜ್ಞಾತ್ವಾ ಮರ್ತ್ಯಮಪ್ಯರ್ಥಸಿದ್ಧಿದಮ್
॥ ೧೪ ॥

ಛಿದ್ಯಮಾನಂ ಯಮೈರೇತೈಃ ಕೃತನೀಡಂ ವನಸ್ಪತಿಮ್ ।
ಖಗಃ ಸ್ವಕೇತಮುತ್ಸೃಜ್ಯ ಕ್ಷೇಮಂ ಯಾತಿ ಹ್ಯಲಂಪಟಃ
॥ ೧೫ ॥

ಅಹೋರಾತ್ರೈಶ್ಛಿದ್ಯಮಾನಂ ಬುದ್ಧ್ವಾಽಽಯುರ್ಭಯವೇಪಥುಃ ।
ಮುಕ್ತಸಂಗಃ ಪರಂ ಬುದ್ಧ್ವಾ ನಿರೀಹ ಉಪಶಾಮ್ಯತಿ
॥ ೧೬ ॥

ನೃದೇಹಮಾದ್ಯಂ ಸುಲಭಂ ಸುದುರ್ಲಭಂ
ಪ್ಲವಂ ಸುಕಲ್ಪಂ ಗುರುಕರ್ಣಧಾರಮ್ ।
ಮಯಾನುಕೂಲೇನ ನಭಸ್ವತೇರಿತಂ
ಪುಮಾನ್ ಭವಾಬ್ಧಿಂ ನ ತರೇತ್ಸ ಆತ್ಮಹಾ ॥ ೧೭ ॥

ಯದಾಽಽರಂಭೇಷು ನಿರ್ವಿಣ್ಣೋ ವಿರಕ್ತಃ ಸಂಯತೇಂದ್ರಿಯಃ ।
ಅಭ್ಯಾಸೇನಾತ್ಮನೋ ಯೋಗೀ ಧಾರಯೇದಚಲಂ ಮನಃ
॥ ೧೮ ॥

ಧಾರ್ಯಮಾಣಂ ಮನೋ ಯರ್ಹಿ ಭ್ರಾಮ್ಯದಾಶ್ವನವಸ್ಥಿತಮ್ ।
ಅತಂದ್ರಿತೋಽನುರೋಧೇನ ಮಾರ್ಗೇಣಾತ್ಮವಶಂ ನಯೇತ್
॥ ೧೯ ॥

ಮನೋಗತಿಂ ನ ವಿಸೃಜೇಜ್ಜಿತಪ್ರಾಣೋ ಜಿತೇಂದ್ರಿಯಃ ।
ಸತ್ತ್ವಸಂಪನ್ನಯಾ ಬುದ್ಧ್ಯಾ ಮನ ಆತ್ಮವಶಂ ನಯೇತ್
॥ ೨೦ ॥

ಏಷ ವೈ ಪರಮೋ ಯೋಗೋ ಮನಸಃ ಸಂಗ್ರಹಃ ಸ್ಮೃತಃ ।
ಹೃದಯಜ್ಞತ್ವಮನ್ವಿಚ್ಛನ್ ದಮ್ಯಸ್ಯೇವಾರ್ವತೋ ಮುಹುಃ
॥ ೨೧ ॥

ವಿಚಾರಕುಶಲ ಪುರುಷನು ಸ್ವರ್ಗದ, ನರಕದ, ಅಥವಾ ಈ ಲೋಕದ ಯಾವುದೇ ಕಾಮನೆ ಮಾಡಬಾರದು. ಏಕೆಂದರೆ, ದೇಹದಲ್ಲೇ ಅಹಂಬುದ್ಧಿ ಉಂಟಾಗಿ, ಆದರಿಂದ ಪ್ರಮಾದವಾಗುತ್ತದೆ, ಪತನವಾಗುತ್ತದೆ. ॥ ೧೩ ॥ ಆದ್ದರಿಂದ ಎಚ್ಚರಗೊಂಡು ವಿವೇಕದ ಮೂಲಕ ಈ ಶರೀರವು ಮರಣಧರ್ಮಿಯಾಗಿದ್ದರೂ, ಇದು ಪರಮಾತ್ಮನ ಪ್ರಾಪ್ತಿಮಾಡಿಕೊಡುವಂತಹುದು ಎಂದು ತಿಳಿದುಕೊಳ್ಳಬೇಕು. ಹೀಗೆ ನಿಶ್ಚಿತ ವಿಚಾರಗೈದು ಮೃತ್ಯುವಿಗೆ ಮೊದಲೇ ಆತ್ಮಕಲ್ಯಾಣಕ್ಕಾಗಿ ಪ್ರಯತ್ನಿಸಬೇಕು. ॥ ೧೪ ॥ ಈ ಶರೀರವು ಒಂದು ವೃಕ್ಷವಾಗಿದೆ. ಇದರಲ್ಲಿ ಗೂಡುಕಟ್ಟಿಕೊಂಡು ಜೀವರೂಪೀ ಪಕ್ಷಿಯು ವಾಸಿಸುತ್ತಿದೆ. ಈ ಮರವನ್ನು ಯಮನ ದೂತರು ಪ್ರತಿಕ್ಷಣ ಕತ್ತರಿಸುತ್ತಿರುವರು. ಮುರಿದುಬಿದ್ದ ಮರವನ್ನು ಪಕ್ಷಿಯು ಬಿಟ್ಟು ಹಾರಿ ಹೋಗುವಂತೆ, ಈ ಮನುಷ್ಯಶರೀರವನ್ನು ಕಾಲನು ಹಗಲು ರಾತ್ರೆಗಳ ಮೂಲಕ ವೇಗವಾಗಿ ಕತ್ತರಿಸಲು ತೊಡಗಿರುವನು. ಕಾಲನ ಈ ಕೃತ್ಯವನ್ನು ನೋಡಿ ಭಯದಿಂದ ಕಂಪಿತನಾಗಿ, ಕಾಮನಾಶೂನ್ಯನಾಗುವ ಮನುಷ್ಯನೇ ಪರಮಾತ್ಮತತ್ತ್ವವನ್ನು ಅರಿತುಕೊಂಡು ಶಾಂತಾತ್ಮನಾಗಿ, ಮೋಕ್ಷವನ್ನು ಪಡೆದುಕೊಳ್ಳುವನು.॥ ೧೫-೧೬ ॥ ಈ ಮನುಷ್ಯಶರೀರವು ಅತ್ಯಂತ ದುರ್ಲಭವಾಗಿದ್ದರೂ ಭಗವಂತನ ಅಸೀಮ ಅನುಕಂಪದಿಂದ ಇದು ಸುಲಭವಾಗಿದೆ. ಸಂಸಾರ ಸಾಗರವನ್ನು ದಾಟಲು ಮಾನವಶರೀರವು ದೃಢವಾದ ಒಂದು ನೌಕೆಯಾಗಿದೆ. ಸದ್ಗುರುವೇ ಇದರ ಕರ್ಣಧಾರ (ಅಂಬಿಗ). ಭಗವಂತನು ಹೇಳುತ್ತಾನೆ – ನಾನೇ ಅನುಕೂಲವಾದ ವಾಯು ಆಗಿ ಇದನ್ನು ನಡೆಸುತ್ತೇನೆ. ಭಗವಂತನ ಇಷ್ಟೊಂದು ಕರುಣೆ ಇದ್ದರೂ ಕೂಡ ಈ ಸಂಸಾರಸಾಗರವನ್ನು ದಾಟದವನು ಸ್ವತಃ ತನ್ನ ಆತ್ಮವನ್ನು ಕೊಲ್ಲುವವನೆಂದು ತಿಳಿಯಬೇಕು. ॥ ೧೭ ॥

ಪ್ರಿಯ ಉದ್ಧವನೇ ! ಕರ್ಮಗಳಲ್ಲಿ ದುಃಖವನ್ನು ಅನುಭವಿಸುತ್ತಾ ಅವುಗಳಿಂದ ವಿರಕ್ತನಾದಾಗ ಮನುಷ್ಯನು ಜಿತೇಂದ್ರಿಯನಾಗಿ ಯೋಗದಲ್ಲಿ ಸ್ಥಿತನಾಗಬೇಕು. ಅಭ್ಯಾಸ ಮತ್ತು ಆತ್ಮಾನುಸಂಧಾನದಿಂದ ತನ್ನ ಮನಸ್ಸಲ್ಲಿ ಪರಮಾತ್ಮನಾದ ನನ್ನನ್ನು ನಿಶ್ಚಲರೂಪದಿಂದ ಧರಿಸಿಕೊಳ್ಳಬೇಕು. ॥ ೧೮ ॥ ಮನಸ್ಸನ್ನು ಸ್ಥಿರಗೊಳಿಸುವಾಗ ಅದು ಚಂಚಲವಾಗಿ ಅತ್ತ-ಇತ್ತ ಅಲೆಯತೊಡಗಿದಾಗ ಕೂಡಲೇ ತುಂಬಾ ಜಾಗರೂಕತೆಯಿಂದ ಅದನ್ನು ಒಲಿಸಿ-ಒಪ್ಪಿಸಿ, ಹಿಂದಕ್ಕೆ ಎಳೆದುತಂದು ತನ್ನ ವಶದಲ್ಲಿ ಇರಿಸಿಕೊಳ್ಳಬೇಕು. ॥ ೧೯ ॥ ಇಂದ್ರಿಯಗಳನ್ನು ಮತ್ತು ಪ್ರಾಣಗಳನ್ನು ತನ್ನ ವಶದಲ್ಲಿರಿಸಿಕೊಳ್ಳಬೇಕು. ಮನವನ್ನು ಒಂದು ಕ್ಷಣವಾದರೂ ಸ್ವತಂತ್ರವಾಗಿ ಬಿಡಬಾರದು. ಅದರ ಪ್ರತಿಯೊಂದು ಸ್ಥಿತಿ-ಗತಿಗಳನ್ನು ನೋಡುತ್ತಾ ಇರಬೇಕು. ಈ ಪ್ರಕಾರ ಸತ್ತ್ವಸಂಪನ್ನ ಬುದ್ಧಿಯಿಂದ ನಿಧಾನವಾಗಿ ಮನಸ್ಸನ್ನು ತನ್ನ ವಶದಲ್ಲಿ ಇರಿಸಿಕೊಳ್ಳಬೇಕು. ॥ ೨೦ ॥ ಉಚ್ಛೃಂಖಲವಾದ ಕುದುರೆಯನ್ನು ಪಳಗಿಸುವ ಆವಶ್ಯಕತೆ ಇರುತ್ತದೆ. ಅದನ್ನು ವಶಪಡಿಸಿದಂತೆ ಮನಸ್ಸಿನ ಭಾವಗಳನ್ನು ಅರಿತುಕೊಂಡು ಅದನ್ನು ವಶಪಡಿಸಿಕೊಳ್ಳಬೇಕು. ಮನಸ್ಸು ಪೂರ್ಣವಾಗಿ ವಶವಾದಾಗಲೇ ಪರಮಯೋಗಿಯಾಗುವನು. ॥ ೨೧ ॥

ಸಾಂಖ್ಯೇನ ಸರ್ವಭಾವಾನಾಂ ಪ್ರತಿಲೋಮಾನುಲೋಮತಃ ।
ಭವಾಪ್ಯಯಾವನುಧ್ಯಾಯೇನ್ಮನೋ ಯಾವತ್ಪ್ರಸೀದತಿ
॥ ೨೨ ॥

ನಿರ್ವಿಣ್ಣಸ್ಯ ವಿರಕ್ತಸ್ಯ ಪುರುಷಸ್ಯೋಕ್ತವೇದಿನಃ ।
ಮನಸ್ತ್ಯಜತಿ ದೌರಾತ್ಮ್ಯಂ ಚಿಂತಿತಸ್ಯಾನುಚಿಂತಯಾ
॥ ೨೩ ॥

ಯಮಾದಿಭಿರ್ಯೋಗಪಥೈರಾನ್ವೀಕ್ಷಿಕ್ಯಾ ಚ ವಿದ್ಯಯಾ ।
ಮಮಾರ್ಚೋಪಾಸನಾಭಿರ್ವಾ ನಾನ್ಯೈರ್ಯೋಗ್ಯಂ ಸ್ಮರೇನ್ಮನಃ
॥ ೨೪ ॥

ಯದಿ ಕುರ್ಯಾತ್ ಪ್ರಮಾದೇನ ಯೋಗೀ ಕರ್ಮ ವಿಗರ್ಹಿತಮ್ ।
ಯೋಗೇನೈವ ದಹೇದಂಹೋ ನಾನ್ಯತ್ತತ್ರ ಕದಾಚನ
॥ ೨೫ ॥

ಸ್ವೇ ಸ್ವೇಽಧಿಕಾರೇ ಯಾ ನಿಷ್ಠಾ ಸ ಗುಣಃ ಪರಿಕೀರ್ತಿತಃ ।
ಕರ್ಮಣಾಂ ಜಾತ್ಯಶುದ್ಧಾನಾಮನೇನ ನಿಯಮಃ ಕೃತಃ ।
ಗುಣದೋಷವಿಧಾನೇನ ಸಂಗಾನಾಂ ತ್ಯಾಜನೇಚ್ಛಯಾ
॥ ೨೬ ॥

ಜಾತಶ್ರದ್ಧೋ ಮತ್ಕಥಾಸು ನಿರ್ವಿಣ್ಣಃ ಸರ್ವಕರ್ಮಸು ।
ವೇದ ದುಃಖಾತ್ಮಕಾನ್ ಕಾಮಾನ್ಪರಿತ್ಯಾಗೇಽಪ್ಯನೀಶ್ವರಃ
॥ ೨೭ ॥

ತತೋ ಭಜೇತ ಮಾಂ ಪ್ರೀತಃ ಶ್ರದ್ಧಾಲುರ್ದೃಢನಿಶ್ಚಯಃ ।
ಜುಷಮಾಣಶ್ಚ ತಾನ್ಕಾಮಾನ್ ದುಃಖೋದರ್ಕಾಂಶ್ಚ ಗರ್ಹಯನ್
॥ ೨೮ ॥

ಪ್ರೋಕ್ತೇನ ಭಕ್ತಿಯೋಗೇನ ಭಜತೋ ಮಾಸಕೃನ್ಮುನೇಃ ।
ಕಾಮಾ ಹೃದಯ್ಯಾ ನಶ್ಯಂತಿ ಸರ್ವೇ ಮಯಿ ಹೃದಿ ಸ್ಥಿತೇ
॥ ೨೯ ॥

ಸಾಂಖ್ಯಶಾಸ್ತ್ರದಲ್ಲಿ ತಿಳಿಸಿದ ಕ್ರಮಕ್ಕನುಸಾರವೇ ಪ್ರಕೃತಿಯಿಂದ ಹಿಡಿದು ಶರೀರದವರೆಗಿನ ಸೃಷ್ಟಿಯನ್ನು ಚಿಂತಿಸಬೇಕು. ಶರೀರಾದಿಗಳ ಪ್ರಕೃತಿಯಲ್ಲಿ ಲಯವಾಗುವ ಕ್ರಮವನ್ನು ಹೇಳಿದಂತೆ ಲಯ-ಚಿಂತನೆ ಮಾಡಬೇಕು. ಮನಸ್ಸು ಶಾಂತ-ಸ್ಥಿರವಾಗುವ ವರೆಗೆ ಈ ಕ್ರಮವನ್ನು ನಡೆಸುತ್ತಾ ಇರಬೇಕು. ॥ ೨೨ ॥ ಸಂಸಾರದಿಂದ ವಿರಕ್ತನಾದವನು, ಸಾಂಸಾರಿಕ ಪದಾರ್ಥಗಳಲ್ಲಿ ದುಃಖ ಬುದ್ಧಿ ಉಂಟಾದವನು ತನ್ನ ಗುರುಹಿರಿಯರ ಉಪದೇಶಗಳನ್ನು ಚೆನ್ನಾಗಿ ತಿಳಿದುಕೊಂಡು, ಪದೇ-ಪದೇ ತನ್ನ ಸ್ವರೂಪದ ಚಿಂತನೆಯಲ್ಲೇ ಮುಳುಗಿರುತ್ತಾನೆ. ಈ ಅಭ್ಯಾಸದಿಂದ ಬಹುಬೇಗನೇ ಅವನ ಮನಸ್ಸು ಚಂಚಲತೆಯನ್ನು ಬಿಟ್ಟುಬಿಡುತ್ತದೆ. ॥ ೨೩ ॥ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ, ಧ್ಯಾನ, ಸಮಾಧಿ ಮುಂತಾದ ಯೋಗಮಾರ್ಗಗಳಿಂದ, ಆತ್ಮವಿದ್ಯೆಯಿಂದ ಹಾಗೂ ನನ್ನ ಪರಾಭಕ್ತಿಯಿಂದ, ನನ್ನ ಉಪಾಸನೆಯಿಂದ, ಭಕ್ತಿಯೋಗದಿಂದ ಮನಸ್ಸು ಪರಮಾತ್ಮನ ಚಿಂತನೆ ಮಾಡತೊಡಗುತ್ತದೆ. ಇದಲ್ಲದೆ ಬೇರೆ ಯಾವ ಉಪಾಯವೂ ಇಲ್ಲ. ॥ ೨೪ ॥

ಎಲೈ ಉದ್ಧವನೇ! ಯೋಗಿಯಾದರೋ ಎಂದೂ ನಿಂದಿತ ಕೆಲಸವನ್ನು ಮಾಡುವುದೇ ಇಲ್ಲ. ಆದರೆ ಒಂದೊಮ್ಮೆ ಎಲ್ಲಾದರೂ ಅವನಿಂದ ಪ್ರಮಾದವಶದಿಂದ ಯಾವುದಾದರೂ ಅಪರಾಧ ನಡೆದುಹೋದರೂ, ಯೋಗದ ಮೂಲಕವೇ ಆ ಪಾಪವನ್ನು ಸುಟ್ಟುಬಿಡುತ್ತಾನೆ. ಬೇರೆ ಯಾವ ಕರ್ಮವನ್ನು ಅದಕ್ಕಾಗಿ ಮಾಡದಿರಲಿ. ॥ ೨೫ ॥ ತಮ್ಮ-ತಮ್ಮ ಅಧಿಕಾರಕ್ಕನುಸಾರ ಆಚರಿಸುವುದೇ ಗುಣವಾಗಿದೆ. ಬೇರೆಯವರ ಕರ್ಮಗಳನ್ನು ಆಚರಿಸುವುದು ದೋಷವಾಗಿದೆ. ಏಕೆಂದರೆ, ಕರ್ಮಗಳು ಸ್ವಭಾವತಃ ಅಶುದ್ಧವಾಗಿಯೇ ಇರುತ್ತವೆ. ಕರ್ಮಗಳ ಆಸಕ್ತಿಯನ್ನು ತ್ಯಾಗ ಮಾಡಲೆಂದೇ ಅವುಗಳಲ್ಲಿ ಗುಣ-ದೋಷಗಳ ವಿಧಾನಗೈದು, ಅವನ್ನು ನಿಯಮನ ಮಾಡಲಾಗಿದೆ. ॥ ೨೬ ॥

ನನ್ನ ಕಥೆಯಲ್ಲಿ ಶ್ರದ್ಧೆಯಿರಲಿ. ಎಲ್ಲ ಕರ್ಮಗಳಲ್ಲಿ ವೈರಾಗ್ಯ ತಳೆಯಲಿ. ಕರ್ಮಗಳನ್ನು ತ್ಯಜಿಸಲು ಅಸಮರ್ಥನಾಗಿದ್ದರೂ ಕೂಡ ಕರ್ಮಗಳು ದುಃಖಾತ್ಮಕವೆಂದು ತಿಳಿದುಕೊಂಡು. ಅವುಗಳಿಂದ ವಿರಕ್ತನಾಗಲು ಪ್ರಯತ್ನಿಸಲಿ. ಹೀಗೆ ಬುದ್ಧಿಯಲ್ಲಿ ನನ್ನ ನಿಶ್ಚಯವನ್ನು ದೃಢಗೊಳಿಸಿ, ಶ್ರದ್ಧಾ-ಪ್ರೇಮದಿಂದ ನನ್ನನ್ನು ಭಜಿಸಲಿ. ಕಾಮನೆಗಳನ್ನು ನಾಶಪಡಿಸಲಾಗದಿದ್ದರೆ, ಸಂಸ್ಕಾರವಶನಾಗಿ ಅವುಗಳನ್ನು ಸೇವಿಸುತ್ತಾ, ಅವನ್ನು ನಿಂದ್ಯವೆಂದು ತಿಳಿದು, ಪರಿಣಾಮದಲ್ಲಿ ಇವು ದುಃಖಪ್ರದವೇ ಆಗಿದೆ ಎಂದು ಯೋಚಿಸಲಿ. ಹೀಗೆ ಮಾಡುವುದರಿಂದ ಸಹಜವಾಗಿಯೇ ಆ ಕರ್ಮಗಳಿಂದ ವಿರಕ್ತಿ ಉಂಟಾದೀತು. ॥ ೨೭-೨೮ ॥ ಈ ಪ್ರಕಾರ ನಾನು ತಿಳಿಸಿದಂತಹ ಭಕ್ತಿಯೋಗದಿಂದ ನಿರಂತರ ನನ್ನನ್ನು ಭಜಿಸುವುದರಿಂದ ನಾನು ಆ ಸಾಧಕನ ಹೃದಯದಲ್ಲಿ ಬಂದು ನೆಲೆಸುತ್ತೇನೆ. ನಾನು ವಿರಾಜಮಾನನಾಗುತ್ತಲೇ ಅವನ ಹೃದಯದ ಎಲ್ಲ ವಾಸನೆಗಳು ತಮ್ಮ ಸಂಸ್ಕಾರಗಳೊಡನೆ ನಾಶವಾಗಿ ಹೋಗುತ್ತವೆ. ॥ ೨೯ ॥

ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ ।
ಕ್ಷೀಯಂತೇ ಚಾಸ್ಯ ಕರ್ಮಾಣಿ ಮಯಿ ದೃಷ್ಟೇಽಖಿಲಾತ್ಮನಿ ॥ ೩೦ ॥

ತಸ್ಮಾನ್ಮದ್ ಭಕ್ತಿಯುಕ್ತಸ್ಯ ಯೋಗಿನೋ ವೈ ಮದಾತ್ಮನಃ ।
ನ ಜ್ಞಾನಂ ನ ಚ ವೈರಾಗ್ಯಂ ಪ್ರಾಯಃ ಶ್ರೇಯೋ ಭವೇದಿಹ ॥ ೩೧ ॥

ಯತ್ಕರ್ಮಭಿರ್ಯತ್ತಪಸಾ ಜ್ಞಾನವೈರಾಗ್ಯತಶ್ಚ ಯತ್ ।
ಯೋಗೇನ ದಾನಧರ್ಮೇಣ ಶ್ರೇಯೋಭಿರಿತರೈರಪಿ ॥ ೩೨ ॥

ಸರ್ವಂ ಮದ್ಭಕ್ತಿಯೋಗೇನ ಮದ್ಭಕ್ತೋ ಲಭತೇಽಂಜಸಾ ।
ಸ್ವರ್ಗಾಪವರ್ಗಂ ಮದ್ಧಾಮ ಕಥಂಚಿದ್ಯದಿ ವಾಂಛತಿ ॥ ೩೩ ॥

ನ ಕಿಂಚಿತ್ಸಾಧವೋ ಧೀರಾ ಭಕ್ತಾ ಹ್ಯೇಕಾಂತಿನೋ ಮಮ ।
ವಾಂಛಂತ್ಯಪಿ ಮಯಾ ದತ್ತಂ ಕೈವಲ್ಯಮಪುನರ್ಭವಮ್ ॥ ೩೪ ॥

ನೈರಪೇಕ್ಷ್ಯಂ ಪರಂ ಪ್ರಾಹುರ್ನಿಃಶ್ರೇಯಸಮನಲ್ಪಕಮ್ ।
ತಸ್ಮಾನ್ನಿರಾಶಿಷೋ ಭಕ್ತಿರ್ನಿರಪೇಕ್ಷಸ್ಯ ಮೇ ಭವೇತ್ ॥ ೩೫ ॥

ನ ಮಯ್ಯೇಕಾಂತಭಕ್ತಾನಾಂ ಗುಣದೋಷೋದ್ಭವಾ ಗುಣಾಃ ।
ಸಾಧೂನಾಂ ಸಮಚಿತ್ತಾನಾಂ ಬುದ್ಧೇಃ ಪರಮುಪೇಯುಷಾಮ್ ॥ ೩೬ ॥

ಏವಮೇತಾನ್ಮಯಾಽಽದಿಷ್ಟಾನನುತಿಷ್ಠಂತಿ ಮೇ ಪಥಃ ।
ಕ್ಷೇಮಂ ವಿಂದಂತಿ ಮತ್ಸ್ಥಾನಂ ಯದ್ಬ್ರಹ್ಮ ಪರಮಂ ವಿದುಃ ॥ ೩೭ ॥

ಹೀಗೆ ಅವನಿಗೆ ಸರ್ವಾತ್ಮಕನಾದ ನನ್ನ ಸಾಕ್ಷಾತ್ಕಾರವಾಗುತ್ತಲೇ ಅವನ ಹೃದಯದ ಚಿಜ್ಜಡಗ್ರಂಥಿಯು ಬಿಚ್ಚಲ್ಪಡುತ್ತದೆ. ಅವನ ಎಲ್ಲ ಸಂಶಯಗಳು ಛಿನ್ನ-ಭಿನ್ನವಾಗುತ್ತವೆ ಹಾಗೂ ಕರ್ಮವಾಸನೆಯು ಸರ್ವಥಾ ಕ್ಷೀಣವಾಗುತ್ತದೆ. ॥ ೩೦ ॥ ಇದರಿಂದ ನನ್ನ ಭಕ್ತಿಯಿಂದ ಕೂಡಿದ ಯೋಗಿಯು ನನ್ನ ಚಿಂತನೆಯಲ್ಲೇ ಮಗ್ನನಾಗಿದ್ದು ಅವನಿಗಾಗಿ ಜ್ಞಾನ ಅಥವಾ ವೈರಾಗ್ಯದ ಆವಶ್ಯಕತೆ ಇರುವುದಿಲ್ಲ. ಅವನ ಶ್ರೇಯಸ್ಸಾದರೋ ಪ್ರಾಯಶಃ ನನ್ನ ಭಕ್ತಿಯಿಂದಲೇ ಆಗಿ ಹೋಗುತ್ತದೆ. ॥ ೩೧ ॥ ಕರ್ಮ, ತಪಸ್ಸು, ಜ್ಞಾನ, ವೈರಾಗ್ಯ, ಯೋಗಾಭ್ಯಾಸ, ದಾನ, ಧರ್ಮ ಹಾಗೂ ಇನ್ನಿತರ ಶ್ರೇಯಸ್ಸಿನ ಸಾಧನೆಗಳಿಂದ ದೊರೆಯುವುದೆಲ್ಲವೂ, ನನ್ನ ಭಕ್ತನಿಗೆ ನನ್ನ ಭಕ್ತಿಯೋಗದ ಪ್ರಭಾವದಿಂದಲೇ ದೊರೆಯುತ್ತದೆ. ಸ್ವರ್ಗ, ಮೋಕ್ಷ ಅಥವಾ ನನ್ನ ಧಾಮವನ್ನು ಬಯಸುವ ನನ್ನ ಭಕ್ತನು ಆಯಾಸವಿಲ್ಲದೆ ಪಡೆದುಕೊಳ್ಳುತ್ತಾನೆ. ॥ ೩೨-೩೩॥ ನನ್ನ ಅನನ್ಯ ಪ್ರೇಮಿ ಹಾಗೂ ಧೈರ್ಯವುಳ್ಳ ಸಾಧು-ಭಕ್ತರು ಸ್ವತಃ ತಾನಾದರೋ ಏನನ್ನೂ ಬಯಸುವುದಿಲ್ಲ. ಒಂದೊಮ್ಮೆ ನಾನೇ ಕೈವಲ್ಯ-ಮೋಕ್ಷವನ್ನು ಕೊಟ್ಟರೂ ಅವರು ಅದನ್ನು ಪಡೆಯಲು ಇಚ್ಛಿಸುವುದಿಲ್ಲ. ॥ ೩೪ ॥ ಏನನ್ನೂ ಇಚ್ಛಿಸದಿರುವುದು ಪರಮ ಶ್ರೇಯಸ್ಸಿಗಾಗಿ, ಎಲ್ಲಕ್ಕಿಂತ ದೊಡ್ಡ ಸಾಧನೆಯಾಗಿದೆ. ಆದ್ದರಿಂದ ಯಾವುದೇ ಕಾಮನೆ ಇಲ್ಲದವನಿಗೆ, ಯಾವ ಅಪೇಕ್ಷೆಯೂ ಇಲ್ಲದವನಿಗೇ ನನ್ನಲ್ಲಿ ಭಕ್ತಿಯು ಉಂಟಾಗುತ್ತದೆ. ॥ ೩೫ ॥ ಬುದ್ಧಿಯಿಂದ ಅತೀತನಾದ ಪರಮಾತ್ಮ ತತ್ತ್ವವನ್ನು ಪಡೆದ ನನ್ನ ಅನನ್ಯ ಪ್ರೇಮೀ ಭಕ್ತರಿಗೆ, ಆ ಸಮದರ್ಶಿ ಮಹಾತ್ಮರಿಗೆ ಈ ವಿಧಿ-ನಿಷೇಧದಿಂದ ಉಂಟಾಗುವ ಪುಣ್ಯ-ಪಾಪಗಳಿಂದ ಯಾವುದೇ ಸಂಬಂಧವೂ ಇರುವುದಿಲ್ಲ. ॥ ೩೬ ॥ ಈ ಪ್ರಕಾರ ನಾನು ಹೇಳಿರುವ ಜ್ಞಾನ, ಭಕ್ತಿ, ಕರ್ಮಯೋಗಗಳ ಆಶ್ರಯಪಡೆದ ಜನರು ನನ್ನ ಪರಮ ಶ್ರೇಯಸ್ಕರವಾದ ಧಾಮವನ್ನು ಪಡೆದುಕೊಳ್ಳುತ್ತಾರೆ. ಏಕೆಂದರೆ, ಅವರು ಪರಬ್ರಹ್ಮ ತತ್ತ್ವವನ್ನು ತಿಳಿದುಕೊಂಡಿರುವರು. ॥ ೩೭ ॥

*ಇಪ್ಪತ್ತನೆಯ ಅಧ್ಯಾಯವು ಮುಗಿಯಿತು. ॥ ೨೦ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಏಕಾದಶ ಸ್ಕಂಧೇ ವಿಂಶೋಽಧ್ಯಾಯಃ ॥ ೨೦ ॥

# ಇಪ್ಪತ್ತೊಂದನೆಯ ಅಧ್ಯಾಯ

## ಗುಣ-ದೋಷ ವ್ಯವಸ್ಥೆಗಳ ಸ್ವರೂಪ ಮತ್ತು ಅವುಗಳ ರಹಸ್ಯ

*ಶ್ರೀಭಗವಾನುವಾಚ*

ಯ ಏತಾನ್ ಮತ್ಪಥೋ ಹಿತ್ವಾ ಭಕ್ತಿಜ್ಞಾನಕ್ರಿಯಾತ್ಮಕಾನ್ ।
ಕ್ಷುದ್ರಾನ್ಕಾಮಾಂಶ್ಚಲೈಃ ಪ್ರಾಣೈರ್ಜುಷಂತಃ ಸಂಸರಂತಿ ತೇ ॥ ೧ ॥

ಭಗವಾನ್ ಶ್ರೀಕೃಷ್ಣನು ಹೇಳುತ್ತಾನೆ – ಪ್ರಿಯ ಉದ್ಧವನೇ! ನನ್ನ ಪ್ರಾಪ್ತಿಗಾಗಿ ಭಕ್ತಿಯೋಗ, ಜ್ಞಾನಯೋಗ, ಕರ್ಮಯೋಗಗಳೆಂಬ ಮೂರುಮಾರ್ಗಗಳಿವೆ. ಇವನ್ನು ಬಿಟ್ಟು ಚಂಚಲ ಇಂದ್ರಿಯಗಳ ಮೂಲಕ ಕ್ಷುದ್ರವಾದ ಭೋಗಗಳನ್ನು ಭೋಗಿಸುತ್ತಿರುವವರು ಪದೇ-ಪದೇ ಜನ್ಮ-ಮೃತ್ಯುರೂಪೀ ಸಂಸಾರದಲ್ಲಿ ಸುತ್ತುತ್ತಾ ಇರುತ್ತಾರೆ. ॥ ೧ ॥

ಸ್ವೇ ಸ್ವೇಽಧಿಕಾರೇ ಯಾ ನಿಷ್ಠಾ ಸ ಗುಣಃ ಪರಿಕೀರ್ತಿತಃ ।
ವಿಪರ್ಯಯಸ್ತು ದೋಷಃ ಸ್ಯಾದುಭಯೋರೇಷ ನಿಶ್ಚಯಃ ॥ ೨ ॥

ಶುದ್ಧ್ಯಶುದ್ಧೀ ವಿಧೀಯೇತೇ ಸಮಾನೇಷ್ವಪಿ ವಸ್ತುಷು ।
ದ್ರವ್ಯಸ್ಯ ವಿಚಿಕಿತ್ಸಾರ್ಥಂ ಗುಣದೋಷೌ ಶುಭಾಶುಭೌ ॥ ೩ ॥

ಧರ್ಮಾರ್ಥಂ ವ್ಯವಹಾರಾರ್ಥಂ ಯಾತ್ರಾರ್ಥಮಿತಿ ಚಾನಘ ।
ದರ್ಶಿತೋಽಯಂ ಮಯಾಽಽಚಾರೋ ಧರ್ಮಮುದ್ವಹತಾಂ ಧುರಮ್ ॥ ೪ ॥

ಭೂಮ್ಯಂಬ್ವಗ್ನ್ಯನಿಲಾಕಾಶಾ ಭೂತಾನಾಂ ಪಂಚ ಧಾತವಃ ।
ಆಬ್ರಹ್ಮಸ್ಥಾವರಾದೀನಾಂ ಶಾರೀರಾ ಆತ್ಮಸಂಯುತಾಃ ॥ ೫ ॥

ವೇದೇನ ನಾಮರೂಪಾಣಿ ವಿಷಮಾಣಿ ಸಮೇಷ್ವಪಿ ।
ಧಾತುಷೂದ್ಧವ ಕಲ್ಪ್ಯಂತೇ ಏತೇಷಾಂ ಸ್ವಾರ್ಥಸಿದ್ಧಯೇ ॥ ೬ ॥

ದೇಶಕಾಲಾದಿಭಾವಾನಾಂ ವಸ್ತೂನಾಂಮಮ ಸತ್ತಮ ।
ಗುಣದೋಷೌ ವಿಧೀಯೇತೇ ನಿಯಮಾರ್ಥಂ ಹಿ ಕರ್ಮಣಾಮ್ ॥ ೭ ॥

ಅಕೃಷ್ಣಸಾರೋ ದೇಶಾನಾಮಬ್ರಹ್ಮಣ್ಯೋಽಶುಚಿರ್ಭವೇತ್ ।
ಕೃಷ್ಣಸಾರೋಽಪ್ಯಸೌವೀರಕೀಕಟಾಸಂಸ್ಕೃತೇರಿಣಮ್ ॥ ೮ ॥

ಕರ್ಮಣ್ಯೋ ಗುಣವಾನ್ಕಾಲೋ ದ್ರವ್ಯತಃ ಸ್ವತ ಏವ ವಾ ।
ಯತೋ ನಿವರ್ತತೇ ಕರ್ಮ ಸ ದೋಷೋಽಕರ್ಮಕಃ ಸ್ಮೃತಃ ॥ ೯ ॥

ತಮ್ಮ-ತಮ್ಮ ಅಧಿಕಾರಕ್ಕನುಸಾರ ಧರ್ಮದಲ್ಲಿ ದೃಢನಿಷ್ಠೆ ಇರುವುದೇ ಗುಣವಾಗಿದೆ ; ಇದಕ್ಕೆ ವಿಪರೀತವಾಗಿ ಅನಧಿಕಾರ ಚೇಷ್ಟೆಯನ್ನು ದೋಷವೆಂದು ಹೇಳಲಾಗಿದೆ. ತಾತ್ಪರ್ಯ – ಈ ಗುಣ-ದೋಷಗಳ ವ್ಯವಸ್ಥೆಯನ್ನು ಅಧಿಕಾರಕ್ಕನುಸಾರವೇ ಮಾಡಲಾಗುತ್ತದೆ ; ಯಾವುದೇ ವಸ್ತುವಿಗನುಸಾರವಲ್ಲ, ಆದ್ದರಿಂದ ಸ್ವಧರ್ಮವನ್ನು ಪಾಲಿಸಬೇಕು. ॥ ೨ ॥ ಎಲ್ಲ ವಸ್ತುಗಳು ತಾತ್ತ್ವಿಕ ರೂಪದಿಂದ ಸಮಾನವೇ ಆಗಿವೆ. ಆದರೆ ದ್ರವ್ಯದ ಗುಣ-ದೋಷ, ಶುಭ ಅಥವಾ ಅಶುಭ ಇವುಗಳ ವಿಷಯದಲ್ಲಿ ಆ ವಸ್ತುವಿನ ನಿರ್ಣಯಮಾಡಿಯೇ ಶುದ್ಧಿ-ಅಶುದ್ಧಿಯ ವಿಷಯವಾಗಿ ಹೇಳಲಾಗುತ್ತದೆ. ॥ ೩ ॥ ಪುಣ್ಯಾತ್ಮನಾದ ಉದ್ಧವನೇ ! ಈ ಶುದ್ಧಿ, ಅಶುದ್ಧಿಯ ನಿರ್ಣಯವು ಧರ್ಮದಿಂದಾಗಿಯೇ ಆಗುತ್ತದೆ. ವ್ಯವಹಾರ ಮತ್ತು ಶರೀರನಿರ್ವಾಹಕ್ಕಾಗಿಯೇ ಇದರ ವ್ಯವಸ್ಥೆ ಹೇಳಲಾಗಿದೆ. ಧರ್ಮದ ಮರ್ಯಾದೆಯನ್ನು ಪಾಲಿಸಲಿಕ್ಕಾಗಿ ನಾನೇ ಈ ಧರ್ಮದ ಆಚಾರವನ್ನು ಹೇಳಿರುವೆನು. ॥ ೪ ॥ ಪೃಥ್ವಿ, ಜಲ, ತೇಜ, ವಾಯು, ಆಕಾಶ ಈ ಪಂಚಭೂತಗಳೇ ಬ್ರಹ್ಮನಿಂದ ಹಿಡಿದು ಪರ್ವತ-ವೃಕ್ಷಗಳವರೆಗೆ ಎಲ್ಲ ಪ್ರಾಣಿಗಳ ಶರೀರಗಳ ಮೂಲ ಕಾರಣವಾಗಿವೆ. ಈ ರೀತಿ ಅವೆಲ್ಲವೂ ಶರೀರದ ದೃಷ್ಟಿಯಿಂದ ಸಮಾನವೇ ಆಗಿವೆ. ಎಲ್ಲರ ಆತ್ಮವೂ ಒಂದೇ ಆಗಿದೆ ; ಆದ್ದರಿಂದ ಆತ್ಮನ ದೃಷ್ಟಿಯಿಂದಲೂ ಸಮಾನವಾಗಿವೆ. ॥ ೫ ॥ ಎಲೈ ಉದ್ಧವನೇ ! ಪಂಚ – ಭೂತಗಳಾದರೋ ಎಲ್ಲದರಲ್ಲಿ ಸಮಾನವಾಗಿವೆ. ವೇದಗಳು ಅವುಗಳ ನಾಮ-ರೂಪಗಳನ್ನು ಬೇರೆ-ಬೇರೆಯಾಗಿ ಹೇಳುತ್ತವೆ. ಅವೆಲ್ಲವುಗಳಲ್ಲಿ ಸಜಾತೀಯ–ವಿಜಾತೀಯ, ಸ್ವಗತ ಭೇದಗಳನ್ನು ರಚಿಸಲಾಗಿದೆ. ಅವುಗಳ ಬೇರೆ-ಬೇರೆ ನಾಮ ರೂಪಗಳನ್ನು ಹೇಳಿರುವುದು ಆ ವಸ್ತುಗಳ ವ್ಯವಹಾರಕ್ಕಾಗಿಯೇ ಆಗಿದೆ. ॥ ೬॥ ಸಾಧುಶ್ರೇಷ್ಠ ಉದ್ಧವನೇ ! ದೇಶ, ಕಾಲ ಮುಂತಾದವುಗಳ ವಿಷಯದಲ್ಲಿ ಮತ್ತು ಪದಾರ್ಥಗಳ ವಿಷಯದಲ್ಲಿ ಹೇಳಲಾದ ಗುಣ-ದೋಷಗಳ ವಿಧಾನವು ಕರ್ಮಗಳು ನಿಯಮಿತವಾಗಿ ನಡೆಯಲೆಂದೇ ಇದೆ. ॥ ೭ ॥ ಕೃಷ್ಣಸಾರ ಮೃಗವು ಇಲ್ಲದಿರುವ ಮತ್ತು ಬ್ರಾಹ್ಮಣಭಕ್ತರು ವಾಸಿಸದ ದೇಶವು ಅಪವಿತ್ರವಾಗಿದೆ. ಕೃಷ್ಣಸಾರ ಮೃಗವಿದ್ದರೂ, ಸಂತಪುರುಷರು ವಾಸಿಸುವಷ್ಟು ಪ್ರದೇಶವನ್ನು ಬಿಟ್ಟು ಕೀಕಟದೇಶವು ಅಪವಿತ್ರವಾಗಿದೆ. ಇದಲ್ಲದೆ ಸಜ್ಜನರು ಇರದ, ಬರಡುಭೂಮಿಯೂ ಅಪವಿತ್ರವೇ ಆಗಿದೆ.॥ ೮॥ ಕರ್ಮಮಾಡಲು ಯೋಗ್ಯ ಸಾಮಗ್ರಿ ದೊರೆಯಬಹುದಾದ ಹಾಗೂ ಕರ್ಮವೂ ಆಗಬಹುದಾದ ಸಮಯವೇ ಪವಿತ್ರವಾದುದು. ಇದಕ್ಕೆ ವಿಪರೀತವಾಗಿ ಕರ್ಮಮಾಡುವ ಸಾಮಗ್ರಿಯು ದೊರೆಯದಿದ್ದಾಗ, ಹಾಗೆಯೇ ಆಗಂತುಕ ದೋಷಗಳಿಂದ ಅಥವಾ ಸ್ವಾಭಾವಿಕ ದೋಷದ ಕಾರಣ, ಕರ್ಮವು ನಡೆಯದಿರುವ ಸಮಯವು ಅಶುದ್ಧವಾದುದು. ॥ ೯ ॥ ಪದಾರ್ಥಗಳ ಶುದ್ಧಿ-ಅಶುದ್ಧಿಯ ನಿರ್ಣಯವು, ದ್ರವ್ಯ, ವಚನ, ಸಂಸ್ಕಾರ, ಕಾಲ ಹೆಚ್ಚಾಗಿರುವುದು ಹಾಗೂ ಕಡಿಮೆ ಇರುವುದು ಇದರಿಂದಲೂ ಆಗುತ್ತದೆ. (ಹೇಗೆಂದರೆ ಯಾವುದಾದರೂ ಪಾತ್ರೆಯು ನೀರಿನಿಂದ ಶುದ್ಧಿಗೊಳಿಸಿದರೂ ಮೂತ್ರಾದಿಗಳಿಂದ ಅಶುದ್ಧವಾಗುತ್ತದೆ. ಯಾವುದೇ ವಸ್ತುವಿನ ಶುದ್ಧಿ ಅಥವಾ ಅಶುದ್ಧಿಯಲ್ಲಿ ಶಂಕೆ ಉಂಟಾದರೆ

ದ್ರವ್ಯಸ್ಯ ಶುದ್ಧ್ಯಶುದ್ಧೀ ಚ ದ್ರವ್ಯೇಣ ವಚನೇನ ಚ ।
ಸಂಸ್ಕಾರೇಣಾಥ ಕಾಲೇನ ಮಹತ್ತ್ವಾಲ್ಪತಯಾಥವಾ ॥ ೧೦ ॥

ಶಕ್ತ್ಯಾಶಕ್ತ್ಯಾಥವಾ ಬುದ್ಧ್ಯಾ ಸಮೃದ್ಧ್ಯಾ ಚ ಯದಾತ್ಮನೇ ।
ಅಘಂ ಕುರ್ವಂತಿ ಹಿ ಯಥಾ ದೇಶಾವಸ್ಥಾನುಸಾರತಃ ॥ ೧೧ ॥

ಧಾನ್ಯದಾರ್ವಸ್ಥಿತಂತೂನಾಂ ರಸತೈಜಸಚರ್ಮಣಾಮ್ ।
ಕಾಲವಾಯ್ವಗ್ನಿಮೃತ್ತೋಯೈಃ ಪಾರ್ಥಿವಾನಾಂ ಯುತಾಯುತೈಃ ॥ ೧೨ ॥

ಅಮೇಧ್ಯಲಿಪ್ತಂ ಯದ್ಯೇನ ಗಂಧಂ ಲೇಪಂ ವ್ಯಪೋಹತಿ ।
ಭಜತೇ ಪ್ರಕೃತಿಂ ತಸ್ಯ ತಚ್ಛೌಚಂ ತಾವದಿಷ್ಯತೇ ॥ ೧೩ ॥

ಸ್ನಾನದಾನತಪೋಽವಸ್ಥಾವೀರ್ಯಸಂಸ್ಕಾರಕರ್ಮಭಿಃ ।
ಮತ್ ಸ್ಮೃತ್ಯಾ ಚಾತ್ಮನಃ ಶೌಚಂ ಶುದ್ಧಃ ಕರ್ಮಾಚರೇದ್ದ್ವಿಜಃ ॥ ೧೪ ॥

ಮಂತ್ರಸ್ಯ ಚ ಪರಿಜ್ಞಾನಂ ಕರ್ಮಶುದ್ಧಿರ್ಮದರ್ಪಣಮ್ ।
ಧರ್ಮಃ ಸಂಪದ್ಯತೇ ಷಡ್ಭಿರಧರ್ಮಸ್ತು ವಿಪರ್ಯಯಃ ॥ ೧೫ ॥

ಬ್ರಾಹ್ಮಣರ ವಚನದಿಂದ ಅದು ಶುದ್ಧವಾಗುತ್ತದೆ. ಇಲ್ಲದಿದ್ದರೆ ಅಶುದ್ಧವಾಗಿರುತ್ತದೆ. ಪುಷ್ಪಾದಿಗಳು ನೀರು ಚಿಮುಕಿಸುವುದರಿಂದ ಶುದ್ಧ ಮತ್ತು ಮೂಸುವುದರಿಂದ ಅಶುದ್ಧವಾಗುತ್ತವೆ. ಆಗಲೇ ಬೇಯಿಸಿದ ಅನ್ನವು ಶುದ್ಧ ಹಾಗೂ ತಂಗಳಾದುದು ಅಶುದ್ಧವೆಂದು ತಿಳಿಯಲಾಗುತ್ತದೆ. ದೊಡ್ಡ ಸರೋವರ, ನದಿ ಇವುಗಳ ನೀರು ಶುದ್ಧ ಮತ್ತು ಸಣ್ಣ ಹೊಂಡದ ನೀರು ಅಶುದ್ಧ. ಹೀಗೆಯೇ ಬೇರೆ ವಸ್ತುಗಳನ್ನು ತಿಳಿದುಕೊಳ್ಳಬೇಕು.) ॥ ೧೦ ॥ ಶಕ್ತ, ಅಶಕ್ತ (ಅಸಮರ್ಥ, ಬಾಲಕ, ವೃದ್ಧ ರೋಗಿ ಮುಂತಾದವರು), ಬುದ್ಧಿ ಮತ್ತು ವೈಭವಕ್ಕನುಸಾರವೂ ಪವಿತ್ರತೆ, ಅಪವಿತ್ರತೆಯ ವ್ಯವಸ್ಥೆಯಾಗುತ್ತದೆ. ಅದರಲ್ಲಿಯೂ ಸ್ಥಾನ ಮತ್ತು ಉಪಯೋಗ ಮಾಡುವವನ ಆಯುಸ್ಸಿನ ವಿಚಾರಮಾಡುತ್ತಾ ಅಶುದ್ಧ ವಸ್ತುಗಳ ವ್ಯವಹಾರದ ದೋಷವೂ ಸರಿಯಾಗಿ ಗುರುತಿಸಲಾಗುತ್ತದೆ. (ಶ್ರೀಮಂತ-ದರಿದ್ರ, ಬಲಿಷ್ಠ-ನಿರ್ಬಲ, ಬುದ್ಧಿವಂತ-ಮೂರ್ಖ, ಉಪದ್ರವದಿಂದ ಕೂಡಿದ ಮತ್ತು ಸುಖಕರವಾದ ದೇಶ, ತರುಣ-ವೃದ್ಧಾವಸ್ಥೆ ಇವುಗಳ ಭೇದದಿಂದ ಶುದ್ಧಿ ಹಾಗೂ ಅಶುದ್ಧಿಯ ವ್ಯವಸ್ಥೆಯಲ್ಲಿ ವ್ಯತ್ಯಾಸವಿರುತ್ತದೆ.) ॥ ೧೧ ॥ ಧಾನ್ಯಗಳು, ಮರದಪಾತ್ರೆ, ಆನೆಯದಂತ, ನೂಲು, ಜೇನು, ಉಪ್ಪು ಎಣ್ಣೆ ತುಪ್ಪ ಮುಂತಾದ ರಸವಸ್ತುಗಳು, ಚಿನ್ನ, ಪಾದರಸ ಮೊದಲಾದ ತೈಜಸ ಪದಾರ್ಥಗಳು, ಹುಲಿ, ಜಿಂಕೆ ಇವುಗಳ ಚರ್ಮ, ಮಣ್ಣಿನ ಗಡಿಗೆಯೇ ಮುಂತಾದವುಗಳು ಸಮಯಾನುಸಾರ ತಾನಾಗಿಯೇ ಗಾಳಿ ತಾಗುವುದರಿಂದ, ಬೆಂಕಿಯಲ್ಲಿ ಸುಟ್ಟಾಗ, ಮಣ್ಣಿನಿಂದ ತಿಕ್ಕುವುದರಿಂದ, ನೀರಿನಿಂದ ತೊಳೆಯುವುದರಿಂದ ಶುದ್ಧವಾಗುತ್ತವೆ. ದೇಶ, ಕಾಲ ಹಾಗೂ ಅವಸ್ಥೆಗನುಸಾರ ಕೆಲವೊಮ್ಮೆ ನೀರು, ಮಣ್ಣು ಮುಂತಾದ ಶೋಧಕ ಸಾಮಗ್ರಿಯ ಸಂಯೋಗದಿಂದ ಶುದ್ಧ ಮಾಡಬೇಕಾಗುತ್ತದೆ. ಕೆಲವು ಕಡೆಗಳಲ್ಲಿ ಒಂದೊಂದರಿಂದಲೇ ಶುದ್ಧವಾಗುತ್ತವೆ. ॥ ೧೨ ॥ ಯಾವುದೇ ವಸ್ತುವಿನಲ್ಲಿ ಯಾವುದಾದರೂ ಅಶುದ್ಧ ಪದಾರ್ಥ ತಗುಲಿದರೆ, ಸುಲಿಯುವುದರಿಂದ ಅಥವಾ ಮಣ್ಣು ಮುಂತಾದವುಗಳಿಂದ ತಿಕ್ಕುವುದರಿಂದ, ಆ ಪದಾರ್ಥದ ವಾಸನೆ, ಲೇಪ ಹೊರಟುಹೋಗಿ ಆ ವಸ್ತುವು ತನ್ನ ಹಿಂದಿನರೂಪವನ್ನು ಪಡೆದಾಗ ಅದನ್ನು ಶುದ್ಧವೆಂದು ತಿಳಿಯಬೇಕು. ॥ ೧೩ ॥ ಸ್ನಾನ, ದಾನ, ತಪಸ್ಸು, ವಯಸ್ಸು, ಸಾಮರ್ಥ್ಯ, ಸಂಸ್ಕಾರ, ಕರ್ಮ ಮತ್ತು ನನ್ನ ಸ್ಮರಣೆಯಿಂದ ಚಿತ್ತದ ಶುದ್ಧಿಯಾಗುತ್ತದೆ. ಇವುಗಳ ಮೂಲಕ ಶುದ್ಧರಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಇವರುಗಳು ವಿಹಿತ ಕರ್ಮಗಳನ್ನು ಆಚರಿಸಬೇಕು. ॥ ೧೪॥ ಗುರುಮುಖದಿಂದ ಕೇಳಿ ಚೆನ್ನಾಗಿ ಹೃದಯಂಗಮ ಮಾಡಿಕೊಂಡಾಗ ಮಂತ್ರದ ಮತ್ತು ನನಗೆ ಸಮರ್ಪಿಸುವುದರಿಂದ ಕರ್ಮದ ಶುದ್ಧಿಯಾಗುತ್ತದೆ. ಉದ್ಧವನೇ! ಹೀಗೆ ದೇಶ, ಕಾಲ, ಪದಾರ್ಥ, ಕರ್ತಾ, ಮಂತ್ರ ಮತ್ತು ಕರ್ಮ ಈ ಆರು ಶುದ್ಧವಾಗುವುದರಿಂದ ಧರ್ಮವು ಶುದ್ಧವಾಗುತ್ತದೆ. ಅಶುದ್ಧವಾದಾಗ ಅಧರ್ಮವೂ ಆಗುತ್ತದೆ. ॥ ೧೫ ॥

ಕ್ವಚಿದ್ಗುಣೋಽಪಿ ದೋಷಃ ಸ್ಯಾದ್ದೋಷೋಽಪಿ ವಿಧಿನಾ ಗುಣಃ ।
ಗುಣದೋಷಾರ್ಥನಿಯಮಸ್ತದ್ಭಿದಾಮೇವ ಬಾಧತೇ ॥ ೧೬ ॥

ಸಮಾನಕರ್ಮಾಚರಣಂ ಪತಿತಾನಾಂ ನ ಪಾತಕಮ್ ।
ಔತ್ಪತ್ತಿಕೋ ಗುಣಃ ಸಂಗೋ ನ ಶಯಾನಃ ಪತತ್ಯಧಃ ॥ ೧೭ ॥

ಯತೋ ಯತೋ ನಿವರ್ತೇತ ವಿಮುಚ್ಯೇತ ತತಸ್ತತಃ ।
ಏಷ ಧರ್ಮೋ ನೃಣಾಂ ಕ್ಷೇಮಃ ಶೋಕಮೋಹಭಯಾಪಹಃ ॥ ೧೮ ॥

ವಿಷಯೇಷು ಗುಣಾಧ್ಯಾಸಾತ್ ಪುಂಸಃ ಸಂಗಸ್ತತೋ ಭವೇತ್ ।
ಸಂಗಾತ್ತತ್ರ ಭವೇತ್ಕಾಮಃ ಕಾಮಾದೇವ ಕಲಿರ್ನೃಣಾಮ್ ॥ ೧೯ ॥

ಕಲೇರ್ದುರ್ವಿಷಹಃ ಕ್ರೋಧಸ್ತಮಸ್ತಮನುವರ್ತತೇ ।
ತಮಸಾ ಗ್ರಸ್ಯತೇ ಪುಂಸಶ್ಚೇತನಾ ವ್ಯಾಪಿನೀ ದ್ರುತಮ್ ॥ ೨೦ ॥

ತಯಾ ವಿರಹಿತಃ ಸಾಧೋ ಜಂತುಃ ಶೂನ್ಯಾಯ ಕಲ್ಪತೇ ।
ತತೋಽಸ್ಯ ಸ್ವಾರ್ಥವಿಭ್ರಂಶೋ ಮೂರ್ಚ್ಛಿತಸ್ಯ ಮೃತಸ್ಯ ಚ ॥ ೨೧ ॥

ವಿಷಯಾಭಿನಿವೇಶೇನ ನಾತ್ಮಾನಂ ವೇದ ನಾಪರಮ್ ।
ವೃಕ್ಷಜೀವಿಕಯಾ ಜೀವನ್ವ್ಯರ್ಥಂ ಭಸ್ತ್ರೇವ ಯಃ ಶ್ವಸನ್ ॥ ೨೨ ॥

ಒಂದೇ ವಸ್ತುವು ಗುಣವಾಗಿದ್ದರೂ ವಿಧಿಯು ನಿಷೇಧ ಮಾಡಿದ್ದರೆ ಆ ವಿಧಿವಾಕ್ಯಕ್ಕನುಸಾರ ಗುಣವೂ ದೋಷವಾಗುತ್ತದೆ. ಈ ಪ್ರಕಾರ ವಸ್ತುವಿನ ಗುಣ-ದೋಷಗಳ ವಿಷಯದಲ್ಲಿ ನಿಯಮಗಳನ್ನು ನಿರ್ಧರಿಸ ಲಾಗಿದೆ. ಆ ನಿಯಮಗಳನ್ನು ಯಾರು ಯಾವುದನ್ನು ಪಾಲಿಸಬೇಕು ಅಥವಾ ಯಾರು ಯಾವುದನ್ನು ಪಾಲಿಸಬಾರದು ಹೀಗೆ ಮಾಡಿರುವ ಭೇದವು ವರ್ಣಾವ್ಯವಸ್ಥೆಯನ್ನು ಸ್ಥಿರವಾಗಿಡಲೆಂದೇ ಆಗಿದೆ. ಆದ್ದರಿಂದಲೇ ಅವುಗಳಲ್ಲಿನ ಗುಣ-ದೋಷ ಭೇದವನ್ನು ಕಲ್ಪಿಸಲಾಗಿದೆ. ॥ ೧೬ ॥ ಪತಿತರಿಗೆ ಪಾಪದ ಆಚರಣೆಯು ಯಾವ ದೋಷವೂ ಇಲ್ಲ, ಅವರು ಮೊದಲಿನಿಂದಲೇ ಪಾತಕಿಗಳಾಗಿದ್ದಾರೆ. ಅವರು ಇನ್ನೂ ಪಾಪ ಮಾಡಿದರೆ ಅವರಿಗೆ ಪಾಪ ತಗಲುವುದಿಲ್ಲ. ಏಕೆಂದರೆ, ಗುಣ (ಪಾಪ)ಗಳಲ್ಲಿ ಆಸಕ್ತವಾಗುವುದಾದರೋ ಅವರ ಸ್ವಾಭಾವಿಕ ಪ್ರವೃತ್ತಿಯೇ ಆಗಿದೆ. ನೆಲದ ಮೇಲೆ ಮಲಗಿದವನಿಗೆ ಕೆಳಗೆ ಬೀಳುವ ಭಯವಿಲ್ಲ. ॥ ೧೭ ॥ ಯಾವ-ಯಾವ ಗುಣ-ದೋಷಗಳಿಂದ ಮನುಷ್ಯನ ಚಿತ್ತವು ಉಪರತವಾಗುತ್ತಾ ಹೋಗುತ್ತದೆಯೋ, ಆಯಾಯಾ ವಸ್ತುಗಳ ಬಂಧನದಿಂದ ಅವನು ಮುಕ್ತನಾಗುತ್ತಾ ಹೋಗುತ್ತಾನೆ. ಮನುಷ್ಯರಿಗಾಗಿ ಈ ನಿವೃತ್ತಿರೂಪೀ ಧರ್ಮವೇ ಪರಮ ಶ್ರೇಯಸ್ಸಿನ ಸಾಧನೆಯಾಗಿದೆ. ಏಕೆಂದರೆ, ಇದೇ ಶೋಕ, ಭಯ, ಮೋಹ ಇವುಗಳನ್ನು ಇಲ್ಲವಾಗಿಸುವಂತಹುದು. ॥ ೧೮ ॥ ಉದ್ಧವನೇ! ವಿಷಯಗಳಲ್ಲಿ ಗುಣಗಳನ್ನು ಆರೋಪಿಸುವುದರಿಂದ ಆ ವಸ್ತುವಿನ ಕುರಿತು ಆಸಕ್ತಿ ಉಂಟಾಗುತ್ತದೆ. ಆಸಕ್ತಿ ಉಂಟಾದಾಗ ಅದನ್ನು ಪಡೆಯುವ ಕಾಮನೆ ಹುಟ್ಟುತ್ತದೆ. ಈ ಕಾಮನೆಯ ಪೂರ್ತಿಯಲ್ಲಿ ಯಾವುದಾದರೂ ಅಡ್ಡಿ ಇದಿರಾದರೆ ಜನರಲ್ಲಿ ಪರಸ್ಪರ ಕಲಹವಾಗತೊಡಗುತ್ತದೆ. ॥ ೧೯ ॥ ಕಲಹದಿಂದ ಅಸಹ್ಯವಾದ ಕ್ರೋಧವು ಉಂಟಾಗುತ್ತದೆ ಮತ್ತು ಕ್ರೋಧ ಬಂದಾಗ ತನ್ನ ಹಿತ-ಅಹಿತದ ಎಚ್ಚರವಿರುವುದಿಲ್ಲ. ಅಜ್ಞಾನ ಆವರಿಸಿಬಿಡುತ್ತದೆ. ಈ ಅಜ್ಞಾನದಿಂದ ಮನುಷ್ಯನಲ್ಲಿ ಕಾರ್ಯಾಕಾರ್ಯವನ್ನು ನಿರ್ಣಯಿಸುವ ಚೇತನಾ ಶಕ್ತಿಯು ಲುಪ್ತವಾಗುತ್ತದೆ. ॥ ೨೦ ॥ ಸಾಧುವೇ! ಚೇತನಾಶಕ್ತಿಯು ಅರ್ಥಾತ್ ಸ್ಮೃತಿಯು ಲುಪ್ತವಾದಾಗ ಮನುಷ್ಯನಲ್ಲಿ ಮನುಷ್ಯತ್ವ ಉಳಿಯುವುದಿಲ್ಲ, ಪಶುತ್ವ ಬಂದುಬಿಡುತ್ತದೆ ಹಾಗೂ ಅವನು ಶೂನ್ಯದಂತೆ ಅಸ್ತಿತ್ವಹೀನನಾಗುತ್ತಾನೆ. ಆಗ ಅವನ ಸ್ಥಿತಿಯು ಮೂರ್ಛಿತ ಅಥವಾ ಹೆಣದಂತಾಗುತ್ತದೆ. ಇಂತಹ ಸ್ಥಿತಿಯಲ್ಲಿ ಅವನ ಸ್ವಾರ್ಥವೂ ಕೈಗೂಡುವುದಿಲ್ಲ, ಪರಮಾರ್ಥವೂ ಇಲ್ಲ. ॥ ೨೧ ॥ ವಿಷಯಗಳನ್ನು ಚಿಂತಿಸುತ್ತಾ-ಚಿಂತಿಸುತ್ತಾ ಅವನು ವಿಷಯರೂಪನಾಗುತ್ತಾನೆ. ಅವನ ಜೀವನವು ವೃಕ್ಷದಂತೆ ಜಡವಾಗುತ್ತದೆ. ಕಮ್ಮಾರನ ತಿದಿಯಂತೆ ಅವನ ಶರೀರದಲ್ಲಿ ವ್ಯರ್ಥವಾಗಿ ಶ್ವಾಸ ನಡೆಯುತ್ತಾ ಇರುತ್ತದೆ. ಅವನಿಗೆ ತನ್ನದಾಗಲೀ, ಬೇರೆಯವರದಾಗಲೀ ಜ್ಞಾನವಿರುವುದಿಲ್ಲ. ಅವನು ಸರ್ವಥಾ ಆತ್ಮವಂಚಿತನಾಗುತ್ತಾನೆ. ॥ ೨೨ ॥

ಫಲಶ್ರುತಿರಿಯಂ ನೃಣಾಂ ನ ಶ್ರೇಯೋ ರೋಚನಂ ಪರಮ್ ।
ಶ್ರೇಯೋವಿವಕ್ಷಯಾ ಪ್ರೋಕ್ತಂ ಯಥಾ ಭೈಷಜ್ಯರೋಚನಮ್
॥ ೨೩ ॥

ಉತ್ಪತ್ತ್ಯೈವ ಹಿ ಕಾಮೇಷು ಪ್ರಾಣೇಷು ಸ್ವಜನೇಷು ಚ ।
ಆಸಕ್ತಮನಸೋ ಮರ್ತ್ಯಾ ಆತ್ಮನೋಽನರ್ಥಹೇತುಷು
॥ ೨೪ ॥

ನ ತಾನವಿದುಷಃ ಸ್ವಾರ್ಥಂ ಭ್ರಾಮ್ಯತೋ ವೃಜಿನಾಧ್ವನಿ ।
ಕಥಂ ಯುಂಜ್ಯಾತ್ ಪುನಸ್ತೇಷು ತಾಂಸ್ತಮೋ ವಿಶತೋ ಬುಧಃ
॥ ೨೫ ॥

ಏವಂ ವ್ಯವಸಿತಂ ಕೇಚಿದವಿಜ್ಞಾಯ ಕುಬುದ್ಧಯಃ ।
ಫಲಶ್ರುತಿಂ ಕುಸುಮಿತಾಂ ನ ವೇದಜ್ಞಾ ವದಂತಿ ಹಿ
॥ ೨೬ ॥

ಕಾಮಿನಃ ಕೃಪಣಾ ಲುಬ್ಧಾಃ ಪುಷ್ಪೇಷು ಫಲಬುದ್ಧಯಃ ।
ಅಗ್ನಿಮುಗ್ಧಾ ಧೂಮತಾಂತಾಃ ಸ್ವಂ ಲೋಕಂ ನ ವಿದಂತಿ ತೇ
॥ ೨೭ ॥

ನ ತೇ ಮಾಮಂಗ ಜಾನಂತಿ ಹೃದಿಸ್ಥಂ ಯ ಇದಂ ಯತಃ ।
ಉಕ್ಥಶಸ್ತ್ರಾ ಹ್ಯಸುತೃಪೋ ಯಥಾ ನೀಹಾರಚಕ್ಷುಷಃ
॥ ೨೮ ॥

ತೇ ಮೇ ಮತಮವಿಜ್ಞಾಯ ಪರೋಕ್ಷಂ ವಿಷಯಾತ್ಮಕಾಃ ।
ಹಿಂಸಾಯಾಂ ಯದಿ ರಾಗಃ ಸ್ಯಾದ್ಯಜ್ಞ ಏವ ನ ಚೋದನಾ
॥ ೨೯ ॥

ಸವಿಮಾತುಗಳನ್ನಾಡಿ ಮಕ್ಕಳಿಗೆ ಕಹಿ ಔಷಧಿ ಕುಡಿಸುವಂತೆ, ವೇದಗಳಲ್ಲಿರುವ ಫಲಶ್ರುತಿಯು ವಾಸ್ತವವಾಗಿ ಶ್ರೇಯಸ್ಕರವಲ್ಲ, ಕೇವಲ ವೇದಗಳಲ್ಲಿ ಅಭಿರುಚಿಯನ್ನು ಉಂಟುಮಾಡಲೆಂದೇ ಇವೆ. ಆದ್ದರಿಂದ ವೈದಿಕ ಕರ್ಮಗಳಲ್ಲಿ ಅಭಿರುಚಿ ಉಂಟಾಗಿ ಅವನು ತನ್ನ ಶ್ರೇಯಸ್ಸನ್ನು ಮಾಡಿಕೊಳ್ಳಬಲ್ಲನು. ॥ ೨೩ ॥ ಕರ್ಮಗಳಲ್ಲಿ, ಪ್ರಾಣಗಳಲ್ಲಿ, ತನ್ನ ಹತ್ತಿರದ ನೆಂಟರಲ್ಲಿ ಮನುಷ್ಯನ ಮನಸ್ಸು ಸ್ವಾಭಾವಿಕವಾಗಿಯೇ ಆಸಕ್ತವಾಗಿರುತ್ತದೆ. ಇದು ಅವನನ್ನು ಪತನವಾಗಿಸುವಂತಹುದು. ಹೀಗೆ ಈ ಮನುಷ್ಯನು ಜನ್ಮ-ಜನ್ಮಾಂತರದ ಸಂಸ್ಕಾರಗಳಿಗೆ ವಶೀಭೂತನಾಗಿ ತನ್ನ ಸ್ವಾರ್ಥದಿಂದ ಭ್ರಷ್ಟನಾಗಿರುವನು. ಪರಮಾರ್ಥಪಥದಿಂದ ಪತಿತನಾದ ಪ್ರಾಣಿಯು ಇನ್ನೂ ಹೆಚ್ಚು ಅಂಧಕಾರದಲ್ಲಿ ಹೋಗುತ್ತಿದ್ದಾನೆ. ಇದನ್ನು ನೋಡಿ ವೇದವಾಣಿ ಅಥವಾ ಯಾವುದೇ ವಿದ್ವಾಂಸನು ಅವನನ್ನು ಮತ್ತೂ ಹೆಚ್ಚಿನ ಕುಮಾರ್ಗದಲ್ಲಿ ಅಲೆಯಲು ಏಕೆ ಪ್ರವೃತ್ತವಾಗಿಸೀತು ? ವೇದವಾದರೋ ಜ್ಞಾನಭಂಡಾರವಾಗಿದೆ. ಆದ್ದರಿಂದ ವೇದವು ಕುಮಾರ್ಗದಿಂದ ತೊಲಗಿಸಿ, ವೈದಿಕ ಕರ್ಮಗಳಲ್ಲಿ ಫಲಶ್ರುತಿಯ ಮಾತನ್ನು ಹೇಳಿ, ಅವನಲ್ಲಿ ರುಚಿಯನ್ನುಂಟುಮಾಡಿ ಸನ್ಮಾರ್ಗಕ್ಕೆ ಹಚ್ಚುವ ಪ್ರೇರಣೆಯನ್ನು ನೀಡುತ್ತದೆ. ॥ ೨೪-೨೫ ॥ ದೂಷಿತ ಬುದ್ಧಿಯ ಜನರು (ಕರ್ಮವಾದಿಗಳು) ವೇದಗಳ ಈ ಅಭಿಪ್ರಾಯವನ್ನು ತಿಳಿಯದೆ ಕರ್ಮಾಸಕ್ತಿವಶರಾಗಿ ಪುಷ್ಪಗಳಂತೆ ಆಕರ್ಷಕವಾಗಿ ಸ್ವರ್ಗಾದಿ ಲೋಕಗಳನ್ನು ವರ್ಣಿಸುತ್ತಾ, ಕೇಳುತ್ತಾ ಇರುತ್ತಾರೆ. ಅವನ್ನೇ ಪರಮ ಫಲವೆಂದು ತಿಳಿದು ದಾರಿತಪ್ಪುತ್ತಾರೆ. ಆದರೆ ವೇದಗಳನ್ನು ತಿಳಿದ ಜನರು ಶ್ರುತಿಗಳ ಇಂತಹ ತಾತ್ಪರ್ಯವನ್ನು ಹೇಳುವುದಿಲ್ಲ. ॥ ೨೬॥ ವಿಷಯವಾಸನೆಯಲ್ಲಿ ಸಿಕ್ಕಿಬಿದ್ದ ದೀನ-ಹೀನ, ಲೋಭೀ ಪುರುಷರು ಬಣ್ಣ-ಬಣ್ಣದ ಹೂವುಗಳಂತೆ ಸ್ವರ್ಗಾದಿ ಲೋಕಗಳನ್ನೇ ಎಲ್ಲವೂ ಎಂದು ತಿಳಿದುಕೊಳ್ಳುತ್ತಾರೆ. ಅಗ್ನಿಯ ಮೂಲಕ ಸಿದ್ಧವಾಗುವ ಯಜ್ಞ-ಯಾಗಾದಿ ಕರ್ಮಗಳಲ್ಲೇ ಮೋಹಿತರಾಗಿ ದೇವಲೋಕ, ಪಿತೃಲೋಕ ಮುಂತಾದವುಗಳಿಗೆ ಹೋಗುತ್ತಾರೆ. ಬೇರೆಡೆ ಅಲೆಯುವುದರಿಂದ ಅವರು ತಮ್ಮ ನಿಜಧಾಮವಾದ ಪರಮಪದವನ್ನು ಹೊಂದುವುದಿಲ್ಲ. ॥ ೨೭ ॥ ಪ್ರಿಯ ಉದ್ಧವನೇ ! ಪರಮಾತ್ಮನಿಂದ ಈ ವಿಶ್ವವು ಉತ್ಪನ್ನವಾಗಿದೆ. ಆ ಪರಮಪಿತಾ ಪರಮಾತ್ಮನಾದರೋ ಅವರ ಹೃದಯದಲ್ಲೇ ವಿರಾಜಮಾನನಾಗಿದ್ದಾನೆ. ಆದರೆ ಅವರು ಕರ್ಮಮಾರ್ಗದ ಶಸ್ತ್ರವನ್ನು ಹಿಡಿದೇ ನಡೆಯುತ್ತಾರೆ. ಇಂತಹ ಪ್ರಾಣಪೋಷಣೆಯಲ್ಲೇ ತೊಡಗಿರುವ ಜನರ ಕಣ್ಣುಗಳಲ್ಲಿ ಪ್ರಾಯಶಃ ಕತ್ತಲೆಯೇ ಆವರಿಸಿರುತ್ತದೆ. ॥ ೨೮ ॥ ಇದೇ ಕಾರಣದಿಂದ ಅವರು ನನ್ನನ್ನು ತಿಳಿಯದೇ ಹೋಗುತ್ತಾರೆ ಹಾಗೂ ನನ್ನ ಪರೋಕ್ಷ ಮತವನ್ನೂ ಕೂಡ ತಿಳಿಯದೆ ಹೋಗುವರು. ಬುದ್ಧಿಯಲ್ಲಿ ವಿಷಯಗಳೇ ನುಸುಳಿದ್ದರಿಂದ ಹಿಂಸೆಯಲ್ಲೇ ಅವರಿಗೆ ಆಸಕ್ತಿ ಇರುತ್ತದೆ. ಆ ಹಿಂಸಾವೃತ್ತಿಯನ್ನು ತಡೆಯುವುದಕ್ಕಾಗಿಯೇ, ಅವರ ಈ ಉಚ್ಛೃಂಖಲ ಪ್ರವೃತ್ತಿ ಒಂದು ಸೀಮೆಯೊಳಗೆ ಬಂಧಿಸಿರಲಿ ಎಂದೇ ಯಜ್ಞದ ವಿಧಾನವನ್ನು ಮಾಡಲಾಗಿದೆ. ॥ ೨೯ ॥

ಹಿಂಸಾವಿಹಾರಾ ಹ್ಯಾಲಬ್ಧೈಃ ಪಶುಭಿಃ ಸ್ವಸುಖೇಚ್ಛಯಾ ।
ಯಜಂತೇ ದೇವತಾ ಯಜ್ಞೈಃ ಪಿತೃಭೂತಪತೀನ್ ಖಲಾಃ
॥ ೩೦ ॥

ಸ್ವಪ್ನೋಪಮಮಮುಂ ಲೋಕಮಸಂತಂ ಶ್ರವಣಪ್ರಿಯಮ್ ।
ಆಶಿಷೋ ಹೃದಿ ಸಂಕಲ್ಪ್ಯ ತ್ಯಜಂತ್ಯರ್ಥಾನ್ಯಥಾ ವಣಿಕ್
॥ ೩೧ ॥

ರಜಃಸತ್ತ್ವತಮೋನಿಷ್ಠಾ ರಜಃಸತ್ತ್ವತಮೋಜುಷಃ ।
ಉಪಾಸತ ಇಂದ್ರಮುಖ್ಯಾನ್ ದೇವಾದೀನ್ ನ ತಥೈವ ಮಾಮ್
॥ ೩೨ ॥

ಇಷ್ಟ್ವೇಹ ದೇವತಾ ಯಜ್ಞೈರ್ಗತ್ವಾ ರಂಸ್ಯಾಮಹೇ ದಿವಿ ।
ತಸ್ಯಾಂತ ಇಹ ಭೂಯಾಸ್ಮ ಮಹಾಶಾಲಾ ಮಹಾಕುಲಾಃ
॥ ೩೩ ॥

ಏವಂ ಪುಷ್ಪಿತಯಾ ವಾಚಾ ವ್ಯಾಕ್ಷಿಪ್ತಮನಸಾಂ ನೃಣಾಮ್ ।
ಮಾನಿನಾಂ ಚಾತಿಸ್ತಬ್ಧಾನಾಂ ಮದ್ವಾರ್ತಾಪಿ ನ ರೋಚತೇ
॥ ೩೪ ॥

ವೇದಾ ಬ್ರಹ್ಮಾತ್ಮವಿಷಯಾಸ್ತ್ರಿಕಾಂಡವಿಷಯಾ ಇಮೇ ।
ಪರೋಕ್ಷವಾದಾ ಋಷಯಃ ಪರೋಕ್ಷಂ ಮಮ ಚ ಪ್ರಿಯಮ್
॥ ೩೫ ॥

ಶಬ್ದಬ್ರಹ್ಮ ಸುದುರ್ಬೋಧಂ ಪ್ರಾಣೇಂದ್ರಿಯಮನೋಮಯಮ್ ।
ಅನಂತಪಾರಂ ಗಂಭೀರಂ ದುರ್ವಿಗಾಹ್ಯಂ ಸಮುದ್ರವತ್
॥ ೩೬ ॥

ಈ ಪ್ರಕಾರ ಆ ಪಾಮರ ವಿಷಯಲೋಲುಪರು ತಮ್ಮ ಇಂದ್ರಿಯಗಳನ್ನು ತೃಪ್ತಿಪಡಿಸಲಿಕ್ಕಾಗಿ ಯಜ್ಞಗಳ ಮೂಲಕ, ದೇವತೆಗಳನ್ನು, ಪಿತೃಗಳನ್ನು ಮತ್ತು ಭೂತಪತಿಗಳನ್ನು ಒಲಿಸಿಕೊಳ್ಳಲು ಯಜನದ ದಂಭಾಚಾರವನ್ನು ಮಾಡುತ್ತಾ, ಮುಗ್ಧ ಮೂಕಪಶುಗಳನ್ನು ಹತ್ಯೆ ಮಾಡುತ್ತಾರೆ. ॥ ೩೦ ॥

ಎಲೈ ಉದ್ಧವನೇ! ಕೇಳಿಬರುವ ಸ್ವರ್ಗಾದಿ ಲೋಕಗಳ ಸುಖಭೋಗ, ಐಶ್ವರ್ಯಗಳು ಉಂಟಾಗದಿದ್ದರೂ ಕರ್ಣಪ್ರಿಯವಾಗಿವೆ. ವ್ಯಾಪಾರಿಯು ಲಾಭದ ಆಸೆಯಿಂದ ತನ್ನ ಮೂಲ ಭಂಡವಾಳವನ್ನು ಕಳೆದುಕೊಳ್ಳುವಂತೆ ಆ ಭೋಗಗಳ ಆಸೆಯ ನ್ನಿರಿಸಿ ಅದಕ್ಕಾಗಿ ತನ್ನ ನಿಜವಾದ ದ್ರವ್ಯವನ್ನು ಆ ಕರ್ಮಠರು ಕಳೆದು ಕೊಳ್ಳುತ್ತಾರೆ. ॥ ೩೧ ॥ ರಜಮಿಶ್ರಿತ ಸತ್ತ್ವಗುಣಿಗಳು ಮತ್ತು ತಮೋಗುಣ ಪ್ರಕೃತಿಯ ಜನರು ಈ ರೀತಿಯ ರಜಮಿಶ್ರಿತ ಸತ್ತ್ವ ಗುಣ ಮತ್ತು ತಮೋಗುಣಗಳನ್ನು ಸೇವಿಸುತ್ತಾ, ಆ ಸಾಮಗ್ರಿಗಳ ಮೂಲಕ ಇಂದ್ರಾದಿ ದೇವತೆಗಳನ್ನು ಉಪಾಸಿಸುತ್ತಾರೆ. ಆದರೆ ಅವರು ನನ್ನ ಉಪಾಸನೆಯನ್ನು ಮಾಡುವುದಿಲ್ಲ. ॥ ೩೨ ॥ ಅವರು ಈ ಪ್ರಕಾರ ಕಲ್ಪನೆ ಮಾಡುತ್ತಿರುತ್ತಾರೆ – 'ನಾವುಗಳು ಈ ಲೋಕದಲ್ಲಿ ಯಜ್ಞಗಳ ಮೂಲಕ ದೇವತೆಗಳನ್ನು ತೃಪ್ತಿಪಡಿಸಿ ಸ್ವರ್ಗಕ್ಕೆ ಹೋಗುವೆವು. ಅಲ್ಲಿ ದಿವ್ಯ ಭೋಗ-ಆನಂದವನ್ನು ಅನುಭವಿಸುವೆವು. ಅನಂತರ ಪುನಃ ನಮ್ಮ ಜನ್ಮವಾದಾಗ ನಾವು ದೊಡ್ಡ ಕುಲೀನ ಪರಿವಾರದಲ್ಲಿ ಹುಟ್ಟುವೆವು. ನಮ್ಮ ದೊಡ್ಡ ದೊಡ್ಡ ಅರಮನೆಗಳಿರುವುವು, ನಮ್ಮ ಕುಟುಂಬ ತುಂಬಾ ಸುಖೀಯಾಗಿದ್ದು ದೊಡ್ಡದಾಗಿರಬಹುದು.' ಹೀಗೆ ನೋಡಲು ಮಾತ್ರ ಸುಂದರ, ಮಧುರವಾಣಿಯಿಂದ ಅವರ ಚಿತ್ತವು ಕ್ಷುಬ್ಧವಾಗುತ್ತದೆ. ಅದರಲ್ಲೇ ಮೋಹಿತರಾಗಿರುತ್ತಾರೆ. ಆ ಮದಾಂಧರಿಗೆ ನನ್ನ ಸಂಬಂಧವಾದ ಮಾತು ಕೂಡ ಒಳ್ಳೆಯದೆನಿಸುವುದಿಲ್ಲ. ॥ ೩೩-೩೪ ॥

ಎಲೈ ಉದ್ಧವನೇ! ವೇದಗಳಲ್ಲಿ ಕರ್ಮಕಾಂಡ, ಉಪಾಸನಾ ಕಾಂಡ, ಜ್ಞಾನಕಾಂಡ ಎಂಬ ಮೂರು ಕಾಂಡಗಳಿವೆ. ಈ ಮೂರರಲ್ಲಿಯೂ ಪ್ರತಿಪಾದಿತ ವಿಷಯವು ಬ್ರಹ್ಮ ಮತ್ತು ಆತ್ಮನ ಏಕತೆಯಾಗಿದೆ. ಎಲ್ಲ ಮಂತ್ರಗಳು ಮತ್ತು ಮಂತ್ರದ್ರಷ್ಟಾರ ಋಷಿಗಳು ಈ ವಿಷಯವನ್ನು ತೆರೆದುಹೇಳದೆ ಗುಪ್ತಭಾವದಿಂದ ಹೇಳುತ್ತಾರೆ. ನನಗೂ ಕೂಡ ಈ ಮಾತನ್ನು ಗುಪ್ತರೂಪದಿಂದ ಹೇಳುವುದೇ ಅಭೀಷ್ಟವಾಗಿದೆ.* (ಏಕೆಂದರೆ ಗುಪ್ತವಾಗಿಡುವುದರಿಂದಲೇ ಸೃಷ್ಟಿಯೂ ನಡೆಯಬಲ್ಲದು.) ॥ ೩೫ ॥ ವೇದಗಳ ಹೆಸರು ಶಬ್ದ ಬ್ರಹ್ಮವಾಗಿದೆ. ಅವು ನನ್ನ ಮೂರ್ತಿಯಾಗಿವೆ. ಇದರಿಂದ ಅವುಗಳ ರಹಸ್ಯವನ್ನು ತಿಳಿಯುವುದು ಅತ್ಯಂತ ಕಠಿಣವಾಗಿದೆ. ಆ ಶಬ್ದ ಬ್ರಹ್ಮವು ಪರಾ, ಪಶ್ಯಂತಿ, ಮಧ್ಯಮಾವಾಣಿಗಳ ರೂಪದಲ್ಲಿ ಪ್ರಾಣ, ಮನ, ಇಂದ್ರಿಯಮಯವಾಗಿದೆ. ಸಮುದ್ರದಂತೆ ಸೀಮಾರಹಿತ, ಗಂಭೀರವಾಗಿದೆ. ಅದರ ಆಳ ತಿಳಿಯುವುದು ಅತ್ಯಂತ ಕಠಿಣವಾಗಿದೆ. ದೊಡ್ಡ-ದೊಡ್ಡ ವಿದ್ವಾಂಸರೂ ಕೂಡ ಅವುಗಳ ತಾತ್ಪರ್ಯವನ್ನು ಸರಿಯಾಗಿ ನಿರ್ಣಯ ಮಾಡಲಾರರು. ॥ ೩೬ ॥

* ಏಕೆಂದರೆ, ಎಲ್ಲ ಜನರು ಇದರ ಅಧಿಕಾರಿಗಳಲ್ಲ, ಅಂತಃಕರಣ ಶುದ್ಧವಾದ ಮೇಲೆಯೇ ಈ ಮಾತು ಅರಿವಿಗೆ ಬರುತ್ತದೆ.

ಮಯೋಪಬೃಂಹಿತಂ ಭೂಮ್ನಾ ಬ್ರಹ್ಮಣಾನಂತಶಕ್ತಿನಾ ।
ಭೂತೇಷು ಘೋಷರೂಪೇಣ ಬಿಸೇಷೂರ್ಣೇವ ಲಕ್ಷ್ಯತೇ
॥ ೩೭ ॥

ಯಥೋರ್ಣನಾಭಿರ್ಹೃದಯಾದೂರ್ಣಾಮುದ್ವಮತೇ ಮುಖಾತ್ ।
ಆಕಾಶಾದ್ಘೋಷವಾನ್ಪ್ರಾಣೋ ಮನಸಾ ಸ್ಪರ್ಶರೂಪಿಣಾ
॥ ೩೮ ॥

ಛಂದೋಮಯೋಽಮೃತಮಯಃ ಸಹಸ್ರಪದವೀಂ ಪ್ರಭುಃ ।
ಓಂಕಾರಾದ್ವ್ಯಂಜಿತಸ್ಪರ್ಶಸ್ವರೋಷ್ಮಾಂತಃಸ್ಥಭೂಷಿತಾಮ್
॥ ೩೯ ॥

ವಿಚಿತ್ರಭಾಷಾವಿತತಾಂ ಛಂದೋಭಿಶ್ಚತುರುತ್ತರೈಃ ।
ಅನಂತಪಾರಾಂ ಬೃಹತೀಂ ಸೃಜತ್ಯಾಕ್ಷಿಪತೇ ಸ್ವಯಮ್
॥ ೪೦ ॥

ಗಾಯತ್ರ್ಯುಷ್ಣಿಗನುಷ್ಟುಪ್ ಚ ಬೃಹತೀ ಪಂಕ್ತಿರೇವ ಚ ।
ತ್ರಿಷ್ಟುಬ್ಜಗತ್ಯತಿಚ್ಛಂದೋ ಹ್ಯತ್ಯಷ್ಟ್ಯತಿಜಗದ್ವಿರಾಟ್
॥ ೪೧ ॥

ಕಿಂ ವಿಧತ್ತೇ ಕಿಮಾಚಷ್ಟೇ ಕಿಮನೂದ್ಯ ವಿಕಲ್ಪಯೇತ್ ।
ಇತ್ಯಸ್ಯಾ ಹೃದಯಂ ಲೋಕೇ ನಾನ್ಯೋ ಮದ್ವೇದ ಕಶ್ಚನ
॥ ೪೨ ॥

ಮಾಂ ವಿಧತ್ತೇಽಭಿಧತ್ತೇ ಮಾಂ ವಿಕಲ್ಪ್ಯಾಪೋಹ್ಯತೇ ತ್ವಹಮ್ ।
ಏತಾವಾನ್ ಸರ್ವವೇದಾರ್ಥಃ ಶಬ್ದ ಆಸ್ಥಾಯ ಮಾಂ ಭಿದಾಮ್ ।
ಮಾಯಾಮಾತ್ರಮನೂದ್ಯಾಂತೇ ಪ್ರತಿಷಿಧ್ಯ ಪ್ರಸೀದತಿ
॥ ೪೩॥

ಉದ್ಧವನೇ ! ನಾನು ಅನಂತಶಕ್ತಿಸಂಪನ್ನ ಹಾಗೂ ಸ್ವಯಂ ಅನಂತ ಬ್ರಹ್ಮನಾಗಿದ್ದೇನೆ. ನಾನೇ ವೇದವಾಣಿಯನ್ನು ವಿಸ್ತರಿಸಿರುವೆನು. ಕಮಲದ ದಂಟಿನಲ್ಲಿ ತೆಳ್ಳನೆಯ ಸೂಕ್ಷ್ಮದಾರವಿರುವಂತೆ ಈ ವೇದ ವಾಣಿಯು ಪ್ರಾಣಿಗಳ ಅಂತಃಕರಣದಲ್ಲಿ ಅನಾಹತ ನಾದದ ರೂಪದಲ್ಲಿ ಪ್ರಕಟವಾಗುತ್ತದೆ. ॥ ೩೭ ॥ ಪ್ರತಿಯೊರ್ವ ಪ್ರಾಣಿಯ ಹೃದಯಾಕಾಶದಲ್ಲಿ ಅನಾಹತನಾದ ರೂಪದಲ್ಲಿ ಘೋಷಯುಕ್ತ ಪ್ರಾಣದ ಅಭಿವ್ಯಕ್ತಿಯು ಅನಾಹತನಾದದ ರೂಪದಲ್ಲಿ ಪ್ರಕಟ ವಾಗುತ್ತದೆ. ಅದು ಪ್ರಾಣ, ಮನಸ್ಸಿನ ಮೂಲಕ ಸ್ಪರ್ಶ ಆದಿ ವರ್ಣಗಳ ರೂಪದಲ್ಲಿ ಹೊರಗೆ ಬರುತ್ತದೆ. 'ಅ' ದಿಂದ 'ಮ'ವರೆಗೆ ಎಲ್ಲ ವಾಣಿಗಳು ಓಂಕಾರದಿಂದಲೇ ಉತ್ಪನ್ನವಾಗಿವೆ. ಸ್ಥಾನಭೇದ ದಿಂದ ಸ್ಪರ್ಶ, ಸ್ವರ, ಊಷ್ಮ, ಅಂತಸ್ಥ ಹೀಗೆ ಅವುಗಳ ಹೆಸರಾ ದುವು. ಜೇಡವು ತನ್ನ ಬಾಯಿಂದಲೇ ಬಲೆಯನ್ನು ನೆಯ್ದು ಮತ್ತೆ ನುಂಗಿಬಿಡುವಂತೆ ವೇದಮಯ ಪ್ರಭುವಾದ ನಾನು ಓಂಕಾರ ದಿಂದಲೇ ಸಾವಿರಾರು ಪ್ರಕಾರದ ಬೃಹತೀವಾಣಿಯನ್ನು ಉತ್ಪನ್ನ ಮಾಡುತ್ತೇನೆ ಹಾಗೂ ನನ್ನಲ್ಲೇ ಲೀನಗೊಳಿಸಿಕೊಳ್ಳುತ್ತೇನೆ. ಹೀಗೆ ವಾಣಿಯು ನನ್ನದೇ ಸ್ವರೂಪವಾಗಿದೆ. ಆ ವಾಣಿಯು ಹೃದ್ಗತ ಸೂಕ್ಷ್ಮ ಓಂಕಾರದ ಮೂಲಕ ಅಭಿವ್ಯಕ್ತ ಸ್ಪರ್ಶ ('ಕ'ದಿಂದ ಹಿಡಿದು 'ಮ' ವರೆಗೆ ೨೫), ಸ್ವರ ('ಅ' ದಿಂದ 'ಔ' ವರೆಗೆ ೯), ಊಷ್ಮಾ (ಶ, ಷ, ಸ, ಹ), ಅಂತಸ್ಥ (ಯ, ರ, ಲ, ವ) – ಈ ವರ್ಣಗಳಿಂದ ವಿಭೂಷಿತವಾಗಿವೆ. ಅವುಗಳಲ್ಲಿ ಉತ್ತರೋತ್ತರ ನಾಲ್ಕು-ನಾಲ್ಕು ವರ್ಣಗಳು ಹೆಚ್ಚುತ್ತಾ ಅನೇಕ ಛಂದಸ್ಸುಗಳು ಇವೆ. ಅವುಗಳ ಮೂಲಕ ವಿಚಿತ್ರ ಭಾಷೆಯ ರೂಪದಲ್ಲಿ ಅದು ವಿಸ್ತೃತ ವಾಗಿದೆ. ॥ ೩೮-೪೦ ॥ ನಾಲ್ಕು-ನಾಲ್ಕು ವರ್ಣಗಳು ಹೆಚ್ಚುತ್ತಾ ಅನೇಕ ಛಂದಸ್ಸುಗಳಾಗುತ್ತವೆ. ಅವು ಹೀಗಿವೆ – ಗಾಯತ್ರೀ, ಉಷ್ಣಿಕ್, ಅನುಷ್ಟುಪ್, ಬೃಹತೀ, ಪಂಕ್ತೀ, ತ್ರಿಷ್ಟುಪ್, ಜಗತೀ, ಅತಿಛಂದ, ಅತ್ಯಷ್ಟಿ, ಅತಿಜಗತಿ ಮತ್ತು ವಿರಾಟ್. ॥ ೪೧ ॥ ಆ ವೇದ ವಾಣಿಯು ಕರ್ಮಕಾಂಡದಲ್ಲಿ ಯಾವ ವಿಧಾನಮಾಡು ತ್ತದೆ, ಉಪಾಸನಾ ಕಾಂಡದಲ್ಲಿ ಯಾವ ದೇವತೆಗಳನ್ನು ವರ್ಣಿಸು ತ್ತದೆ, ಜ್ಞಾನಕಾಂಡದಲ್ಲಿ ಯಾವ ಪ್ರತೀತಿಗಳನ್ನು ಅನುವಾದಿಸುತ್ತಾ, ಯಾವುದನ್ನು ನಿಷೇಧ ಮಾಡುತ್ತದೆ. ಇದರ ರಹಸ್ಯ ನಾನಲ್ಲದೆ ಬೇರೆ ಯಾರೂ ತಿಳಿಯಲಾರರು. ॥ ೪೨ ॥ ವೇದವು ಯಜ್ಞಾದಿ ಗಳ ಮೂಲಕ ನನ್ನನ್ನೇ ವರ್ಣಿಸುತ್ತವೆ. ಉಪಾಸನಾಕಾಂಡದಲ್ಲಿ ನನ್ನನ್ನೇ ಮುಖ್ಯಾರ್ಥದಲ್ಲಿ ದೇವತೆಗಳನ್ನು ವರ್ಣಿಸುತ್ತದೆ ; ಜ್ಞಾನ ಕಾಂಡದ ಮೂಲಕ ನನ್ನಿಂದ ಬೇರೆಯಾದ ವಸ್ತುವನ್ನು ವರ್ಣಿಸುತ್ತಾ 'ನೇತಿ-ನೇತಿ' ವಾಕ್ಯಗಳ ಮೂಲಕ ಬೇರೆಯದನ್ನು ನಿಷೇಧವನ್ನೂ ಮಾಡುತ್ತದೆ. ಈ ಪ್ರಕಾರ ವೇದವು ನನ್ನನ್ನೇ ಮುಂದಿರಿಸಿಕೊಂಡು ನನ್ನಲ್ಲೇ ಭೇದವನ್ನು ಆರೋಪಿಸುತ್ತದೆ, ಇದೆಲ್ಲವೂ ಮಾಯೆಯೇ ಆಗಿದೆ. ಕೊನೆಯಲ್ಲಿ ''ಸರ್ವಂ ಖಲ್ವಿದಂ ಬ್ರಹ್ಮ'' ಎಂದೇ ಹೇಳಿ ವೇದವು ಸಂತೋಷಪಡುತ್ತದೆ. ॥ ೪೩. ॥

ಇಪ್ಪತ್ತೊಂದನೆಯ ಅಧ್ಯಾಯವು ಮುಗಿಯಿತು. ॥ ೨೧ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಏಕಾದಶ ಸ್ಕಂಧೇ ಏಕವಿಂಶೋಽಧ್ಯಾಯಃ॥ ೨೧ ॥

# ಇಪ್ಪತ್ತೆರಡನೆಯ ಅಧ್ಯಾಯ

## ತತ್ತ್ವಗಳ ಸಂಖ್ಯೆ ಮತ್ತು ಪ್ರಕೃತಿ ಪುರುಷರ ವಿಶ್ಲೇಷಣೆ

*ಉದ್ಧವ ಉವಾಚ*

ಕತಿ ತತ್ತ್ವಾನಿ ವಿಶ್ವೇಶ ಸಂಖ್ಯಾತಾನ್ಯೃಷಿಭಿಃ ಪ್ರಭೋ ।
ನವೈಕಾದಶ ಪಂಚ ತ್ರೀಣ್ಯಾತ್ಥ ತ್ವಮಿಹ ಶುಶ್ರುಮ ॥ ೧ ॥

ಕೇಚಿತ್ ಷಡ್ವಿಂಶತಿಂ ಪ್ರಾಹುರಪರೇ ಪಂಚವಿಂಶತಿಮ್ ।
ಸಪ್ತೈಕೇ ನವ ಷಟ್ಕೇಚಿಚ್ಚತ್ವಾರ್ಯೇಕಾದಶಾಪರೇ ॥ ೨ ॥

ಕೇಚಿತ್ ಸಪ್ತದಶ ಪ್ರಾಹುಃ ಷೋಡಶೈಕೇ ತ್ರಯೋದಶ ।
ಏತಾವತ್ತ್ವಂ ಹಿ ಸಂಖ್ಯಾನಾಮೃಷಯೋ ಯದ್ವಿವಕ್ಷಯಾ ।
ಗಾಯಂತಿ ಪೃಥಗಾಯುಷ್ಮನ್ನಿದಂ ನೋ ವಕ್ತುಮರ್ಹಸಿ ॥ ೩ ॥

*ಶ್ರೀಭಗವಾನುವಾಚ*

ಯುಕ್ತಂ ಚ ಸಂತಿ ಸರ್ವತ್ರ ಭಾಷಂತೇ ಬ್ರಾಹ್ಮಣಾ ಯಥಾ ।
ಮಾಯಾಂ ಮದೀಯಾಮುದ್ಗೃಹ್ಯ ವದತಾಂ ಕಿಂ ನು ದುರ್ಘಟಮ್ ॥ ೪ ॥

ನೈತದೇವಂ ಯಥಾಽಽತ್ಥ ತ್ವಂ ಯದಹಂ ವಚ್ಮಿ ತತ್ತಥಾ ।
ಏವಂ ವಿವದತಾಂ ಹೇತುಂ ಶಕ್ತಯೋ ಮೇ ದುರತ್ಯಯಾಃ ॥ ೫ ॥

ಯಾಸಾಂ ವ್ಯತಿಕರಾದಾಸೀದ್ವಿಕಲ್ಪೋ ವದತಾಂ ಪದಮ್ ।
ಪ್ರಾಪ್ತೇ ಶಮದಮೇಽಪ್ಯೇತಿ ವಾದಸ್ತಮನುಶಾಮ್ಯತಿ ॥ ೬ ॥

ಪರಸ್ಪರಾನುಪ್ರವೇಶಾತ್ ತತ್ತ್ವಾನಾಂ ಪುರುಷರ್ಷಭ ।
ಪೌರ್ವಾಪರ್ಯಪ್ರಸಂಖ್ಯಾನಂ ಯಥಾ ವಕ್ತುರ್ವಿವಕ್ಷಿತಮ್ ॥ ೭ ॥

**ಉದ್ಧವನು ಕೇಳಿದನು** – ಸ್ವಾಮಿ! ವಿಶ್ವೇಶ್ವರಾ! ಋಷಿಗಳು ತತ್ತ್ವಗಳ ಸಂಖ್ಯೆಯನ್ನು ಎಷ್ಟು ತಿಳಿಸಿರುವರು? ನೀನಾದರೋ ಈಗ (ಹತ್ತೊಂಭತ್ತನೆಯ ಅಧ್ಯಾಯದಲ್ಲಿ) ಒಂಭತ್ತು, ಹನ್ನೊಂದು, ಐದು ಮತ್ತು ಮೂರು ಅರ್ಥಾತ್ – ಒಟ್ಟಿಗೆ ಇಪ್ಪತ್ತೆಂಟು ತತ್ತ್ವಗಳನ್ನು ಎಣಿಸಿರುವೆ. ಇದಾದರೋ ನಾನು ಕೇಳಿಯೇ ಇದ್ದೇನೆ. ಆದರೆ ಕೆಲವರು ಇಪ್ಪತ್ತಾರು ತತ್ತ್ವಗಳನ್ನು ಹೇಳುತ್ತಾರೆ; ಕೆಲವರು ಇಪ್ಪತ್ತೈದು; ಕೆಲವರು ಏಳು, ಒಂಭತ್ತು ಅಥವಾ ಆರು ಸ್ವೀಕರಿಸುತ್ತಾರೆ. ಕೆಲವರು ನಾಲ್ಕೆಂದು ಹೇಳಿದರೆ ಕೆಲವರು ಹನ್ನೊಂದು. ॥೧-೨॥ ಹೀಗೆಯೇ ಕೆಲ-ಕೆಲ ಋಷಿ-ಮುನಿಗಳ ಮತದಲ್ಲಿ ಅವುಗಳ ಸಂಖ್ಯೆ ಹದಿನೇಳು ಇದೆ, ಕೆಲವರು ಹದಿನಾರು, ಕೆಲವರು ಹದಿಮೂರು ಎಂದು ಹೇಳುತ್ತಾರೆ. ಸನಾತನ ಶ್ರೀಕೃಷ್ಣಾ! ಋಷಿ-ಮುನಿಗಳು ಇಷ್ಟು ಭಿನ್ನವಾದ ಸಂಖ್ಯೆಯನ್ನು ಯಾವ ಅಭಿಪ್ರಾಯದಿಂದ ತಿಳಿಸುತ್ತಾರೆ? ನೀನು ದಯವಿಟ್ಟು ನನಗೆ ತಿಳಿಸುವವನಾಗು. ॥ ೩ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** – ಉದ್ಧವನೇ! ವೇದಜ್ಞ ಬ್ರಾಹ್ಮಣರು ಈ ವಿಷಯದಲ್ಲಿ ಹೇಳಿದುದೆಲ್ಲವೂ ಸರಿಯಾಗಿಯೇ ಇದೆ. ಏಕೆಂದರೆ, ಎಲ್ಲ ತತ್ತ್ವಗಳು ಎಲ್ಲದರಲ್ಲಿ ಅಂತರ್ಭೂತವಾಗಿವೆ. ನನ್ನ ಮಾಯೆಯನ್ನು ಸ್ವೀಕರಿಸಿಕೊಂಡು ಏನು ಹೇಳುವುದು ಅಸಂಭವವಿದೆ? ॥ ೪ ॥ 'ನೀನು ಹೇಳಿರುವುದು ಸರಿಯಲ್ಲ, ನಾನು ಹೇಳುತ್ತಿರುವುದೇ ಯಥಾರ್ಥವಾಗಿದೆ' – ಈ ಪ್ರಕಾರ ಜಗತ್ತಿನ ಕಾರಣದ ಸಂಬಂಧದಲ್ಲಿ ವಿವಾದ ಏಕೆ ಆಗುತ್ತದೆ ಎಂದರೆ – ನನ್ನ ಶಕ್ತಿಗಳು ಸತ್ತ್ವ, ರಜ ಮುಂತಾದ ಗುಣಗಳು ಮತ್ತು ಅವುಗಳ ವೃತ್ತಿಗಳ ರಹಸ್ಯವನ್ನು ಜನರು ತಿಳಿಯುವುದಿಲ್ಲ. ಅದಕ್ಕಾಗಿ ಅವರು ತಮ್ಮ-ತಮ್ಮ ಭಾವಕ್ಕನುಸಾರ ವಾದ-ವಿವಾದ ಮಾಡುತ್ತಾ ಇರುತ್ತಾರೆ. ॥ ೫॥ ಸತ್ತ್ವಾದಿ ಗುಣಗಳ ಕ್ಷೋಭದಿಂದಲೇ ಈ ವಿವಿಧ ಕಲ್ಪನಾರೂಪೀ ಪ್ರಪಂಚವು – ಯಾವ ವಸ್ತು ಇಲ್ಲದೆ ಕೇವಲ ನಾಮಮಾತ್ರವಿದೆಯೋ, ಅದು ಎದ್ದು ನಿಂತಿದೆ. ಇದೇ ವಾದ-ವಿವಾದ ಮಾಡುವವರ ವಿವಾದದ ವಿಷಯವಾಗಿದೆ. ಇಂದ್ರಿಯಗಳು ತನ್ನ ವಶವಾದಾಗ, ಚಿತ್ತವು ಶಾಂತವಾದಾಗ ಅವರ ಭೇದಬುದ್ಧಿಯೂ ದೂರಾಗುತ್ತದೆ ಹಾಗೂ ವಿವಾದವೂ ಮುಗಿದು ಹೋಗುತ್ತದೆ. ॥ ೬ ॥ ಪುರುಷಶ್ರೇಷ್ಠನೇ! ತತ್ತ್ವಗಳು ಒಂದು ಮತ್ತೊಂದರಲ್ಲಿ ಅನುಪ್ರವೇಶವಾಗಿವೆ. ಅದಕ್ಕಾಗಿ ಪ್ರವಚನಕಾರನು ತಿಳಿಸಲು ಬಯಸುವ ಸಂಖ್ಯೆಗನುಸಾರವಾಗಿ ಕಾರಣಗಳನ್ನು ಕಾರ್ಯದಲ್ಲಿ ಅಥವಾ ಕಾರ್ಯವನ್ನು ಕಾರಣಗಳಲ್ಲಿ ಬೆರೆಸಿ ತಾನು ಬಯಸಿದ ಸಂಖ್ಯೆಯನ್ನು ಸಿದ್ಧಗೊಳಿಸಿ ಕೊಳ್ಳುತ್ತಾನೆ. ॥ ೭ ॥

ಏಕಸ್ಮಿನ್ನಪಿ ದೃಶ್ಯಂತೇ ಪ್ರವಿಷ್ಟಾನೀತರಾಣಿ ಚ ।
ಪೂರ್ವಸ್ಮಿನ್ ವಾಪರಸ್ಮಿನ್ ವಾ ತತ್ತ್ವೇ ತತ್ತ್ವಾನಿ ಸರ್ವಶಃ ॥ ೮ ॥

ಒಂದೇ ಕಾರಣರೂಪೀ ತತ್ತ್ವದಲ್ಲಿ ಅಥವಾ ಕಾರ್ಯರೂಪೀ ತತ್ತ್ವದಲ್ಲಿ ಪೂರ್ಣವಾಗಿ ಬೇರೆ ತತ್ತ್ವವು ಬೆರೆತಂತೆ ಕಾಣುತ್ತದೆ. ॥ ೮ ॥ ಇವನ್ನು ಎಣಿಸಲು ಬಯಸುವವರು ಯಾವ ಕಾರ್ಯವನ್ನು ಯಾವ ಕಾರಣದಲ್ಲಿ ಅಥವಾ ಯಾವ ಕಾರಣವನ್ನು ಯಾವ ಕಾರ್ಯದಲ್ಲಿ ಅಂತರ್ಭೂತಗೈದು ತತ್ತ್ವಗಳ ಎಷ್ಟು ಸಂಖ್ಯೆ ಸ್ವೀಕರಿಸಲಾಗಿದೆಯೋ ಅವುಗಳ ಪ್ರತಿಪಾದನೆ ಯುಕ್ತಿಸಂಗತವಾದ ಕಾರಣ ಅವರು ಹೇಳುವುದೆಲ್ಲವನ್ನು ಸ್ವೀಕರಿಸುತ್ತಾರೆ. ಯುಕ್ತಿಯಿಂದ ಎಲ್ಲ ಮಾತುಗಳು ಸಿದ್ಧವಾಗುತ್ತವೆ. ಆದ್ದರಿಂದ ನಿಜವಾಗಿವೆ. ॥ ೯ ॥

ಪೌರ್ವಾಪರ್ಯಮತೋಽಮೀಷಾಂ ಪ್ರಸಂಖ್ಯಾನಮಭೀಪ್ಸತಾಮ್ ।
ಯಥಾ ವಿವಿಕ್ತಂ ಯದ್ವಕ್ತ್ರಂ ಗೃಹ್ಣೀಮೋ ಯುಕ್ತಿಸಂಭವಾತ್ ॥ ೯ ॥

ಉದ್ಧವನೇ! ಇಪ್ಪತ್ತಾರು ಸಂಖ್ಯೆಯನ್ನು ಸ್ವೀಕರಿಸಿದ ಜನರು ಹೀಗೆ ಹೇಳುತ್ತಾರೆ – ಜೀವಿಯು ಅನಾದಿಕಾಲದಿಂದ ಅವಿದ್ಯೆಯಿಂದ ಗ್ರಸ್ತನಾಗಿದ್ದಾನೆ. ಅವನು ಸ್ವಯಂ ತನ್ನನ್ನು ತಿಳಿಯಲಾರನು. ಅವನಿಗೆ ಆತ್ಮಜ್ಞಾನ ಮಾಡಿಸಲು ಬೇರೆ ಯಾರಾದರೂ ಸರ್ವಜ್ಞನ ಆವಶ್ಯಕತೆ ಇದೆ. (ಅದಕ್ಕಾಗಿ ಪ್ರಕೃತಿಯ ಕಾರ್ಯ ಕಾರಣರೂಪೀ ಇಪ್ಪತ್ತನಾಲ್ಕು ತತ್ತ್ವ, ಇಪ್ಪತ್ತೈದನೆಯ ಪುರುಷ ಮತ್ತು ಇಪ್ಪತ್ತಾರನೆಯ ಈಶ್ವರ – ಹೀಗೆ ಒಟ್ಟಿಗೆ ಇಪ್ಪತ್ತಾರು ತತ್ತ್ವಗಳನ್ನು ಸ್ವೀಕರಿಸಬೇಕು.) ॥ ೧೦ ॥ ಇಪ್ಪತ್ತೈದು ತತ್ತ್ವಗಳನ್ನು ಒಪ್ಪುವವರು ಹೇಳುತ್ತಾರೆ – ಈ ಶರೀರದಲ್ಲಿ ಜೀವ ಮತ್ತು ಈಶ್ವರನಲ್ಲಿ ಅಣುಮಾತ್ರವೂ ಭೇದವಿಲ್ಲ, ಆದ್ದರಿಂದ ಅವುಗಳಲ್ಲಿ ಭೇದದ ಕಲ್ಪನೆ ವ್ಯರ್ಥವಾಗಿದೆ. ಉಳಿಯಿತು ಜ್ಞಾನದ ಮಾತು, ಆ ಜ್ಞಾನ ಪ್ರಕೃತಿಯ ಗುಣವಾಗಿದೆ. (ಆದ್ದರಿಂದ ಅವರು ಜ್ಞಾನವನ್ನು ಬೇರೆಯಾಗಿ ಸ್ವೀಕರಿಸುವುದಿಲ್ಲ, ಈ ಪ್ರಕಾರ ೨೪ ಜಡ ತತ್ತ್ವಗಳು ಮತ್ತು ಒಂದು ಚೇತನ ಪುರುಷ ಸೇರಿ ೨೫ ತತ್ತ್ವಗಳಾದವು.)॥ ೧೧ ॥ ಮೂರೂ ಗುಣಗಳ ಸಾಮ್ಯಾವಸ್ಥೆಯೇ ಪ್ರಕೃತಿಯ ಸ್ವರೂಪವಾಗಿದೆ. ಅದಕ್ಕಾಗಿ ಸತ್ತ್ವ, ರಜ ಮುಂತಾದ ಗುಣಗಳು ಆತ್ಮನದಲ್ಲ, ಪ್ರಕೃತಿಯದ್ದೇ ಆಗಿವೆ. ಇವುಗಳ ಮೂಲಕ ಜಗತ್ತಿನ ಸ್ಥಿತಿ, ಉತ್ಪತ್ತಿ, ಪ್ರಳಯ ಆಗುತ್ತಾ ಇರುತ್ತವೆ. ಅದಕ್ಕಾಗಿ ಜ್ಞಾನವು ಆತ್ಮನ ಗುಣವಲ್ಲ, ಪ್ರಕೃತಿಯದೇ ಗುಣವೆಂದು ಸಿದ್ಧವಾಗುತ್ತದೆ. ॥ ೧೨ ॥ ಈ ಪ್ರಸಂಗದಲ್ಲಿ ಸತ್ತ್ವಗುಣವೇ ಜ್ಞಾನವಾಗಿದೆ, ರಜೋಗುಣ ಕರ್ಮವಾಗಿದೆ, ತಮೋಗುಣವೇ ಅಜ್ಞಾನವೆಂದು ಹೇಳಲಾಗುತ್ತದೆ. ಗುಣಗಳಲ್ಲಿ ಕ್ಷೋಭೆಯನ್ನುಂಟುಮಾಡುವ ಈಶ್ವರನೇ ಕಾಲನಾಗಿದ್ದಾನೆ ಮತ್ತು ಸೂತ್ರ ಅರ್ಥಾತ್ ಮಹತ್ತತ್ತ್ವವೇ ಸ್ವಭಾವವಾಗಿದೆ. (ಅದಕ್ಕಾಗಿ ೨೫ ಮತ್ತು ೨೬ ತತ್ತ್ವಗಳ ಎರಡೂ ಸಂಖ್ಯೆಗಳು ಯುಕ್ತಿಸಂಗತವಾಗಿವೆ.) ॥ ೧೩ ॥

ಅನಾದ್ಯವಿದ್ಯಾಯುಕ್ತಸ್ಯ ಪುರುಷಸ್ಯಾತ್ಮವೇದನಮ್ ।
ಸ್ವತೋ ನ ಸಂಭವಾದನ್ಯಸ್ತತ್ತ್ವಜ್ಞೋ ಜ್ಞಾನದೋ ಭವೇತ್ ॥ ೧೦ ॥

ಪುರುಷೇಶ್ವರಯೋರತ್ರ ನ ವೈಲಕ್ಷಣ್ಯಮಣ್ವಪಿ ।
ತದನ್ಯಕಲ್ಪನಾಪಾರ್ಥಾ ಜ್ಞಾನಂ ಚ ಪ್ರಕೃತೇರ್ಗುಣಃ ॥ ೧೧ ॥

ಪ್ರಕೃತಿರ್ಗುಣಸಾಮ್ಯಂ ವೈ ಪ್ರಕೃತೇರ್ನಾತ್ಮನೋ ಗುಣಾಃ ।
ಸತ್ತ್ವಂ ರಜಸ್ತಮ ಇತಿ ಸ್ಥಿತ್ಯುತ್ಪತ್ತ್ಯಂತಹೇತವಃ ॥ ೧೨ ॥

ಸತ್ತ್ವಂ ಜ್ಞಾನಂ ರಜಃ ಕರ್ಮ ತಮೋಽಜ್ಞಾನಮಿಹೋಚ್ಯತೇ ।
ಗುಣವ್ಯತಿಕರಃ ಕಾಲಃ ಸ್ವಭಾವಃ ಸೂತ್ರಮೇವ ಚ ॥ ೧೩ ॥

ಪುರುಷಃ ಪ್ರಕೃತಿರ್ವ್ಯಕ್ತಮಹಂಕಾರೋ ನಭೋಽನಿಲಃ ।
ಜ್ಯೋತಿರಾಪಃ ಕ್ಷಿತಿರಿತಿ ತತ್ತ್ವಾನ್ಯುಕ್ತಾನಿ ಮೇ ನವ ॥ ೧೪ ॥

ಉದ್ಧವನೇ! ಪುರುಷ, ಪ್ರಕೃತಿ, ಮಹತ್ತತ್ತ್ವ, ಅಹಂಕಾರ, ಆಕಾಶ, ವಾಯು, ತೇಜ, ಜಲ, ಪೃಥ್ವಿ ಈ ಒಂಭತ್ತು ತತ್ತ್ವಗಳನ್ನು ನಾನು ಮೊದಲೇ ಎಣಿಸಿದ್ದೆ. ಶ್ರೋತ್ರ, ತ್ವಚಾ, ಚಕ್ಷು, ನಾಸಿಕಾ, ರಸನಾ ಈ ಐದು ಜ್ಞಾನೇಂದ್ರಿಯಗಳು, ವಾಕ್, ಪಾಣಿ, ಪಾದ, ಪಾಯು, ಉಪಸ್ಥ ಈ ಐದು ಕರ್ಮೇಂದ್ರಿಯಗಳು. ಮನಸ್ಸು ಇದು ಜ್ಞಾನೇಂದ್ರಿಯ, ಕರ್ಮೇಂದ್ರಿಯ ಎರಡೂ ಆಗಿದೆ. ಈ ಒಟ್ಟಿಗೆ ಹನ್ನೊಂದು ಇಂದ್ರಿಯಗಳು ಹಾಗೂ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಇವು ಜ್ಞಾನೇಂದ್ರಿಯಗಳ ವಿಷಯಗಳು, ಈ ಪ್ರಕಾರ

ಶ್ರೋತ್ರಂ ತ್ವಗ್ದರ್ಶನಂ ಘ್ರಾಣೋ ಜಿಹ್ವೇತಿ ಜ್ಞಾನಶಕ್ತಯಃ ।
ವಾಕ್ಪಾಣ್ಯುಪಸ್ಥಪಾಯ್ವಂಘ್ರಿಃ ಕರ್ಮಾಣ್ಯಂಗೋಭಯಂ ಮನಃ ॥ ೧೫ ॥

ಶಬ್ದಃ ಸ್ಪರ್ಶೋ ರಸೋ ಗಂಧೋ ರೂಪಂ ಚೇತ್ಯರ್ಥಜಾತಯಃ ।
ಗತ್ಯುಕ್ತ್ಯುತ್ಸರ್ಗಶಿಲ್ಪಾನಿ ಕರ್ಮಾಯತನಸಿದ್ಧಯಃ ॥ ೧೬ ॥

ಸರ್ಗಾದೌ ಪ್ರಕೃತಿರ್ಹ್ಯಸ್ಯ ಕಾರ್ಯಕಾರಣರೂಪಿಣೀ ।
ಸತ್ತ್ವಾದಿಭಿರ್ಗುಣೈರ್ಧತ್ತೇ ಪುರುಷೋಽವ್ಯಕ್ತ ಈಕ್ಷತೇ ॥ ೧೭ ॥

ವ್ಯಕ್ತಾದಯೋ ವಿಕುರ್ವಾಣಾ ಧಾತವಃ ಪುರುಷೇಕ್ಷಯಾ ।
ಲಬ್ಧವೀರ್ಯಾಃ ಸೃಜಂತ್ಯಂಡಂ ಸಂಹತಾಃ ಪ್ರಕೃತೇರ್ಬಲಾತ್ ॥ ೧೮ ॥

ಸಪ್ತೈವ ಧಾತವ ಇತಿ ತತ್ರಾರ್ಥಾಃ ಪಂಚ ಖಾದಯಃ ।
ಜ್ಞಾನಮಾತ್ಮೋಭಯಾಧಾರಸ್ತತೋ ದೇಹೇಂದ್ರಿಯಾಸವಃ ॥ ೧೯ ॥

ಷಡಿತ್ಯತ್ರಾಪಿ ಭೂತಾನಿ ಪಂಚ ಷಷ್ಠಃ ಪರಃ ಪುಮಾನ್ ।
ತೈರ್ಯುಕ್ತ ಆತ್ಮಸಂಭೂತೈಃ ಸೃಷ್ಟ್ವೇದಂ ಸಮುಪಾವಿಶತ್ ॥ ೨೦ ॥

ಚತ್ವಾರ್ಯೇವೇತಿ ತತ್ರಾಪಿ ತೇಜ ಆಪೋಽನ್ನಮಾತ್ಮನಃ ।
ಜಾತಾನಿ ತೈರಿದಂ ಜಾತಂ ಜನ್ಮಾವಯವಿನಃ ಖಲು ॥ ೨೧ ॥

ಸಂಖ್ಯಾನೇ ಸಪ್ತದಶಕೇ ಭೂತಮಾತ್ರೇಂದ್ರಿಯಾಣಿ ಚ ।
ಪಂಚ ಪಂಚೈಕಮನಸಾ ಆತ್ಮಾ ಸಪ್ತದಶಃ ಸ್ಮೃತಃ ॥ ೨೨ ॥

ಮೂರು, ಒಂಭತ್ತು, ಹನ್ನೊಂದು, ಐದು ಎಲ್ಲ ಸೇರಿ ಇಪ್ಪತ್ತೆಂಟು ತತ್ತ್ವಗಳಾಗುತ್ತವೆ. ಕರ್ಮೇಂದ್ರಿಯಗಳ ಮೂಲಕ ನಡೆಯುವ ಕರ್ಮ – ನಡೆಯುವುದು, ಮಾತನಾಡುವುದು, ಮಲ-ಮೂತ್ರ ತ್ಯಜಿಸುವುದು, ಕೆಲಸಮಾಡುವುದು ಇವುಗಳಿಂದ ತತ್ತ್ವದ ಸಂಖ್ಯೆ ಬೆಳೆಯುವುದಿಲ್ಲ. ಇವನ್ನು ಕರ್ಮೇಂದ್ರಿಯ ಸ್ವರೂಪವೆಂದೇ ತಿಳಿಯಬೇಕು. ॥ ೧೪-೧೬ ॥ ಸೃಷ್ಟಿಯ ಪ್ರಾರಂಭದಲ್ಲಿ ಕಾರ್ಯ (ಹನ್ನೊಂದು ಇಂದ್ರಿಯ ಮತ್ತು ಪಂಚಭೂತಗಳು) ಮತ್ತು ಕಾರಣ (ಮಹತ್ತತ್ತ್ವಾದಿ)ದ ರೂಪದಲ್ಲಿ ಪ್ರಕೃತಿಯೇ ಇರುತ್ತದೆ. ಅದೇ ಪ್ರಕೃತಿಯು ಸತ್ತ್ವಗುಣ, ರಜೋಗುಣ, ತಮೋಗುಣಗಳ ಸಹಾಯದಿಂದ ಜಗತ್ತಿನ ಉತ್ಪತ್ತಿ, ಸ್ಥಿತಿ, ಸಂಹಾರ ಸಂಬಂಧೀ ಅವಸ್ಥೆಗಳನ್ನು ಧರಿಸುತ್ತದೆ. ಅವ್ಯಕ್ತ ಪುರುಷನಾದರೋ ಪ್ರಕೃತಿ ಹಾಗೂ ಅದರ ಅವಸ್ಥೆಗಳ ಕೇವಲ ಸಾಕ್ಷಿಮಾತ್ರ ಆಗಿರುತ್ತಾನೆ. ॥ ೧೭ ॥ ಮಹತ್ತತ್ತ್ವಾದಿ ಪ್ರಕೃತಿಯ ಎಷ್ಟು ವಿಕಾರಗಳು ಉಂಟಾಗುತ್ತವೋ ಅವು ಪುರುಷನ ವೀಕ್ಷಣದಿಂದ ಶಕ್ತಿಯನ್ನು ಪಡೆದುಕೊಂಡು ಪರಸ್ಪರ ಬೆರೆತುಹೋಗುತ್ತವೆ. ಬಳಿಕ ಪ್ರಕೃತಿಯ ಆಶ್ರಯ ಪಡೆದು ಅದರ ಬಲದಿಂದಲೇ ಬ್ರಹ್ಮಾಂಡದ ಸೃಷ್ಟಿಯಾಗುತ್ತದೆ. ಅರ್ಥಾತ್ – ಈಶ್ವರನ ವೀಕ್ಷಣದಿಂದಲೇ ಪ್ರಕೃತಿಯು ಎಲ್ಲ ಕಾರ್ಯಗಳನ್ನು ಮಾಡುತ್ತದೆ. ॥ ೧೮ ॥

ಎಲೈ ಉದ್ಧವನೇ ! ತತ್ತ್ವಗಳ ಸಂಖ್ಯೆ ಏಳು ಎಂದು ಸ್ವೀಕರಿಸುವವರ ವಿಚಾರದಲ್ಲಿ ಆಕಾಶ, ವಾಯು, ತೇಜ, ಜಲ, ಪೃಥ್ವಿ ಈ ಐದು ಭೂತಗಳು, ಆರನೇಯದು ಜೀವ, ಏಳನೆಯದು ಪರಮಾತ್ಮಾ ಅದು ಸಾಕ್ಷೀ ಜೀವ ಮತ್ತು ಸಾಕ್ಷ್ಯ ಜಗತ್ತು ಎರಡರ ಅಧಿಷ್ಠಾನವಾಗಿದೆ. ಇವೇ ತತ್ತ್ವಗಳಾಗಿವೆ. ದೇಹ, ಇಂದ್ರಿಯ ಹಾಗೂ ಪ್ರಾಣಾದಿಗಳ ಉತ್ಪತ್ತಿಯಾದರೋ ಪಂಚ-ಭೂತಗಳಿಂದಲೇ ಆಗಿದೆ. (ಅದಕ್ಕಾಗಿ ಅವರು ಇವನ್ನು ಬೇರೆಯಾಗಿ ಎಣಿಸುವುದಿಲ್ಲ.) ॥ ೧೯ ॥ ಕೇವಲ ಆರು ತತ್ತ್ವಗಳನ್ನು ಸ್ವೀಕರಿಸುವವರು ಹೇಳುತ್ತಾರೆ – ಐದು ಭೂತಗಳು ಮತ್ತು ಆರನೆಯ ಪರಮಪುರುಷ ಪರಮಾತ್ಮನು. ಆ ಪರಮಾತ್ಮನು ತಾನು ರಚಿಸಿದ ಪಂಚಭೂತಗಳಿಂದ ಕೂಡಿಕೊಂಡು ದೇಹಾದಿಗಳನ್ನು ಸೃಷ್ಟಿಸುತ್ತಾನೆ ಹಾಗೂ ಅದರಲ್ಲಿ ಜೀವರೂಪದಿಂದ ಪ್ರವೇಶಿಸುತ್ತಾನೆ. (ಈ ಮತದನುಸಾರ ಜೀವಿಯು ಪರಮಾತ್ಮನಲ್ಲಿ, ಶರೀರಾದಿಗಳು ಪಂಚಭೂತಗಳಲ್ಲಿ ಸಮಾವೇಶವಾಗುತ್ತದೆ.) ॥ ೨೦ ॥ ಕಾರಣದ ರೂಪದಲ್ಲಿ ನಾಲ್ಕೇ ತತ್ತ್ವಗಳನ್ನೂ ಸ್ವೀಕರಿಸುವ ಜನರು ಹೇಳುತ್ತಾರೆ – ಆತ್ಮನಿಂದ ತೇಜ, ಜಲ ಮತ್ತು ಪೃಥ್ವಿಯ ಉತ್ಪತ್ತಿಯಾಯಿತು. ಜಗತ್ತಿನಲ್ಲಿರುವ ಎಲ್ಲ ಪದಾರ್ಥಗಳು ಇವುಗಳಿಂದಲೇ ಉತ್ಪನ್ನವಾಗುತ್ತವೆ. ಅವರು ಎಲ್ಲ ಕಾರ್ಯಗಳನ್ನು ಇವುಗಳಲ್ಲೇ ಸಮಾವೇಶ ಮಾಡಿಕೊಳ್ಳುವರು. ॥ ೨೧ ॥ ತತ್ತ್ವಗಳ ಸಂಖ್ಯೆ ಹದಿನೇಳು ಎಂದು ಹೇಳುವವರು ಈ ಪ್ರಕಾರ ಎಣಿಸುತ್ತಾರೆ – ಐದು ಭೂತಗಳು, ಐದು ತನ್ಮಾತ್ರೆಗಳು, ಐದು ಜ್ಞಾನೇಂದ್ರಿಯಗಳು, ಒಂದು ಮನಸ್ಸು, ಒಂದು ಆತ್ಮಾ. ॥ ೨೨ ॥

ತದ್ವತ್ ಷೋಡಶಸಂಖ್ಯಾನೇ ಆತ್ಮೈವ ಮನ ಉಚ್ಯತೇ ।
ಭೂತೇಂದ್ರಿಯಾಣಿ ಪಂಚೈವ ಮನ ಆತ್ಮಾ ತ್ರಯೋದಶ ॥ ೨೩ ॥

ಏಕಾದಶತ್ವ ಆತ್ಮಾಸೌ ಮಹಾಭೂತೇಂದ್ರಿಯಾಣಿ ಚ ।
ಅಷ್ಟೌ ಪ್ರಕೃತಯಶ್ಚೈವ ಪುರುಷಶ್ಚ ನವೇತ್ಯಥ ॥ ೨೪ ॥

ಇತಿ ನಾನಾಪ್ರಸಂಖ್ಯಾನಂ ತತ್ತ್ವಾನಾಮೃಷಿಭಿಃ ಕೃತಮ್ ।
ಸರ್ವಂ ನ್ಯಾಯ್ಯಂ ಯುಕ್ತಿಮತ್ತ್ವಾದ್ವಿದುಷಾಂ ಕಿಮಶೋಭನಮ್ ॥ ೨೫ ॥

ಉದ್ಧವ ಉವಾಚ

ಪ್ರಕೃತಿಃ ಪುರುಷಶ್ಚೋಭೌ ಯದ್ಯಪ್ಯಾತ್ಮವಿಲಕ್ಷಣೌ ।
ಅನ್ಯೋನ್ಯಾಪಾಶ್ರಯಾತ್ ಕೃಷ್ಣ ದೃಶ್ಯತೇ ನ ಭಿದಾ ತಯೋಃ ॥ ೨೬ ॥

ಪ್ರಕೃತೌ ಲಕ್ಷ್ಯತೇ ಹ್ಯಾತ್ಮಾ ಪ್ರಕೃತಿಶ್ಚ ತಥಾಽಽತ್ಮನಿ ।
ಏವಂ ಮೇ ಪುಂಡರೀಕಾಕ್ಷ ಮಹಾಂತಂ ಸಂಶಯಂ ಹೃದಿ ।
ಛೇತ್ತುಮರ್ಹಸಿ ಸರ್ವಜ್ಞ ವಚೋಭಿರ್ನಯನೈಪುಣೈಃ ॥ ೨೭ ॥

ತ್ವತ್ತೋ ಜ್ಞಾನಂ ಹಿ ಜೀವಾನಾಂ ಪ್ರಮೋಷಸ್ತೇಽತ್ರ ಶಕ್ತಿತಃ ।
ತ್ವಮೇವ ಹ್ಯಾತ್ಮಮಾಯಾಯಾ ಗತಿಂ ವೇತ್ಥ ನ ಚಾಪರಃ ॥ ೨೮ ॥

ಶ್ರೀಭಗವಾನುವಾಚ

ಪ್ರಕೃತಿಃ ಪುರುಷಶ್ಚೇತಿ ವಿಕಲ್ಪಃ ಪುರುಷರ್ಷಭ ।
ಏಷ ವೈಕಾರಿಕಃ ಸರ್ಗೋ ಗುಣವ್ಯತಿಕರಾತ್ಮಕಃ ॥ ೨೯ ॥

ಮಮಾಂಗ ಮಾಯಾ ಗುಣಮಯ್ಯನೇಕಧಾ
ವಿಕಲ್ಪಬುದ್ಧೀಶ್ಚ ಗುಣೈರ್ವಿಧತ್ತೇ ।
ವೈಕಾರಿಕಸ್ತ್ರಿವಿಧೋಽಧ್ಯಾತ್ಮಮೇಕ-
ಮಥಾಧಿದೈವಮಧಿಭೂತಮನ್ಯತ್ ॥ ೩೦ ॥

ತತ್ತ್ವಗಳ ಸಂಖ್ಯೆ ಹದಿನಾರು ಎಂದು ಹೇಳುವವರ ಗಣನೆಯೂ ಇದೇ ಪ್ರಕಾರವಾಗಿದೆ. ಆತ್ಮನಲ್ಲೇ ಮನಸ್ಸನ್ನೂ ಸಮಾವೇಶಮಾಡುತ್ತಾರೆ, ಅಂತರ ಇಷ್ಟೇ ಆಗಿದೆ. ಹೀಗೆ ಅವರ ತತ್ತ್ವ ಸಂಖ್ಯೆಯು ಹದಿನಾರೇ ಉಳಿಯುತ್ತದೆ. ಹದಿಮೂರು ತತ್ತ್ವವನ್ನು ಒಪ್ಪಿಕೊಳ್ಳುವವರು ಹೇಳುತ್ತಾರೆ – ಆಕಾಶಾದಿ ಪಂಚಭೂತಗಳು, ಶ್ರೋತ್ರಾದಿ ಐದು ಜ್ಞಾನೇಂದ್ರಿಯಗಳು, ಒಂದು ಮನಸ್ಸು ಒಂದು ಜೀವಾತ್ಮಾ ಮತ್ತು ಪರಮಾತ್ಮಾ – ಹೀಗೆ ಹದಿಮೂರು ತತ್ತ್ವಗಳು. ॥ ೨೩ ॥ ಹನ್ನೊಂದು ತತ್ತ್ವಗಳನ್ನು ಒಪ್ಪುವವರು ಐದು ಭೂತಗಳು, ಐದು ಜ್ಞಾನೇಂದ್ರಿಯಗಳು ಹಾಗೂ ಇವಲ್ಲದೆ ಒಂದು ಆತ್ಮನ ಅಸ್ತಿತ್ವವನ್ನು ಸ್ವೀಕರಿಸಿರುವರು. ಒಂಭತ್ತು ತತ್ತ್ವಗಳನ್ನು ಒಪ್ಪುವವರು ಆಕಾಶಾದಿ ಪಂಚಭೂತಗಳು, ಮನ, ಬುದ್ಧಿ ಅಹಂಕಾರ ಈ ಎಂಟು ಪ್ರಕೃತಿಗಳು ಮತ್ತು ಒಂಭತ್ತನೆಯ ಪುರುಷ ಇವುಗಳನ್ನು ತತ್ತ್ವಗಳೆಂದು ತಿಳಿಯುವರು. ॥ ೨೪ ॥ ಉದ್ಧವನೇ ! ಈ ಪ್ರಕಾರ ಋಷಿ–ಮುನಿಗಳು ಬೇರೆ–ಬೇರೆ ರೀತಿಯಿಂದ ತತ್ತ್ವಗಳನ್ನು ಎಣಿಸಿರುವರು. ಎಲ್ಲರೂ ಹೇಳುವುದೂ ಉಚಿತವೇ ಆಗಿದೆ. ಏಕೆಂದರೆ, ಎಲ್ಲರ ಸಂಖ್ಯೆಯು ಯುಕ್ತಿಯುಕ್ತವೇ ಆಗಿದೆ. ತತ್ತ್ವಜ್ಞಾನಿಗಳಾದ ಜನರಿಗೆ ಯಾವುದೇ ಮತದಲ್ಲಿ ಕೆಟ್ಟದು ಕಾಣುವುದಿಲ್ಲ, ಅವರಿಗಾದರೋ ಎಲ್ಲವೂ ಸರಿಯಾಗಿಯೇ ಇದೆ.॥ ೨೫ ॥

ಉದ್ಧವನು ಕೇಳಿದನು – ಶ್ಯಾಮಸುಂದರಾ ! ಸ್ವರೂಪತಃ ಪ್ರಕೃತಿ ಮತ್ತು ಪುರುಷರಿಬ್ಬರೂ ಒಂದು ಮತ್ತೊಂದರಲ್ಲಿ ಸರ್ವಥಾ ಭಿನ್ನವಾಗಿದ್ದರೂ, ಅವುಗಳ ಭೇದವು ಸಾಧಾರಣವಾಗಿ ತಿಳಿಯದಷ್ಟು ಪರಸ್ಪರ ಸೇರಿಕೊಂಡಿದೆ. ಪ್ರಕೃತಿಯಲ್ಲಿ ಪುರುಷ ಮತ್ತು ಪುರುಷನಲ್ಲಿ ಪ್ರಕೃತಿ ಅಭಿನ್ನದಂತೆ ಕಂಡುಬರುತ್ತದೆ. ಇವುಗಳ ಭಿನ್ನತೆ ಹೇಗೆ ಸ್ಪಷ್ಟವಾದೀತು ? ॥ ೨೬ ॥ ಕಮಲನಯನ ಶ್ರೀಕೃಷ್ಣಾ ! ಹೀಗೆ ನನ್ನ ಹೃದಯದಲ್ಲಿ ಇವುಗಳ ಭಿನ್ನತೆ ಮತ್ತು ಅಭಿನ್ನತೆಯ ಕುರಿತು ಬಹಳ ದೊಡ್ಡ ಸಂದೇಹವಿದೆ. ನೀನಾದರೋ ಸರ್ವಜ್ಞನಾಗಿರುವೆ. ನಿನ್ನ ಯುಕ್ತಿಯುಕ್ತ ವಾಣಿಯಿಂದ ನನ್ನ ಸಂದೇಹವನ್ನೂ ನಿವಾರಿಸುವವನಾಗು. ॥ ೨೭ ॥ ಓ ಭಗವಂತಾ ! ನಿನ್ನ ಕೃಪೆಯಿಂದಲೇ ನಿನ್ನ ವಿದ್ಯಾಶಕ್ತಿಯ ಮೂಲಕ ಜೀವಿಗಳಿಗೆ ಜ್ಞಾನ ಉಂಟಾಗುತ್ತದೆ. ನಿನ್ನದೇ ಅವಿದ್ಯಾಶಕ್ತಿಯಿಂದ ಅವರ ಜ್ಞಾನದ ಲೋಪವಾಗುತ್ತದೆ. ನಿನ್ನ ಆತ್ಮಸ್ವರೂಪಿಣೀ ಮಾಯೆಯ ವಿಚಿತ್ರಗತಿಯನ್ನು ನೀನೇ ತಿಳಿಯುತ್ತಿರುವೆ. ಬೇರೆ ಯಾರೂ ಅರಿಯರು. ಆದ್ದರಿಂದ ನೀನೇ ನನ್ನ ಸಂದೇಹವನ್ನು ಇಲ್ಲವಾಗಿಸಲು ಸಮರ್ಥನಾಗಿರುವೆ. ॥ ೨೮ ॥

ಭಗವಾನ್ ಶ್ರೀಕೃಷ್ಣನು ಹೇಳಿದನು – ಉದ್ಧವನೇ ! ಪ್ರಕೃತಿ ಮತ್ತು ಪುರುಷ ಅರ್ಥಾತ್ ಶರೀರ ಹಾಗೂ ಆತ್ಮಾ – ಇವೆರಡರಲ್ಲಿ ಅತ್ಯಂತ ಭೇದವಿದೆ. ಈ ಸೃಷ್ಟಿಯೂ ವಿಕಾರಗಳಿಂದ ಕೂಡಿದೆ. ಗುಣಗಳ ಕ್ಷೋಭೆಯಿಂದಲೇ ಸೃಷ್ಟಿಯು ಉತ್ಪನ್ನವಾಗುತ್ತದೆ. ॥ ೨೯ ॥ ಪ್ರಿಯ ಮಿತ್ರನೇ ! ನನ್ನ ಮಾಯೆಯು ತ್ರಿಗುಣಾತ್ಮಿಕವಾಗಿದೆ. ಅದೇ ತನ್ನ ಸತ್ತ್ವ, ರಜ ಮುಂತಾದ ಗುಣಗಳಿಂದ ಅನೇಕ ಪ್ರಕಾರದ ಭೇದ ವೃತ್ತಿಗಳನ್ನು ಉಂಟುಮಾಡುತ್ತದೆ. ಇದರ ವಿಸ್ತಾರ ಅಸೀಮವಾಗಿದ್ದರೂ ಕೂಡ ಈ ವಿಕಾರಾತ್ಮಕವಾದ ಸೃಷ್ಟಿಯನ್ನು ಮೂರು ಭಾಗವಾಗಿ ಹಂಚಬಹುದು. ಅಧ್ಯಾತ್ಮ ಅಧಿದೈವ, ಅಧಿಭೂತ – ಇವೇ ಆ ಮೂರು ಭಾಗಗಳಾಗಿವೆ. ॥ ೩೦ ॥

ದೃಗ್ರೂಪಮಾರ್ಕಂ ವಪುರತ್ರ ರಂಧ್ರೇ
ಪರಸ್ಪರಂ ಸಿಧ್ಯತಿ ಯಃ ಸ್ವತಃ ಖೇ ।
ಆತ್ಮಾ ಯದೇಷಾಮಪರೋ ಯ ಆದ್ಯಃ
ಸ್ವಯಾನುಭೂತ್ಯಾಖಿಲಸಿದ್ಧಸಿದ್ಧಿಃ
ಏವಂ ತ್ವಗಾದಿ ಶ್ರವಣಾದಿ ಚಕ್ಷು-
ರ್ಜಿಹ್ವಾದಿ ನಾಸಾದಿ ಚ ಚಿತ್ತಯುಕ್ತಮ್ ॥ ೩೧ ॥

ಯೋಽಸೌ ಗುಣಕ್ಷೋಭಕೃತೋ ವಿಕಾರಃ
ಪ್ರಧಾನಮೂಲಾನ್ಮಹತಃ ಪ್ರಸೂತಃ ।
ಅಹಂ ತ್ರಿವೃನ್ಮೋಹವಿಕಲ್ಪಹೇತು-
ರ್ವೈಕಾರಿಕಸ್ತಾಮಸ ಐಂದ್ರಿಯಶ್ಚ ॥ ೩೨ ॥

ಆತ್ಮಾಪರಿಜ್ಞಾನಮಯೋ ವಿವಾದೋ
ಹ್ಯಸ್ತೀತಿ ನಾಸ್ತೀತಿ ಭಿದಾರ್ಥನಿಷ್ಠಃ ।
ವ್ಯರ್ಥೋಽಪಿ ನೈವೋಪರಮೇತ ಪುಂಸಾಂ
ಮತ್ತಃ ಪರಾವೃತ್ತಧಿಯಾಂ ಸ್ವಲೋಕಾತ್ ॥ ೩೩ ॥

ಉದ್ಧವ ಉವಾಚ

ತ್ವತ್ತಃ ಪರಾವೃತ್ತಧಿಯಃ ಸ್ವಕೃತೈಃ ಕರ್ಮಭಿಃ ಪ್ರಭೋ ।
ಉಚ್ಚಾವಚಾನ್ಯಥಾ ದೇಹಾನ್ ಗೃಹ್ಣಂತಿ ವಿಸೃಜಂತಿ ಚ ॥ ೩೪ ॥

ಉದಾಹರಣೆಗಾಗಿ – ನೇತ್ರೇಂದ್ರಿಯ ಅಧ್ಯಾತ್ಮವಾಗಿದೆ, ಅದರ ವಿಷಯರೂಪವು ಅಧಿಭೂತವಾಗಿದೆ. ನೇತ್ರಗೋಲಕದಲ್ಲಿ ಸ್ಥಿತ ಸೂರ್ಯದೇವತೆಯ ಅಂಶ ಅಧಿದೈವವಾಗಿದೆ. ಇವು ಮೂರೂ ಪರಸ್ಪರ ಒಂದು ಇನ್ನೊಂದರ ಆಶ್ರಯದಿಂದ ಸಿದ್ಧವಾಗುತ್ತವೆ. ಅದಕ್ಕಾಗಿ ಅಧ್ಯಾತ್ಮ, ಅಧಿದೈವ, ಅಧಿಭೂತ ಇವು ಮೂರೂ ಪರಸ್ಪರ ಒಂದು ಮತ್ತೊಂದರಿಂದ ಸಹಾಯ ಬಯಸುತ್ತವೆ. ಆದರೆ ಆಕಾಶದಲ್ಲಿರುವ ಸೂರ್ಯಮಂಡಲ ಇವು ಮೂರರಿಂದಲೂ ಮುಕ್ತವಾಗಿದೆ. ಏಕೆಂದರೆ ಅದು ಸ್ವತಃಸಿದ್ಧವಾಗಿದೆ. ಹೀಗೆಯೇ ಆತ್ಮನು ಮೇಲೆ ಹೇಳಿದ ಮೂರೂ ಭೇದಗಳ ಮೂಲಕಾರಣ, ಅವುಗಳ ಸಾಕ್ಷಿ ಮತ್ತು ಅವುಗಳಿಂದ ಅತೀತನಾಗಿದ್ದಾನೆ. ಅವನೇ ತನ್ನ ಸ್ವಯಂಸಿದ್ಧ ಪ್ರಕಾಶದಿಂದ ಸಮಸ್ತ ಪದಾರ್ಥಗಳನ್ನು ಸಿದ್ಧಪಡಿಸುತ್ತಾನೆ. ಅವನಿಂದಲೇ ಎಲ್ಲರ ಪ್ರಕಾಶವಾಗುತ್ತದೆ. ಅವನ ಅಸ್ತಿತ್ವದಿಂದಲೇ ಬೇರೆಯದಕ್ಕೆ ಅಸ್ತಿತ್ವವಿದೆ. ಹೇಗೆ ಚಕ್ಷುವಿನ ಮೂರು ಭೇದಗಳು ತಿಳಿಸಲಾಗಿದೆಯೋ, ಹಾಗೆಯೇ ತ್ವಚಾ, ಶ್ರೋತ್ರ, ಜಿಹ್ವೆ, ನಾಸಿಕಾ ಮತ್ತು ಚಿತ್ತ ಇವುಗಳದ್ದೂ ಮೂರು-ಮೂರು ಭೇದಗಳಿವೆ. * ॥ ೩೧ ॥ ಪ್ರಕೃತಿಯಿಂದ ಮಹತ್ತತ್ತ್ವ ಉಂಟಾಗುತ್ತದೆ ಮತ್ತು ಮಹತ್ತತ್ತ್ವದಿಂದ ಅಹಂಕಾರ ಉಂಟಾಗುತ್ತದೆ. ಈ ಪ್ರಕಾರ ಈ ಅಹಂಕಾರವು ಗುಣಗಳ ಕ್ಷೋಭದಿಂದ ಉಂಟಾಗಿದ್ದ ಪ್ರಕೃತಿಯ ಒಂದು ವಿಕಾರವಾಗಿದೆ. ಅಹಂಕಾರದ ಮೂರು ಭೇದಗಳಿವೆ – (೧) ವೈಕಾರಿಕ-ಸತ್ತ್ವಗುಣ ವಿಶಿಷ್ಟ ಮನ ಹಾಗೂ ಇಂದ್ರಿಯಗಳ ದೇವತೆಗಳು, (೨) ತೈಜಸ ಹತ್ತು ಇಂದ್ರಿಯಗಳು, (೩) ತಾಮಸ-ಪಂಚಮಹಾಭೂತ ಹಾಗೂ ಐದು ಅವುಗಳ ವಿಷಯಗಳು. ಹೀಗೆ ಈ ಅಹಂಕಾರವೇ ಅಜ್ಞಾನ ಮತ್ತು ಸೃಷ್ಟಿಯ ವಿವಿಧತೆಯ ಮೂಲಕಾರಣವಾಗಿದೆ. ॥ ೩೨ ॥ ಆತ್ಮನು ಜ್ಞಾನಸ್ವರೂಪನಾಗಿದ್ದಾನೆ ; ಅವನಿಗೆ ಈ ಪದಾರ್ಥಗಳೊಂದಿಗೆ ಯಾವ ಸಂಬಂಧವೂ ಇಲ್ಲ. ಅಸ್ತಿ (ಇದೆ) ನಾಸ್ತಿ (ಇಲ್ಲ) ಸುಗುಣ, ನಿರ್ಗುಣ, ಭಾವ-ಅಭಾವ, ಸತ್ಯ-ಮಿಥ್ಯಾ ಇವೆಲ್ಲವೂ ಭೇದ ದೃಷ್ಟಿಯೇ ಆಗಿದೆ. ಇದು ಸರ್ವಥಾ ವ್ಯರ್ಥವಾಗಿದೆ. ಜ್ಞಾನಸ್ವರೂಪೀ ಪರಮಾತ್ಮನಾದ ನನ್ನಿಂದ ವಿಮುಖರಾದ ಜನರು ಈ ವಿವಾದದಿಂದ ಮುಕ್ತರಾಗಲಾರರು. ॥ ೩೩ ॥

**ಉದ್ಧವನು ಕೇಳಿದನು** – ಭಗವಂತಾ ! ನಿನ್ನಿಂದ ವಿಮುಖರಾದ ಜೀವಿಗಳು ತಾವು ಮಾಡಿದ ಪಾಪ-ಪುಣ್ಯಗಳ ಫಲವಾಗಿ ಉಚ್ಚ-ನೀಚ ಯೋನಿಗಳಲ್ಲಿ ಹುಟ್ಟುತ್ತಾ-ಸಾಯುತ್ತಾ ಇರುತ್ತಾರೆ. ಈಗ ಪ್ರಶ್ನೆಯೆಂದರೆ – ವ್ಯಾಪಕ ಆತ್ಮನು ಒಂದು ಶರೀರದಿಂದ ಇನ್ನೊಂದು ಶರೀರಕ್ಕೆ ಹೋಗುವುದು, ಅಕರ್ತನು ಕರ್ಮ ಮಾಡುವುದು, ನಿತ್ಯವಸ್ತುವಿಗೆ ಜನ್ಮ-ಮರಣವಾಗುವುದು, ಇದು ಹೇಗೆ ಸಂಭವಿಸುತ್ತದೆ ? ॥ ೩೪ ॥

* ಹೇಗೆಂದರೆ – ತ್ವಚಾ, ಸ್ಪರ್ಶ, ವಾಯು ; ಶ್ರವಣ, ಶಬ್ದ ದಿಕ್ಕುಗಳು ; ಜಿಹ್ವೆ, ರಸ, ವರುಣ ; ನಾಸಿಕಾ, ಗಂಧ, ಅಶ್ವಿನೀಕುಮಾರರು ; ಚಿತ್ತ , ಚಿತ್ತದ ವಿಷಯ, ವಾಸುದೇವ ; ಮನಸ್ಸು, ಮನಸ್ಸಿನ ವಿಷಯ, ಚಂದ್ರ ; ಅಹಂಕಾರ, ಅಹಂಕಾರದ ವಿಷಯ, ರುದ್ರ ; ಬುದ್ಧಿ ತಿಳಿಯುವ ವಿಷಯ, ಬ್ರಹ್ಮಾ ; ಇವೆಲ್ಲ ತ್ರಿವಿಧ ತತ್ತ್ವಗಳಿಂದ ಆತ್ಮನಿಗೆ ಯಾವ ಸಂಬಂಧವೂ ಇಲ್ಲ.

ತನ್ಮಮಾಖ್ಯಾಹಿ ಗೋವಿಂದ ದುರ್ವಿಭಾವ್ಯಮನಾತ್ಮಭಿಃ ।
ನ ಹ್ಯೇತತ್ ಪ್ರಾಯಶೋ ಲೋಕೇ ವಿದ್ವಾಂಸಃ ಸಂತಿ ವಂಚಿತಾಃ
॥ ೩೫ ॥

ಗೋವಿಂದಾ ! ಆತ್ಮಜ್ಞಾನ ರಹಿತರಾದವರು ಈ ವಿಷಯವನ್ನು ಸರಿಯಾಗಿ ಯೋಚಿಸಲಾರರು ಮತ್ತು ಈ ವಿಷಯ ತಿಳಿದ ವಿದ್ವಾಂಸರು ಪ್ರಪಂಚದಲ್ಲಿ ಪ್ರಾಯಶಃ ಸಿಗುವುದಿಲ್ಲ, ಏಕೆಂದರೆ, ಎಲ್ಲ ಜನರು ನಿನ್ನ ಮಾಯೆಯಿಂದ ಭ್ರಾಂತಿಯಲ್ಲಿ ಬಿದ್ದಿರುವರು. ಆದಕ್ಕಾಗಿ ನೀನೇ ದಯಮಾಡಿ ಈ ರಹಸ್ಯವನ್ನು ನನಗೆ ತಿಳಿಸು. ॥ ೩೫ ॥

ಶ್ರೀಭಗವಾನುವಾಚ

ಮನಃ ಕರ್ಮಮಯಂ ನೃಣಾಮ್-
ಇಂದ್ರಿಯೈಃ ಪಂಚಭಿರ್ಯುತಮ್ ।
ಲೋಕಾಲ್ಲೋಕಂ ಪ್ರಯಾತ್ಯನ್ಯ
ಆತ್ಮಾ ತದನುವರ್ತತೇ ॥ ೩೬ ॥

ಧ್ಯಾಯನ್ಮನೋಽನು ವಿಷಯಾನ್ ದೃಷ್ಟಾನ್ ವಾನುಶ್ರುತಾನಥ ।
ಉದ್ಯತ್ಸೀದತ್ಕರ್ಮತಂತ್ರಂ ಸ್ಮೃತಿಸ್ತದನು ಶಾಮ್ಯತಿ
॥ ೩೭ ॥

ವಿಷಯಾಭಿನಿವೇಶೇನ ನಾತ್ಮಾನಂ ಯತ್ಸ್ಮರೇತ್ ಪುನಃ ।
ಜಂತೋರ್ವೈ ಕಸ್ಯಚಿದ್ಧೇತೋರ್ಮೃತ್ಯುರತ್ಯಂತವಿಸ್ಮೃತಿಃ
॥ ೩೮ ॥

ಜನ್ಮ ತ್ವಾತ್ಮತಯಾ ಪುಂಸಃ ಸರ್ವಭಾವೇನ ಭೂರಿದ ।
ವಿಷಯಸ್ವೀಕೃತಿಂ ಪ್ರಾಹುರ್ಯಥಾ ಸ್ವಪ್ನಮನೋರಥಃ
॥ ೩೯ ॥

ಸ್ವಪ್ನಂ ಮನೋರಥಂ ಚೇತ್ಥಂ ಪ್ರಾಕ್ತನಂ ನ ಸ್ಮರತ್ಯಸೌ ।
ತತ್ರ ಪೂರ್ವಮಿವಾತ್ಮಾನಮಪೂರ್ವಂ ಚಾನುಪಶ್ಯತಿ
॥ ೪೦ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** – ಪ್ರಿಯ ಉದ್ಧವನೇ ! ಮನುಷ್ಯರ ಮನಸ್ಸು ಕರ್ಮ-ಸಂಸ್ಕಾರಗಳ ಪುಂಜವಾಗಿದೆ. ಆ ಸಂಸ್ಕಾರಗಳನುಸಾರ ಭೋಗಗಳನ್ನು ಪಡೆಯಲು ಅದರ ಜೊತೆ ಐದು ಇಂದ್ರಿಯಗಳೂ ತೊಡಗಿವೆ. ಇದರ ಹೆಸರೇ ಲಿಂಗ ಶರೀರ. ಅದೇ ಕರ್ಮಗಳನುಸಾರ ಒಂದು ಶರೀರದಿಂದ ಮತ್ತೊಂದು ಶರೀರದಲ್ಲಿ, ಒಂದು ಲೋಕದಿಂದ ಇನ್ನೊಂದು ಲೋಕಕ್ಕೆ ಹೋಗುತ್ತಾ-ಬರುತ್ತಾ ಇರುತ್ತದೆ. ಆತ್ಮನು ಈ ಲಿಂಗಶರೀರದಿಂದ ಸರ್ವಥಾ ಬೇರೆಯಾಗಿದ್ದಾನೆ. ಆತ್ಮನು ಸರ್ವವ್ಯಾಪಿಯಾಗಿದ್ದಾನೆ. ಆದ್ದರಿಂದ ಅವನ ಗಮನಾಗಮನ ಆಗುವುದಿಲ್ಲ, ಆದರೆ ಅವನು ತನ್ನನ್ನು ಲಿಂಗಶರೀರವೆಂದೇ ತಿಳಿದಾಗ, ಅದರಲ್ಲೇ ಅಹಂಕಾರಪಟ್ಟಾಗ, ಅವನೂ ಕೂಡ ಬಂದು-ಹೋದಂತೆ ಕಂಡುಬರತೊಡಗುತ್ತಾನೆ. ॥ ೩೬ ॥ ಮನಸ್ಸು ಕರ್ಮಗಳ ಅಧೀನವಾಗಿದೆ. ಅದು ಈ ಲೋಕ ಅಥವಾ ಪರಲೋಕ ಸಂಬಂಧೀ ವಿಷಯಗಳನ್ನು ಸತತ ಚಿಂತಿಸುತ್ತಾ ಇರುತ್ತದೆ. ಹೊಸ ವಿಷಯ ಬಂದಾಗ ಮೊದಲಿನದನ್ನು ಮರೆಯುತ್ತಾ ಹೋಗುತ್ತದೆ ಹಾಗೂ ಹೊಸದರಲ್ಲಿ ತೊಡಗುತ್ತದೆ. ಹೀಗೆ ಹಿಂದಿನ ವಿಷಯಗಳ ಸ್ಮೃತಿಯೂ ಕೂಡ ಶಾಂತವಾಗುತ್ತಾ ಇರುತ್ತದೆ. ॥ ೩೭ ॥ ಹೀಗೆಯೇ ಹೊಸ-ಹೊಸ ವಿಷಯಗಳಲ್ಲಿ ಆಸಕ್ತಿಯನ್ನಿಡುತ್ತಾ, ಅದರಿಂದ ಹಿಂದಿನದನ್ನು ಮರೆಯುತ್ತಾ, ಹೊಸ-ಹೊಸದರ ಚಿಂತನೆ ನಡೆಯುತ್ತದೆ. ಹೀಗೆಯೇ ಯಾವುದೇ ಕಾರಣದಿಂದ ಮನುಷ್ಯನಿಗೆ ತನ್ನ ಹಿಂದಿನ ಶರೀರದ ಸ್ಮರಣೆ ಏನೂ ಉಳಿಯುವುದಿಲ್ಲ, ತನ್ನ ಹಿಂದಿನ ಶರೀರದ ಕುರಿತು ಪೂರ್ಣವಾಗಿ ವಿಸ್ಮೃತಿ ಉಂಟಾಗುತ್ತದೆ. ಇದೇ ಅವನ ಮೃತ್ಯುವಾಗಿದೆ. ॥ ೩೮ ॥ ಉದಾರನಾದ ಉದ್ಧವನೇ ! ಮನುಷ್ಯನು ಈ ದೇಹವೇ ನಾನಾಗಿದ್ದೇನೆ, ಇದು ನನ್ನದಾಗಿದೆ, ಹೀಗೆ ತಿಳಿದುಕೊಂಡು ಹೊಸ ಶರೀರವನ್ನು ಸ್ವೀಕರಿಸುವುದೇ ಅವನ ಜನ್ಮವಾಗಿದೆ. ಈ ಹೊಸ ಶರೀರವನ್ನು ಸ್ವೀಕರಿಸಿ, ಸ್ವಪ್ನದಲ್ಲಿ ಮನೋರಥಗಳನ್ನು ಮಾಡುತ್ತಾ-ಮಾಡುತ್ತಾ ಕೆಲವೊಮ್ಮೆ ಸುಖವಾಗುತ್ತದೆ, ಕೆಲವೊಮ್ಮೆ ದುಃಖವಾಗುತ್ತದೆ. ಹೀಗೆಯೇ ಈ ಶರೀರದಲ್ಲಿ ಅವನು ಸುಖೀ-ದುಃಖೀ ಆಗುತ್ತಾ ಇರುತ್ತಾನೆ. ॥ ೩೯ ॥ ಸ್ವಪ್ನದಲ್ಲಿ ಹೊಸ-ಹೊಸ ಮನೋರಥಗಳು ಬರುವಂತೆ ಜೀವಿಯೂ ಕೂಡ ಪದೇ-ಪದೇ ಹುಟ್ಟುತ್ತಾ ಸಾಯುತ್ತಾ ಇರುತ್ತಾನೆ. ಇದೂ ಕೂಡ ಸ್ವಪ್ನದಂತೆ ಮಿಥ್ಯೆಯೇ ಆಗಿದೆ. ಆದರೂ ಹೊಸ ಶರೀರವನ್ನು ಸ್ವೀಕರಿಸುವುದರಿಂದ ನಾನು ಮೊದಲು ಇರಲಿಲ್ಲ, ಈಗ ಹೊಸದಾಗಿಯೇ ಹುಟ್ಟಿರುವೆನು ಎಂದು ಅವನು ತಿಳಿಯುತ್ತಾನೆ. ಅವನು ತನ್ನ ಹಿಂದಿನ ಶರೀರವನ್ನು ಪೂರ್ಣವಾಗಿ ಮರೆತುಹೋಗುತ್ತಾನೆ. ॥ ೪೦ ॥

ಇಂದ್ರಿಯಾಯನಸೃಷ್ಟೇದಂ ತ್ರೈವಿಧ್ಯಂ ಭಾತಿ ವಸ್ತುನಿ ।
ಬಹಿರಂತರ್ಭಿದಾಹೇತುರ್ಜನೋಽಸಜ್ಜನಕೃದ್ಯಥಾ ॥ ೪೧ ॥

ನಿತ್ಯದಾ ಹ್ಯಂಗ ಭೂತಾನಿ ಭವಂತಿ ನ ಭವಂತಿ ಚ ।
ಕಾಲೇನಾಲಕ್ಷ್ಯವೇಗೇನ ಸೂಕ್ಷ್ಮತ್ವಾತ್ತನ್ನ ದೃಶ್ಯತೇ ॥ ೪೨ ॥

ಯಥಾರ್ಚಿಷಾಂ ಸ್ರೋತಸಾಂ ಚ ಫಲಾನಾಂ ವಾ ವನಸ್ಪತೇಃ ।
ತಥೈವ ಸರ್ವಭೂತಾನಾಂ ವಯೋಽವಸ್ಥಾದಯಃ ಕೃತಾಃ ॥ ೪೩ ॥

ಸೋಽಯಂ ದೀಪೋಽರ್ಚಿಷಾಂ ಯದ್ವತ್ಸ್ರೋತಸಾಂ ತದಿದಂ ಜಲಮ್ ।
ಸೋಽಯಂ ಪುಮಾನಿತಿ ನೃಣಾಂ ಮೃಷಾಗೀರ್ಧೀರ್ಮೃಷಾಯುಷಾಮ್ ॥ ೪೪ ॥

ಮಾ ಸ್ವಸ್ಯ ಕರ್ಮಬೀಜೇನ ಜಾಯತೇ ಸೋಽಪ್ಯಯಂ ಪುಮಾನ್ ।
ಮ್ರಿಯತೇ ವಾಮರೋ ಭ್ರಾಂತ್ಯಾ ಯಥಾಗ್ನಿರ್ದಾರುಸಂಯುತಃ ॥ ೪೫ ॥

ನಿಷೇಕಗರ್ಭಜನ್ಮಾನಿ ಬಾಲ್ಯಕೌಮಾರಯೌವನಮ್ ।
ವಯೋಮಧ್ಯಂ ಜರಾ ಮೃತ್ಯುರಿತ್ಯವಸ್ಥಾಸ್ತನೋರ್ನವ ॥ ೪೬ ॥

ಏತಾ ಮನೋರಥಮಯೀರ್ಹ್ಯನ್ಯಸ್ಯೋಚ್ಚಾವಚಾಸ್ತನೂಃ ।
ಗುಣಸಂಗಾದುಪಾದತ್ತೇ ಕ್ವಚಿತ್‌ಕಶ್ಚಿಜ್ಜಹಾತಿ ಚ ॥ ೪೭ ॥

ಆತ್ಮನು ಒಂದೇ ಆಗಿದ್ದು ಅದ್ವಿತೀಯ, ಅಖಂಡನಾಗಿದ್ದಾನೆ. ಇದರಲ್ಲಿ ಯಾವುದೇ ಒಳಗಿನ-ಹೊರಗಿನ ಭೇದವಿಲ್ಲ, ಆತ್ಮನಿಗೆ ಜನ್ಮ-ಮೃತ್ಯುಗಳಿಲ್ಲ, ಆದರೆ ಮನಸ್ಸೇ ಈ ಭೇದಬುದ್ಧಿಯ ಮೂಲ ಕಾರಣವಾಗಿದೆ. ಮನಸ್ಸಿನ ಆಶ್ರಯದಲ್ಲೇ ಇಂದ್ರಿಯಗಳು ಇರುತ್ತವೆ. ಮನಸ್ಸೇ ನಾನಾ ಪ್ರಕಾರದ ಕಲ್ಪನೆ ಮಾಡುತ್ತದೆ. ಅದರಿಂದಲೇ ಜನ್ಮ, ಸ್ಥಿತಿ ಮತ್ತು ಮೃತ್ಯುವಿನ ಭಾಸ ಆತ್ಮನಲ್ಲಾಗುತ್ತದೆ. ಯಾವುದಾದರೂ ಕುಟುಂಬದಲ್ಲಿ ಕೆಟ್ಟಮಗ ಹುಟ್ಟಿದರೆ ಪರಿವಾರದಲ್ಲಿ ಭೇದಬುದ್ಧಿ ಉಂಟುಮಾಡಿ ಇಡೀ ಮನೆಯನ್ನು ಉಧ್ವಸ್ತ ಮಾಡಿಬಿಡುವಂತೆ ಮನಸ್ಸಿನ ಸ್ಥಿತಿಯಾಗಿದೆ. ಇದು ಸತ್ತ್ವಗುಣ ವಿಶಿಷ್ಟವಾಗಿದ್ದರೂ ನಾನಾ ಪ್ರಕಾರದ ಸಂಕಲ್ಪ-ವಿಕಲ್ಪಗಳನ್ನು ಮಾಡುತ್ತಾ ಇಂದ್ರಿಯಗಳನ್ನು ಕ್ಷುಬ್ಧಗೊಳಿಸಿ, ಜೀವಿಯನ್ನು ಅಲೆಸುತ್ತಾ ಇರುತ್ತದೆ. ॥ ೪೧ ॥ ಪ್ರಿಯ ಉದ್ಧವನೇ! ಕಾಲದ ಗತಿಯು ಕಾಣಲಾರದಷ್ಟು ಸೂಕ್ಷ್ಮವಾಗಿದೆ. ಅದರ ಮೂಲಕ ಪ್ರತಿಕ್ಷಣವೂ ಶರೀರಗಳ ಉತ್ಪತ್ತಿ ಮತ್ತು ನಾಶ ಆಗುತ್ತಾ ಇರುತ್ತದೆ. ಸೂಕ್ಷ್ಮತೆಯ ಕಾರಣದಿಂದಾಗಿ ಪ್ರತಿಕ್ಷಣ ಆಗುವ ಜನ್ಮ-ಮರಣಗಳು ಕಂಡುಬರುವುದಿಲ್ಲ. ॥ ೪೨ ॥ ಕಾಲನ ಪ್ರಭಾವದಿಂದ ದೀಪದ ಜ್ಯೋತಿ, ನದಿಗಳ ಪ್ರವಾಹ, ವೃಕ್ಷದ ಫಲಗಳ ವಿಶೇಷ-ವಿಶೇಷ ಅವಸ್ಥೆ ಇವುಗಳು ಬದಲಾಗುತ್ತಿರುವಂತೆ, ಸಮಸ್ತ ಪ್ರಾಣಿಗಳ ಶರೀರಗಳ ಆಯುಸ್ಸು, ಅವಸ್ಥೆ ಮುಂತಾದವುಗಳೂ ಕೂಡ ಬದಲಾಗುತ್ತಾ ಇರುತ್ತವೆ. ॥ ೪೩ ॥ ಇದು ಅದೇ ಜ್ಯೋತಿಗಳ ದೀಪವಾಗಿದೆ, ಈ ಪ್ರವಾಹದ ನೀರು ಅದೇ ಆಗಿದೆ – ಎಂದು ತಿಳಿಯುವುದು ಮತ್ತು ಹೇಳುವುದು ಮಿಥ್ಯೆಯಾಗಿರುವಂತೆ, ವಿಷಯ ಚಿಂತನೆಯಲ್ಲಿ ವ್ಯರ್ಥವಾಗಿ ಆಯುಸ್ಸನ್ನು ಕಳೆಯುವ ಅವಿವೇಕಿ ಪುರುಷನು ಅವನೇ ಆಗಿದ್ದಾನೆ ಎಂದು ಹೇಳುವುದು, ತಿಳಿಯುವುದು ಸರ್ವಥಾ ಮಿಥ್ಯೆಯಾಗಿದೆ. ॥ ೪೪ ॥ ಅದೇ ಈ ಆತ್ಮನು ವಾಸ್ತವವಾಗಿಯಾದರೋ ತನ್ನ ಕರ್ಮಬೀಜದಿಂದ ಹುಟ್ಟುವುದಿಲ್ಲ, ಸಾಯುವುದಿಲ್ಲ, ಆದರೆ ಹುಟ್ಟುವುದು ಮತ್ತು ಸಾಯುವುದು ಇವೆರಡೂ ಭ್ರಾಂತಿಯಿಂದಲೇ ತಿಳಿಯಲಾಗುತ್ತದೆ., ಕಟ್ಟಿಗೆಯ ಸಂಯೋಗದಿಂದ ಅಗ್ನಿಯು ಉರಿಯುವಂತೆ ಮತ್ತು ಶಾಂತವಾಗುವಂತೆ ಕಂಡುಬರುತ್ತದೆ, ಆದರೆ ಅಗ್ನಿಯಾದರೋ ವ್ಯಾಪಕವೇ ಆಗಿದೆ. ಕಟ್ಟಿಗೆಗಳು ಉರಿಯುವುದರಿಂದ ಶಾಂತವಾಗುವುದರಿಂದ ಅಗ್ನಿತತ್ತ್ವದಲ್ಲಿ ಯಾವ ವ್ಯತ್ಯಾಸವೂ ಬೀಳುವುದಿಲ್ಲ; ಸರಿಯಾಗಿ ಹಾಗೆಯೇ ಆತ್ಮನಾದರೋ ಅಮರನಾಗಿದ್ದಾನೆ. ॥ ೪೫ ॥ ಉದ್ಧವನೇ! ಗರ್ಭಾಧಾನ, ಗರ್ಭವೃದ್ಧಿ, ಜನ್ಮ, ಬಾಲ್ಯ, ಕೌಮಾರ್ಯ, ತಾರುಣ್ಯ, ಪ್ರೌಢ, ಮುಪ್ಪು ಮತ್ತು ಸಾವು ಇವು ಒಂಭತ್ತು ಶರೀರದ ಅವಸ್ಥೆಗಳಾಗಿವೆ. ॥ ೪೬ ॥ ಈ ಶರೀರವು ಜೀವನಿಂದ ಭಿನ್ನವಾಗಿದೆ ಮತ್ತು ಈ ಉಚ್ಚ-ನೀಚ ಅವಸ್ಥೆಗಳು ಅವನ ಮನೋಕಲ್ಪನೆಯೇ ಆಗಿದೆ ; ಆದರೆ ಅವನು ಅಜ್ಞಾನವಶನಾಗಿ ಗುಣಗಳ ಸಂಗದಿಂದ ಇವುಗಳನ್ನು ತನ್ನವು ಎಂದು ತಿಳಿದುಕೊಂಡು ಅಲೆಯತೊಡಗುತ್ತಾನೆ. ಯಾರಿಗಾದರೂ ವಿವೇಕ ಉಂಟಾದರೆ ಇವುಗಳನ್ನು ಬಿಟ್ಟುಬಿಡುತ್ತಾನೆ. ॥ ೪೭ ॥

ಆತ್ಮನಃ ಪಿತೃಪುತ್ರಾಭ್ಯಾಮನುಮೇಯೌ ಭವಾಪ್ಯಯೌ ।
ನ ಭವಾಪ್ಯಯವಸ್ತೂನಾಮಭಿಜ್ಞೋ ದ್ವಯಲಕ್ಷಣಃ ॥ ೪೮ ॥

ತರೋರ್ಬೀಜವಿಪಾಕಾಭ್ಯಾಂ ಯೋ ವಿದ್ವಾನ್ ಜನ್ಮಸಂಯಮೌ ।
ತರೋರ್ವಿಲಕ್ಷಣೋ ದ್ರಷ್ಟಾ ಏವಂ ದ್ರಷ್ಟಾ ತನೋಃ ಪೃಥಕ್ ॥ ೪೯ ॥

ಪ್ರಕೃತೇರೇವಮಾತ್ಮಾನಮವಿವಿಚ್ಯಾಬುಧಃ ಪುಮಾನ್ ।
ತತ್ತ್ವೇನ ಸ್ಪರ್ಶಸಮ್ಮೂಢಃ ಸಂಸಾರಂ ಪ್ರತಿಪದ್ಯತೇ ॥ ೫೦ ॥

ಸತ್ತ್ವಸಂಗಾದೃಷೀನ್ ದೇವಾನ್ ರಜಸಾಸುರಮಾನುಷಾನ್ ।
ತಮಸಾ ಭೂತತಿರ್ಯಕ್ತ್ವಂ ಭ್ರಾಮಿತೋ ಯಾತಿ ಕರ್ಮಭಿಃ ॥ ೫೧ ॥

ನೃತ್ಯತೋ ಗಾಯತಃ ಪಶ್ಯನ್ ಯಥೈವಾನುಕರೋತಿ ತಾನ್ ।
ಏವಂ ಬುದ್ಧಿಗುಣಾನ್ ಪಶ್ಯನ್ನನೀಹೋಽಪ್ಯನುಕಾರ್ಯತೇ ॥ ೫೨ ॥

ಯಥಾಂಭಸಾ ಪ್ರಚಲತಾ ತರವೋಽಪಿ ಚಲಾ ಇವ ।
ಚಕ್ಷುಷಾ ಭ್ರಾಮ್ಯಮಾಣೇನ ದೃಶ್ಯತೇ ಭ್ರಮತೀವ ಭೂಃ ॥ ೫೩ ॥

ಯಥಾ ಮನೋರಥಧಿಯೋ ವಿಷಯಾನುಭವೋ ಮೃಷಾ ।
ಸ್ವಪ್ನದೃಷ್ಟಾಶ್ಚ ದಾಶಾರ್ಹ ತಥಾ ಸಂಸಾರ ಆತ್ಮನಃ ॥ ೫೪ ॥

ಅರ್ಥೇ ಹ್ಯವಿದ್ಯಮಾನೇಽಪಿ ಸಂಸೃತಿರ್ನ ನಿವರ್ತತೇ ।
ಧ್ಯಾಯತೋ ವಿಷಯಾನಸ್ಯ ಸ್ವಪ್ನೇಽನರ್ಥಾಗಮೋ ಯಥಾ ॥ ೫೫ ॥

ತಸ್ಮಾದುದ್ಧವ ಮಾ ಭುಂಕ್ಷ್ವ ವಿಷಯಾನಸದಿಂದ್ರಿಯೈಃ ।
ಆತ್ಮಾಗ್ರಹಣನಿರ್ಭಾತಂ ಪಶ್ಯ ವೈಕಲ್ಪಿಕಂ ಭ್ರಮಮ್ ॥ ೫೬ ॥

ತಂದೆಯು ಪುತ್ರನ ಮರಣದಿಂದ ಹಾಗೂ ಪುತ್ರನು ತಂದೆಯ ಮೃತ್ಯುವಿನಿಂದ ತಮ್ಮ ಜನ್ಮ-ಮೃತ್ಯುವಿನ ಅನುಮಾನ ಮಾಡಿಕೊಳ್ಳಬೇಕು. ಜನ್ಮ ಮತ್ತು ಮೃತ್ಯು ಯಾವ ವಸ್ತುಗಳಲ್ಲಿ ಇದೆಯೋ ಅವೆರಡನ್ನೂ ಅರಿಯುವ ಆತ್ಮನು ಜನ್ಮ-ಮೃತ್ಯು ಇವೆರಡೂ ಲಕ್ಷಣಗಳಿಂದ ಸರ್ವಥಾ ಬೇರೆಯೇ ಆಗಿದ್ದಾನೆ. ॥ ೪೮ ॥ ವೃಕ್ಷದ ಬೀಜ ಮತ್ತು ಪರಿಣಾಮಗಳನ್ನು ನೋಡಿ ವಿದ್ವಾಂಸನು ಅದರ ಹುಟ್ಟು-ವಿನಾಶವನ್ನು ನೋಡುತ್ತಾನೆ. ಇವೆರಡನ್ನು ನೋಡುವವನಾದರೋ ವಿಲಕ್ಷಣನೇ ಆಗಿದ್ದಾನೆ. ಅವನು ಬೇರೆಯೇ ಆಗಿದ್ದಾನೆ. ಹೀಗೆಯೇ ಶರೀರದ ಜನ್ಮ-ಮೃತ್ಯು ನೋಡುವವನು ಶರೀರದಿಂದ ಬೇರೆಯಾಗಿದ್ದಾನೆ, ಅವನೇ ಆತ್ಮನಾಗಿದ್ದಾನೆ. ಅವನ ಜನ್ಮ-ನಾಶವಾಗುವುದಿಲ್ಲ॥ ೪೯ ॥ ಅಜ್ಞಾನೀ ಪುರುಷನು ಹೀಗೆ ಪ್ರಕೃತಿ ಮತ್ತು ಆತ್ಮವನ್ನು ತಾತ್ತ್ವಿಕರೂಪದಿಂದ ವಿವೇಚಿಸುವುದಿಲ್ಲ, ಅವನು ಆತ್ಮವನ್ನು ಪ್ರಕೃತಿಯಿಂದ ತತ್ತ್ವತಃ ಬೇರೆಯಾಗಿ ಅನುಭವ ಪಡೆಯುವುದಿಲ್ಲ ಮತ್ತು ವಿಷಯ ಭೋಗದಲ್ಲೇ ನಿಜ ಸುಖವನ್ನು ತಿಳಿಯತೊಡಗುತ್ತಾ, ಅದರಲ್ಲೇ ಮೋಹಿತನಾಗುತ್ತಾನೆ. ಇದರಿಂದಲೇ ಅವರಿಗೆ ಜನ್ಮ-ಮೃತ್ಯುರೂಪೀ ಸಂಸಾರದಲ್ಲಿ ಅಲೆಯಬೇಕಾಗುತ್ತದೆ. ॥ ೫೦ ॥ ಅವಿವೇಕಿ ಜೀವಿಯು ತನ್ನ ಕರ್ಮಗಳನುಸಾರ ಜನ್ಮ-ಮೃತ್ಯುವಿನ ಚಕ್ರದಲ್ಲಿ ಅಲೆಯತೊಡಗಿದ್ದಾಗ ಸಾತ್ತ್ವಿಕ ಕರ್ಮಗಳ ಆಸಕ್ತಿಯಿಂದ ಋಷಿಲೋಕ, ದೇವಲೋಕವನ್ನೂ, ರಾಜಸಿಕ ಕರ್ಮಗಳ ಆಸಕ್ತಿಯಿಂದ ಮನುಷ್ಯ ಮತ್ತು ಅಸುರಯೋನಿಯನ್ನು, ತಾಮಸೀ ಕರ್ಮಗಳ ಆಸಕ್ತಿಯಿಂದ ಭೂತ-ಪ್ರೇತ ಹಾಗೂ ಪಶು-ಪಕ್ಷಿಗಳ ಯೋನಿಗಳನ್ನು ಅವನು ಹೊಂದುತ್ತಾನೆ. ॥ ೫೧ ॥ ಮನುಷ್ಯನು ಯಾರಾದರೂ ಹಾಡುತ್ತಾ ಕುಣಿಯುತ್ತಿರುವುದನ್ನು ನೋಡಿದಾಗ, ಅವನು ಸ್ವತಃ ಅದನ್ನು ಅನುಕರಣೆ ಮಾಡುತ್ತಾ ಆಲಾಪಿಸತೊಡಗುತ್ತಾನೆ,. ಹಾಗೆಯೇ ಜೀವಿಯು ಬುದ್ಧಿಯ ಗುಣಗಳನ್ನು ನೋಡಿದಾಗ ಸ್ವತಃ ನಿಷ್ಕ್ರಿಯನಾಗಿದ್ದರೂ ಅದನ್ನು ಅನುಕರಣೆಮಾಡಲು ಬಾಧ್ಯನಾಗುತ್ತಾನೆ. ॥ ೫೨ ॥ ಹೊಳೆ, ಕೆರೆ ಮುಂತಾದವುಗಳ ನೀರು ಅಲ್ಲಾಡಿದಾಗ ತಟದಲ್ಲಿದ್ದ ವೃಕ್ಷಗಳ ಪ್ರತಿಬಿಂಬವು ಅಲ್ಲಾಡಿದ ಹಾಗೆ ಕಾಣುವಂತೆ, ಗಿರ-ಗಿರನೆ ತಿರುಗುವಾಗ ತನ್ನೊಂದಿಗೆ ಭೂಮಿಯು ತಿರುಗಿದಂತೆಯೇ ಕಂಡುಬರುವಂತೆ, ಮನಸ್ಸಿನ ಮೂಲಕ ಯೋಚಿಸಿದ್ದನ್ನು ಹಾಗೂ ಸ್ವಪ್ನದಲ್ಲಿ ನೋಡಲಾದ ಪದಾರ್ಥಗಳು ಸರ್ವಥಾ ಮಿಥ್ಯೆಯೇ ಆಗಿದೆ. ಹಾಗೆಯೇ ಎಲೈ ದಾಶಾರ್ಹನೇ! ಆತ್ಮನ ವಿಷಯಾನುಭವರೂಪೀ ಸಂಸಾರವೂ ಸರ್ವಥಾ ಅಸತ್ಯವಾಗಿದೆ. ಆತ್ಮನಾದರೋ ನಿತ್ಯ, ಶುದ್ಧ-ಬುದ್ಧ-ಮುಕ್ತನೇ ಆಗಿದ್ದಾನೆ. ॥ ೫೩-೫೪ ॥ ವಿಷಯಗಳು ಸತ್ಯವಾಗಿರದಿದ್ದರೂ ಅವುಗಳನ್ನು ಚಿಂತಿಸುತ್ತಾ ಇರುವ ಜೀವಿಯ ಸ್ವಪ್ನದಲ್ಲಿ ಪ್ರಾಪ್ತವಾದ ಅನರ್ಥ ಪರಂಪರೆಯು ಎಚ್ಚರವಾಗದೆ ನಿವೃತ್ತವಾಗದಿರುವಂತೆ ಜನ್ಮ ಮೃತ್ಯುರೂಪೀ ಚಕ್ರವು ಎಂದೂ ನಿವೃತ್ತವಾಗುವುದಿಲ್ಲ. ॥ ೫೫ ॥ ಪ್ರಿಯ ಉದ್ಧವನೇ! ಅದಕ್ಕಾಗಿ ಈ ದುಷ್ಟ (ಎಂದಿಗೂ ತೃಪ್ತವಾಗದಿರುವ) ಇಂದ್ರಿಯಗಳಿಂದ ವಿಷಯಗಳನ್ನು ಭೋಗಿಸಬೇಡ. ಅಜ್ಞಾನದ ಕಾರಣವೇ ಆತ್ಮನಲ್ಲಿ ಭ್ರಮೆಯಿಂದ ಭೇದಬುದ್ಧಿ ಉಂಟಾಗಿದೆ. ಅದನ್ನು ನೋಡಿ ದೂರಗೊಳಿಸು. ॥ ೫೬ ॥

ಕ್ಷಿಪ್ತೋಽವಮಾನಿತೋಽಸದ್ಭಿಃ
ಪ್ರಲಬ್ಧೋಽಸೂಯಿತೋಽಥವಾ ।
ತಾಡಿತಃ ಸನ್ನಿಬದ್ಧೋ ವಾ
ವೃತ್ತ್ಯಾ ವಾ ಪರಿಹಾಪಿತಃ ॥ ೫೭ ॥

ನಿಷ್ಠ್ಯತೋ ಮೂತ್ರಿತೋ ವಾಜ್ಞೈರ್ಬಹುಧೈವಂ ಪ್ರಕಂಪಿತಃ ।
ಶ್ರೇಯಸ್ಕಾಮಃ ಕೃಚ್ಛ್ರಗತ ಆತ್ಮನಾಽಽತ್ಮಾನಮುದ್ಧರೇತ್ ॥ ೫೮ ॥

ಅಸಾಧುವಾದ ಪುರುಷನು ಕೆತ್ತುಹಿಡಿದು ಹೊರಗೆ ದಬ್ಬಲಿ, ಮಾತಿನಿಂದ ಅವಮಾನಿಸಲಿ, ಉಪಹಾಸ್ಯಮಾಡಲಿ, ನಿಂದಿಸಲಿ, ಹೊಡೆಯಲಿ, ಬಡೆಯಲಿ, ಕಟ್ಟಿಹಾಕಲಿ, ಜೀವನನಿರ್ವಾಹ ಕಿತ್ತು ಕೊಳ್ಳಲಿ, ಮೈಮೇಲೆ ಉಗುಳಲಿ, ಮೂತ್ರ ವಿಸರ್ಜಿಸಲಿ, ಅನೇಕ ರೀತಿಯಿಂದ ವಿಚಲಿತಗೊಳಿಸಲಿ, ನಿಷ್ಠೆಯಿಂದ ಅಲ್ಲಾಡಿಸಲು ಪ್ರಯತ್ನಿಸಲಿ, ಬೇರೆಯವರ ಯಾವುದೇ ಉಪದ್ರವದಿಂದ ಕ್ಷುಬ್ಧನಾಗಬಾರದು. ಏಕೆಂದರೆ ಅವರಾದರೋ ಬಡಪಾಯಿ ಅಜ್ಞಾನಿಗಳಾಗಿದ್ದಾರೆ; ಅವರಿಗೆ ಪರಮಾರ್ಥದ ಅರಿವೇ ಇಲ್ಲ. ಆದ್ದರಿಂದ ತನ್ನ ಶ್ರೇಯಸ್ಸನ್ನು ಬಯಸುವವನು ಎಲ್ಲ ಕಠಿಣತೆಗಳನ್ನು ತನ್ನ ವಿವೇಕ-ಬುದ್ಧಿಯ ಮೂಲಕ, ಹೊರಗಿನ ಯಾವುದೇ ಸಾಧನೆಯನ್ನು ಅವಲಂಬಿಸದೆ, ತನ್ನನ್ನು ಕಾಪಾಡಿಕೊಳ್ಳಬೇಕು. ವಸ್ತುತಃ ಆತ್ಮದೃಷ್ಟಿಯೇ ಸಮಸ್ತ ವಿಪತ್ತುಗಳಿಂದ ಪಾರಾಗಿಸುವ ಏಕಮಾತ್ರ ಸಾಧನೆಯಾಗಿದೆ. ॥ ೫೭-೫೮ ॥

ಉದ್ಧವ ಉವಾಚ

ಯಥೈವಮನುಬುಧ್ಯೇಯಂ ವದ ನೋ ವದತಾಂ ವರ ।
ಸುದುಃಸಹಮಿಮಂ ಮನ್ಯೇ ಆತ್ಮನ್ಯಸದತಿಕ್ರಮಮ್ ॥ ೫೯ ॥

ವಿದುಷಾಮಪಿ ವಿಶ್ವಾತ್ಮನ್ ಪ್ರಕೃತಿರ್ಹಿ ಬಲೀಯಸೀ ।
ಋತೇ ತ್ವದ್ಧರ್ಮನಿರತಾನ್ ಶಾಂತಾಂಸ್ತೇ ಚರಣಾಲಯಾನ್ ॥ ೬೦ ॥

**ಉದ್ಧವನು ಕೇಳಿದನು** – ಭಗವಂತಾ! ನೀನು ಸಮಸ್ತ ವಕ್ತಾಗಳಲ್ಲಿ ಶ್ರೇಷ್ಠನಾಗಿರುವೆ. ಶಿರೋಮಣಿಯಾಗಿರುವೆ. ನಾನು ಈ ದುರ್ಜನರು ಮಾಡಿದ ತಿರಸ್ಕಾರವನ್ನು ಮನಸ್ಸಿನಲ್ಲಿ ಅತ್ಯಂತ ಅಸಹ್ಯವೆಂದು ತಿಳಿಯುತ್ತೇನೆ. ಆದ್ದರಿಂದ ನಾನು ಇದನ್ನು ತಿಳಿಯುವಂತೆ, ನಿನ್ನ ಉಪದೇಶವನ್ನು ಜೀವನದಲ್ಲಿ ಧರಿಸಿಕೊಳ್ಳುವಂತೆ ನನಗೆ ಉಪದೇಶಿಸು. ॥ ೫೯ ॥ ವಿಶ್ವಾತ್ಮನೇ! ಪ್ರಕೃತಿಯಾದರೋ ಬಹಳ ಬಲಿಷ್ಠವಾಗಿದೆ. ಅದು ವಿದ್ವಾಂಸರನ್ನೂ ಕೂಡ ಕ್ಷುಬ್ಧಮಾಡಿ ಬಿಡುತ್ತದೆ. ನಿನ್ನ ಚರಣಗಳಲ್ಲಿ ಶರಣಾದವರು ಮಾತ್ರ ಈ ಪ್ರಕೃತಿಯಿಂದ ಬಿಡುಗಡೆ ಹೊಂದಬಲ್ಲರು. ಅವರು ಸದಾಕಾಲ ನಿನ್ನದೇ ಭಾಗವತಧರ್ಮದಲ್ಲಿ ತೊಡಗಿದ್ದಾರೆ, ಶಾಂತರಾಗಿದ್ದಾರೆ. ಅವರಲ್ಲಿ ಊರ್ಮಿಗಳಿಲ್ಲ, ಸುಖ-ದುಃಖರೂಪೀ ದ್ವಂದ್ವಗಳಿಲ್ಲ. ಆದ್ದರಿಂದ ಇಂತಹ ಶರಣಾಗತ ಭಕ್ತರೇ ಈ ಪ್ರಪಂಚದಿಂದ ಬಾಧಿತರಾಗುವುದಿಲ್ಲ. ॥ ೬೦ ॥

ಇಪ್ಪತ್ತೆರಡನೆಯ ಅಧ್ಯಾಯವು ಮುಗಿಯಿತು. ॥ ೨೨ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಏಕಾದಶ ಸ್ಕಂಧೇ ದ್ವಾವಿಂಶೋಽಧ್ಯಾಯಃ ॥ ೨೨ ॥

# ಇಪ್ಪತ್ತಮೂರನೆಯ ಅಧ್ಯಾಯ

## ಓರ್ವ ತಿತಿಕ್ಷು ಬ್ರಾಹ್ಮಣನ ಇತಿಹಾಸ (ಭಿಕ್ಷುಗೀತೆ)

ಶ್ರೀಶುಕ ಉವಾಚ

ಸ ಏವಮಾಶಂಸಿತ ಉದ್ಧವೇನ
ಭಾಗವತಮುಖ್ಯೇನ ದಾಶಾರ್ಹಮುಖ್ಯಃ ।
ಸಭಾಜಯನ್ ಭೃತ್ಯವಚೋ ಮುಕುಂದ-
ಸ್ತಮಾಬಭಾಷೇ ಶ್ರವಣೀಯವೀರ್ಯಃ ॥ ೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ನಿಜವಾಗಿ ಭಗವಂತನ ಲೀಲಾಕಥೆಯೇ ಶ್ರವಣಿಸಲು ಯೋಗ್ಯವಾಗಿದೆ. ಅದೇ ಪ್ರೇಮ ಮತ್ತು ಮುಕ್ತಿಯನ್ನು ಕೊಡುವಂತಹುದು. ಶ್ರೀಕೃಷ್ಣನ ಪರಮಪ್ರೇಮೀ ಉದ್ಧವನು ಈ ವಿಧವಾಗಿ ಪ್ರಾರ್ಥನೆ ಮಾಡಿದಾಗ, ಯದುವಂಶ ಶಿರೋಮಣಿ ಶ್ರೀಭಗವಂತನು ಅವನ ಪ್ರಶ್ನೆಯನ್ನು ಪ್ರಶಂಸಿಸುತ್ತಾ ಅವನಲ್ಲಿ ಹೀಗೆಂದನು. ॥ ೧ ॥

ಶ್ರೀಭಗವಾನುವಾಚ

ಬಾರ್ಹಸ್ಪತ್ಯ ಸ ವೈ ನಾತ್ರ ಸಾಧುರ್ವೈ ದುರ್ಜನೇರಿತೈಃ ।
ದುರುಕ್ತೈರ್ಭಿನ್ನಮಾತ್ಮಾನಂ ಯಃ ಸಮಾಧಾತುಮೀಶ್ವರಃ ॥ ೨ ॥

ನ ತಥಾ ತಪ್ಯತೇ ವಿದ್ಧಃ ಪುಮಾನ್ ಬಾಣೈಃ ಸುಮರ್ಮಗೈಃ ।
ಯಥಾ ತುದಂತಿ ಮರ್ಮಸ್ಥಾ ಹ್ಯಸತಾಂ ಪರುಷೇಷವಃ ॥ ೩ ॥

ಕಥಯಂತಿ ಮಹತ್ಪುಣ್ಯಮಿತಿಹಾಸಮಿಹೋದ್ಧವ ।
ತಮಹಂ ವರ್ಣಯಿಷ್ಯಾಮಿ ನಿಬೋಧ ಸುಸಮಾಹಿತಃ ॥ ೪ ॥

ಕೇನಚಿದ್ಭಿಕ್ಷುಣಾ ಗೀತಂ ಪರಿಭೂತೇನ ದುರ್ಜನೈಃ ।
ಸ್ಮರತಾ ಧೃತಿಯುಕ್ತೇನ ವಿಪಾಕಂ ನಿಜಕರ್ಮಣಾಮ್ ॥ ೫ ॥

ಅವಂತಿಷು ದ್ವಿಜಃ ಕಶ್ಚಿದಾಸೀದಾಢ್ಯತಮಃ ಶ್ರಿಯಾ ।
ವಾರ್ತಾವೃತ್ತಿಃ ಕದರ್ಯಸ್ತು ಕಾಮೀ ಲುಬ್ಧೋಽತಿಕೋಪನಃ ॥ ೬ ॥

ಜ್ಞಾತಯೋಽತಿಥಯಸ್ತಸ್ಯ ವಾಙ್ಮಾತ್ರೇಣಾಪಿ ನಾರ್ಚಿತಾಃ ।
ಶೂನ್ಯಾವಸಥ ಆತ್ಮಾಪಿ ಕಾಲೇ ಕಾಮೈರನರ್ಚಿತಃ ॥ ೭ ॥

ದುಶ್ಶೀಲಸ್ಯ ಕದರ್ಯಸ್ಯ ದ್ರುಹ್ಯಂತೇ ಪುತ್ರಬಾಂಧವಾಃ ।
ದಾರಾ ದುಹಿತರೋ ಭೃತ್ಯಾ ವಿಷಣ್ಣಾ ನಾಚರನ್ ಪ್ರಿಯಮ್ ॥ ೮ ॥

ತಸ್ಯೈವಂ ಯಕ್ಷವಿತ್ತಸ್ಯ ಚ್ಯುತಸ್ಯೋಭಯಲೋಕತಃ ।
ಧರ್ಮಕಾಮವಿಹೀನಸ್ಯ ಚುಕ್ರುಧುಃ ಪಂಚಭಾಗಿನಃ ॥ ೯ ॥

ತದವಧ್ಯಾನವಿಸ್ರಸ್ತಪುಣ್ಯಸ್ಕಂಧಸ್ಯ ಭೂರಿದ ।
ಅರ್ಥೋಽಪ್ಯಗಚ್ಛನ್ನಿಧನಂ ಬಹ್ವಾಯಾಸಪರಿಶ್ರಮಃ ॥ ೧೦ ॥

ಜ್ಞಾತಯೋ ಜಗೃಹುಃ ಕಿಂಚಿತ್ ಕಿಂಚಿದ್ದಸ್ಯವ ಉದ್ಧವ ।
ದೈವತಃ ಕಾಲತಃ ಕಿಂಚಿದ್ಬ್ರಹ್ಮಬಂಧೋರ್ನೃಪಾರ್ಥಿವಾತ್ ॥ ೧೧ ॥

ಭಗವಾನ್ ಶ್ರೀಕೃಷ್ಣನು ಹೇಳಿದನು – ದೇವಗುರು ಬೃಹಸ್ಪತಿಯ ಶಿಷ್ಯನಾದ ಉದ್ಧವನೇ! ಈ ಪ್ರಪಂಚದಲ್ಲಿ ಪ್ರಾಯಶಃ ದುರ್ಜನರ ಕಟುವಾಣಿಗೆ ಗುರಿಯಾದರೂ ತನ್ನ ಹೃದಯವನ್ನು ಕಾಯ್ದುಕೊಳ್ಳುವಂತಹ ಸಂತ ಪುರುಷರು ಸಿಗಲಾರರು. ॥ ೨ ॥ ಮನುಷ್ಯನ ಹೃದಯವು ದುಷ್ಟಜನರ ಮರ್ಮಾಂತಕ ಹಾಗೂ ಕಠೋರ ವಾಗ್ಬಾಣಗಳಿಂದ ಪೀಡಿತವಾದಷ್ಟು, ಮರ್ಮಭೇದೀ ಬಾಣಗಳು ಚುಚ್ಚಿದಾಗಲೂ ಆಗುವುದಿಲ್ಲ. ॥ ೩ ॥ ಉದ್ಧವನೇ! ಈ ವಿಷಯದಲ್ಲಿ ಮಹಾತ್ಮರು ಒಂದು ಬಹಳ ಪವಿತ್ರ, ಪ್ರಾಚೀನ ಇತಿಹಾಸವನ್ನು ಹೇಳುತ್ತಿರುತ್ತಾರೆ. ನಾನು ಅದನ್ನೇ ನಿನಗೆ ಹೇಳುವೆನು. ದತ್ತಚಿತ್ತನಾಗಿ ಅದನ್ನು ಕೇಳು. ॥ ೪ ॥ ಓರ್ವ ಸಂನ್ಯಾಸಿಯನ್ನು ದುಷ್ಟರು ತುಂಬಾ ಸತಾಯಿಸಿದರು. ಆಗಲೂ ಅವನು ಧೈರ್ಯಗೆಡಲಿಲ್ಲ, ಅವನು ತನ್ನ ಪೂರ್ವಜನ್ಮದ ಕರ್ಮಗಳ ಫಲವೆಂದು ತಿಳಿದುಕೊಂಡು ತನ್ನ ಮಾನಸಿಕ ಕೆಲವು ಉದ್ಗಾರಗಳನ್ನು ಪ್ರಕಟಿಸಿದ್ದನು. ಅದರದ್ದೇ ಈ ಇತಿಹಾಸದಲ್ಲಿ ವರ್ಣನೆ ಇದೆ. ॥ ೫ ॥

ಹಿಂದಿನಕಾಲದಲ್ಲಿ ಉಜ್ಜೈನಿಯಲ್ಲಿ ಓರ್ವ ಬ್ರಾಹ್ಮಣನು ವಾಸಿಸುತ್ತಿದ್ದನು. ಅವನು ಕೃಷಿ-ವ್ಯಾಪಾರಾದಿಗಳನ್ನು ಮಾಡಿ ಬಹಳಷ್ಟು ಧನ-ಸಂಪತ್ತನ್ನು ಗಳಿಸಿದನು. ಅವನು ತುಂಬಾ ಕೃಪಣನೂ, ಕಾಮಿಯೂ, ಲೋಭಿಯೂ ಆಗಿದ್ದನು. ಕ್ರೋಧವಾದರೋ ಅವನಿಗೆ ಮಾತು ಮಾತಿಗೆ ಬರುತ್ತಿತ್ತು. ॥ ೬ ॥ ಅವನು ತನ್ನ ಜಾತಿ-ಬಂಧುಗಳನ್ನು, ಅತಿಥಿಗಳನ್ನು ಎಂದೂ ಸಿಹಿಮಾತುಗಳಿಂದಲೂ ಸಂತೋಷಪಡಿಸಲಿಲ್ಲ, ಊಟಕ್ಕಿಕ್ಕುವುದಂತೂ ದೂರವೇ ಉಳಿಯಿತು. ಅವನು ಧರ್ಮ-ಕರ್ಮದಿಂದ ಶೂನ್ಯವಾದ ಮನೆಯಲ್ಲಿ ಇದ್ದುಕೊಂಡು, ತಾನು ಸ್ವತಃ ತನ್ನ ಧನ-ಸಂಪತ್ತಿನಿಂದ ತನ್ನ ಶರೀರಕ್ಕೂ ಸುಖ ನೀಡಲಿಲ್ಲ. ॥ ೭ ॥ ಅವನ ಲೋಭ ಮತ್ತು ಕೆಟ್ಟ ಸ್ವಭಾವದಿಂದಾಗಿ ಅವನ ಮಕ್ಕಳು, ಬಂಧು-ಬಾಂಧವರು, ಆಳು-ಕಾಳುಗಳು, ಹೆಂಡತಿಯೇ ಮುಂತಾದವರು ದುಃಖಿಗಳಾಗಿದ್ದು, ಮನಸ್ಸಿನಲ್ಲೇ ಅವನ ಅನಿಷ್ಟವನ್ನು ಚಿಂತಿಸುತ್ತಿದ್ದರು. ಯಾರೂ ಅವನ ಮನಸ್ಸಿಗೆ ಪ್ರಿಯವಾಗುವ ವ್ಯವಹಾರ ಮಾಡುತ್ತಿರಲಿಲ್ಲ. ॥ ೮ ॥ ಅವನು ಲೋಕ-ಪರಲೋಕ ಎರಡರಿಂದಲೂ ಪತಿತನಾಗಿದ್ದನು. ಯಕ್ಷರಂತೆ ಧನವನ್ನು ಕಾಯುತ್ತಿದ್ದನು. ಆ ಧನದಿಂದ ಅವನಾದರೋ ಧರ್ಮವನ್ನು ಮಾಡುತ್ತಿರಲಿಲ್ಲ, ಭೋಗವನ್ನೂ ಭೋಗಿಸುತ್ತಿರಲಿಲ್ಲ. ಅನೇಕ ದಿನಗಳವರೆಗೆ ಈ ಪ್ರಕಾರ ಜೀವನ ನಡೆಸಿದ್ದರಿಂದ ಪಂಚ-ಮಹಾಯಜ್ಞಗಳ ಭಾಗಿಯಾದ ದೇವತೆಗಳು ಕ್ರುದ್ಧರಾದರು. ॥ ೯ ॥ ಉದಾರನಾದ ಉದ್ಧವನೇ! ಅವನ ಪೂರ್ವ ಪುಣ್ಯದ ಆಸರೆಯಿಂದ ಇಷ್ಟರವರೆಗೆ ನೆಲೆಸಿದ್ದ ಧನವು ಪಂಚಮಹಾಯಜ್ಞದ ಭಾಗಿಗಳ ತಿರಸ್ಕಾರದಿಂದ ಹೊರಟುಹೋಗಲು ತೊಡಗಿತು. ಅವನು ಬಹಳ ಉದ್ಯೋಗ-ಪರಿಶ್ರಮದಿಂದ ಗಳಿಸಿದ ಧನವು, ಅವನ ಕಣ್ಣುಮುಂದೆಯೇ ನಾಶವಾಗಿ ಹೋಯಿತು. ॥ ೧೦ ॥ ಆ ಅಧಮ ಬ್ರಾಹ್ಮಣನ ಸ್ವಲ್ಪ ಧನವನ್ನು ಅವನ ಕುಟುಂಬಿಗಳು ಕಸಿದು ಕೊಂಡರು. ಕೆಲವನ್ನು ಕಳ್ಳರು ಕದ್ದುಕೊಂಡು ಹೋದರು. ಕೆಲವು ಬೆಂಕಿಯೇ ಮುಂತಾದ ದೈವೀಕೋಪದಿಂದ ನಷ್ಟವಾಯಿತು. ಕೆಲವು ಸಮಯದ ಪ್ರಭಾವದಿಂದ ನಾಶಹೊಂದಿತು. ಕೆಲವನ್ನು ಸಾಧಾರಣ ಮನುಷ್ಯರು ಎತ್ತಿಹಾಕಿದರು. ಅಳಿದುಳಿದ ಧನವನ್ನು ಕರದರೂಪದಲ್ಲಿ, ದಂಡದ ರೂಪದಲ್ಲಿ ಶಾಸಕರು ಎತ್ತಿಕೊಂಡು ಹೋದರು. ॥ ೧೧ ॥

ಸ ಏವಂ ದ್ರವಿಣೇ ನಷ್ಟೇ ಧರ್ಮಕಾಮವಿವರ್ಜಿತಃ ।
ಉಪೇಕ್ಷಿತಶ್ಚ ಸ್ವಜನೈಶ್ಚಿಂತಾಮಾಪ ದುರತ್ಯಯಾಮ್ ॥ ೧೨ ॥

ತಸ್ಯೈವಂ ಧ್ಯಾಯತೋ ದೀರ್ಘಂ ನಷ್ಟರಾಯಸ್ತಪಸ್ವಿನಃ ।
ಖಿದ್ಯತೋ ಬಾಷ್ಪಕಂಠಸ್ಯ ನಿರ್ವೇದಃ ಸುಮಹಾನಭೂತ್ ॥ ೧೩ ॥

ಸ ಚಾಹೇದಮಹೋ ಕಷ್ಟಂ ವೃಥಾಽಽತ್ಮಾ ಮೇಽನುತಾಪಿತಃ ।
ನ ಧರ್ಮಾಯ ನ ಕಾಮಾಯ ಯಸ್ಯಾರ್ಥಾಯಾಸ ಈದೃಶಃ ॥ ೧೪ ॥

ಪ್ರಾಯೇಣಾರ್ಥಾಃ ಕದರ್ಯಾಣಾಂ ನ ಸುಖಾಯ ಕದಾಚನ ।
ಇಹ ಚಾತ್ಮೋಪತಾಪಾಯ ಮೃತಸ್ಯ ನರಕಾಯ ಚ ॥ ೧೫ ॥

ಯಶೋ ಯಶಸ್ವಿನಾಂ ಶುದ್ಧಂ ಶ್ಲಾಘ್ಯಾ ಯೇ ಗುಣಿನಾಂ ಗುಣಾಃ ।
ಲೋಭಃ ಸ್ವಲ್ಪೋಽಪಿ ತಾನ್ಹಂತಿ ಶ್ವಿತ್ರೋ ರೂಪಮಿವೇಪ್ಸಿತಮ್ ॥ ೧೬ ॥

ಅರ್ಥಸ್ಯ ಸಾಧನೇ ಸಿದ್ಧೇ ಉತ್ಕರ್ಷೇ ರಕ್ಷಣೇ ವ್ಯಯೇ ।
ನಾಶೋಪಭೋಗ ಆಯಾಸಸ್ತ್ರಾಸಶ್ಚಿಂತಾ ಭ್ರಮೋ ನೃಣಾಮ್ ॥ ೧೭ ॥

ಸ್ತೇಯಂ ಹಿಂಸಾನೃತಂ ದಂಭಃ ಕಾಮಃ ಕ್ರೋಧಃ ಸ್ಮಯೋ ಮದಃ ।
ಭೇದೋ ವೈರಮವಿಶ್ವಾಸಃ ಸಂಸ್ಪರ್ಧಾ ವ್ಯಸನಾನಿ ಚ ॥ ೧೮ ॥

ಏತೇ ಪಂಚದಶಾನರ್ಥಾ ಹ್ಯರ್ಥಮೂಲಾ ಮತಾ ನೃಣಾಮ್ ।
ತಸ್ಮಾದನರ್ಥಮರ್ಥಾಖ್ಯಂ ಶ್ರೇಯೋಽರ್ಥೀ ದೂರತಸ್ತ್ಯಜೇತ್ ॥ ೧೯ ॥

ಭಿದ್ಯಂತೇ ಭ್ರಾತರೋ ದಾರಾಃ ಪಿತರಃ ಸುಹೃದಸ್ತಥಾ ।
ಏಕಾಸ್ನಿಗ್ಧಾಃ ಕಾಕಿಣಿನಾ ಸದ್ಯಃ ಸರ್ವೇಽರಯಃ ಕೃತಾಃ ॥ ೨೦ ॥

ಅರ್ಥೇನಾಲ್ಪೀಯಸಾ ಹ್ಯೇತೇ ಸಂರಬ್ಧಾ ದೀಪ್ತಮನ್ಯವಃ ।
ತ್ಯಜಂತ್ಯಾಶು ಸ್ಪೃಧೋ ಘ್ನಂತಿ ಸಹಸೋತ್ಸೃಜ್ಯ ಸೌಹೃದಮ್ ॥ ೨೧ ॥

ಉದ್ಧವನೇ! ಹೀಗೆ ಅವನ ಎಲ್ಲ ಸಂಪತ್ತು ಹೊರಟು ಹೋಯಿತು. ಅವನು ಧರ್ಮವನ್ನೂ ಗಳಿಸಲಿಲ್ಲ, ಭೋಗವನ್ನೂ ಭೋಗಿಸಲಿಲ್ಲ, ಇತ್ತ ಅವನ ನೆಂಟರಿಷ್ಟರೂ ಕೂಡ ಅವನತ್ತ ಮುಖಮುರಿದರು. ಈಗ ಅವನಿಗೆ ಭಾರೀ ಭಯಾನಕ ಚಿಂತೆಯು ಆವರಿಸಿತು. ॥ ೧೨ ॥ ಧನದ ನಾಶದಿಂದ ಅವನ ಹೃದಯದಲ್ಲಿ ಬಹಳ ಉರಿ ಉಂಟಾಯಿತು. ಅವನ ಮನಸ್ಸು ದುಗುಡದಿಂದ ತುಂಬಿತು. ಕಣ್ಣೀರಿನ ಕಾರಣದಿಂದ ಗಂಟಲು ಕಟ್ಟಿಹೋಯಿತು. ಆದರೆ ಈ ಪ್ರಕಾರ ಚಿಂತಿಸುತ್ತಾ-ಚಿಂತಿಸುತ್ತಲೇ ಅವನ ಮನಸ್ಸಿನಲ್ಲಿ ಸಂಸಾರದ ಕುರಿತು ಮಹಾನ್ ದುಃಖಬುದ್ಧಿ ಮತ್ತು ಉತ್ಕಟ ವೈರಾಗ್ಯದ ಉದಯವಾಯಿತು. ॥ ೧೩ ॥

ಈಗ ಆ ಬ್ರಾಹ್ಮಣನು ಮನಸ್ಸಿನಲ್ಲೇ ಅಂದುಕೊಂಡನು – ಅಯ್ಯೋ! ಶಿವನೇ! ನಾನು ಇಷ್ಟು ದಿನಗಳವರೆಗೆ ನನ್ನನ್ನು ವ್ಯರ್ಥವಾಗಿ ಸತಾಯಿಸಿಕೊಂಡೆ. ಇದು ಬಹಳ ದುಃಖದ ಮಾತಾಗಿದೆ. ಯಾವ ಧನಕ್ಕಾಗಿ ನಾನು ಕಠಿಣ ಪರಿಶ್ರಮ ಮಾಡಿದೆನೋ, ಆ ಧನವು ಧರ್ಮಕಾರ್ಯದಲ್ಲಾಗಲೀ, ಸುಖಭೋಗದಲ್ಲಾಗಲೀ ಉಪಯೋಗವಾಗಲೇ ಇಲ್ಲವಲ್ಲ! ॥ ೧೪ ॥ ಪ್ರಾಯಶಃ ಲೋಭೀ ಮನುಷ್ಯನಿಗೆ ಧನದಿಂದ ಎಂದೂ ಸುಖ ಸಿಗುವುದಿಲ್ಲ ಎಂಬುದನ್ನು ನೋಡಲಾಗುತ್ತದೆ. ಈ ಲೋಕದಲ್ಲಾದರೋ ಅವರು ಧನವನ್ನು ಗಳಿಸುವುದರಲ್ಲಿ ಮತ್ತು ಅದರ ರಕ್ಷಣೆಯ ಚಿಂತೆಯಿಂದ ಸುಡುತ್ತಿರುತ್ತಾರೆ. ಧರ್ಮವನ್ನು ಮಾಡದಿರುವುದರಿಂದ ಸತ್ತ ಬಳಿಕ ನರಕಕ್ಕೆ ಹೋಗುತ್ತಾರೆ. ॥ ೧೫ ॥ ಸ್ವಲ್ಪವೇ ತೊನ್ನು ಸರ್ವಾಂಗ ಸುಂದರ ಸ್ವರೂಪವನ್ನು ಕೆಡಿಸುವಂತೆ, ಸ್ವಲ್ಪವಾದ ಲೋಭವೂ ಕೂಡ ಯಶಸ್ವಿಗಳ ಶುದ್ಧಕೀರ್ತಿಯನ್ನು ಹಾಗೂ ಗುಣಿಗಳ ಪ್ರಶಂಸನೀಯ ಗುಣಗಳನ್ನು ನಾಶಮಾಡಿಬಿಡುತ್ತದೆ. ॥ ೧೬ ॥ ಧನವನ್ನು ಗಳಿಸುವುದರಲ್ಲಿ, ಗಳಿಸಿದ ಬಳಿಕ ಅದನ್ನು ಬೆಳೆಸುವುದರಲ್ಲಿ, ಕಾಪಾಡುವುದರಲ್ಲಿ, ವ್ಯಯಮಾಡುವುದರಲ್ಲಿ, ಅದರ ನಾಶದಲ್ಲಿ, ಉಪಭೋಗದಲ್ಲಿ ಎಲ್ಲಿ ನೋಡಿದರೂ ನಿರಂತರ ಪರಿಶ್ರಮ, ಭಯ, ಚಿಂತೆ, ಭ್ರಮೆ ಇವುಗಳನ್ನು ಎದುರಿಸಬೇಕಾಗುತ್ತದೆ.॥೧೭॥ ಕಳ್ಳತನ, ಹಿಂಸೆ, ಸುಳ್ಳು ಮಾತನಾಡುವುದು, ದಂಭ, ಕಾಮ, ಕ್ರೋಧ, ಗರ್ವ, ಅಹಂಕಾರ, ಭೇದಬುದ್ಧಿ, ವೈರ, ಅವಿಶ್ವಾಸ, ಸ್ಪರ್ಧಾ, ಲಂಪಟತೆ, ಜೂಜು, ಹೆಂಡ – ಈ ಹದಿನೈದು ಅನರ್ಥಗಳು ಮನುಷ್ಯನಲ್ಲಿ ಧನದ ಕಾರಣದಿಂದಲೇ ಪರಿಗಣಿಸಲಾಗಿದೆ. ಅದಕ್ಕಾಗಿ ಶ್ರೇಯಸ್ಕಾಮಿ ಪುರುಷನು ಸ್ವಾರ್ಥ ಹಾಗೂ ಪರಮಾರ್ಥದ ವಿರೋಧೀ ಅರ್ಥನಾಮಧಾರೀ ಅನರ್ಥವನ್ನು ದೂರದಿಂದಲೇ ಬಿಟ್ಟುಬಿಡಬೇಕು. ॥ ೧೮-೧೯ ॥ ಅಣ್ಣ-ತಮ್ಮಂದಿರು, ಪತ್ನೀ-ಪುತ್ರರು, ತಂದೆ-ತಾಯಿ, ಬಂಧು-ಬಾಂಧವರು, ಸ್ನೇಹ ಸಂಬಂಧದಿಂದ ಬಂಧಿತರಾಗಿ ಪೂರ್ಣವಾಗಿ ಒಂದಾಗಿಯೇ ಇರುತ್ತಾರೆ. ಆದರೆ ಧನದ ಕಾರಣದಿಂದ ಎಲ್ಲರೂ ಕೂಡಲೇ ಒಬ್ಬರು ಮತ್ತೊಬ್ಬರ ಶತ್ರುಗಳಾಗಿ ಹರಿದು-ಹಂಚಿಹೋಗುತ್ತಾರೆ. ॥ ೨೦ ॥ ಈ ಜನರು ಸ್ವಲ್ಪವೇ ಧನಕ್ಕಾಗಿಯೂ ಕ್ಷುಬ್ಧ ಮತ್ತು ಕ್ರುದ್ಧರಾಗುತ್ತಾರೆ. ನೋಡು-ನೋಡುತ್ತಿರುವಂತೆ ಸೌಹಾರ್ದ - ಸಂಬಂಧವನ್ನು ಬಿಟ್ಟುಬಿಡುತ್ತಾರೆ. ಪರಸ್ಪರ ಸ್ಪರ್ಧೆಯಲ್ಲಿ ತೊಡಗುತ್ತಾರೆ. ಒಬ್ಬರು-ಮತ್ತೊಬ್ಬರ ಸರ್ವನಾಶಮಾಡಿ ಪ್ರಾಣತೆಗೆಯುವಷ್ಟು ಮುಂದುವರಿಯುತ್ತಾರೆ. ॥ ೨೧ ॥

ಲಬ್ಧ್ವಾ ಜನ್ಮಾಮರಪ್ರಾರ್ಥ್ಯಂ ಮಾನುಷ್ಯಂ ತದ್ದ್ವಿಜಾಗ್ರ್ಯತಾಮ್ ।
ತದನಾದೃತ್ಯ ಯೇ ಸ್ವಾರ್ಥಂ ಘ್ನಂತಿ ಯಾಂತ್ಯಶುಭಾಂ ಗತಿಮ್
॥ ೨೨ ॥

ಸ್ವರ್ಗಾಪವರ್ಗಯೋರ್ದ್ವಾರಂ ಪ್ರಾಪ್ಯ ಲೋಕಮಿಮಂ ಪುಮಾನ್ ।
ದ್ರವಿಣೇ ಕೋಽನುಷಜ್ಜೇತ ಮರ್ತ್ಯೋಽನರ್ಥಸ್ಯ ಧಾಮನಿ
॥ ೨೩ ॥

ದೇವರ್ಷಿಪಿತೃಭೂತಾನಿ ಜ್ಞಾತೀನ್ ಬಂಧೂಂಶ್ಚ ಭಾಗಿನಃ ।
ಅಸಂವಿಭಜ್ಯ ಚಾತ್ಮಾನಂ ಯಕ್ಷವಿತ್ತಃ ಪತತ್ಯಧಃ
॥ ೨೪ ॥

ವ್ಯರ್ಥಯಾರ್ಥೇಹಯಾ ವಿತ್ತಂ ಪ್ರಮತ್ತಸ್ಯ ವಯೋ ಬಲಮ್ ।
ಕುಶಲಾ ಯೇನ ಸಿಧ್ಯಂತಿ ಜರಠಃ ಕಿಂ ನು ಸಾಧಯೇ
॥ ೨೫ ॥

ಕಸ್ಮಾತ್ ಸಂಕ್ಲಿಶ್ಯತೇ ವಿದ್ವಾನ್ ವ್ಯರ್ಥಯಾರ್ಥೇಹಯಾಸಕೃತ್ ।
ಕಸ್ಯಚಿನ್ಮಾಯಯಾ ನೂನಂ ಲೋಕೋಽಯಂ ಸುವಿಮೋಹಿತಃ
॥ ೨೬ ॥

ಕಿಂ ಧನೈರ್ಧನದೈರ್ವಾ ಕಿಂ ಕಾಮೈರ್ವಾ ಕಾಮದೈರುತ ।
ಮೃತ್ಯುನಾ ಗ್ರಸ್ಯಮಾನಸ್ಯ ಕರ್ಮಭಿರ್ವೋತ ಜನ್ಮದೈಃ
॥ ೨೭ ॥

ನೂನಂ ಮೇ ಭಗವಾಂಸ್ತುಷ್ಟಃ ಸರ್ವದೇವಮಯೋ ಹರಿಃ ।
ಯೇನ ನೀತೋ ದಶಾಮೇತಾಂ ನಿರ್ವೇದಶ್ಚಾತ್ಮನಃ ಪ್ಲವಃ
॥ ೨೮ ॥

ಸೋಽಹಂ ಕಾಲಾವಶೇಷೇಣ ಶೋಷಯಿಷ್ಯೇಽಂಗಮಾತ್ಮನಃ ।
ಅಪ್ರಮತ್ತೋಽಖಿಲಸ್ವಾರ್ಥೇ ಯದಿ ಸ್ಯಾತ್ಸಿದ್ಧ ಆತ್ಮನಿ
॥ ೨೯ ॥

ತತ್ರ ಮಾಮನುಮೋದೇರನ್ ದೇವಾಸ್ತ್ರಿಭುವನೇಶ್ವರಾಃ ।
ಮುಹೂರ್ತೇನ ಬ್ರಹ್ಮಲೋಕಂ ಖಟ್ವಾಂಗಃ ಸಮಸಾಧಯತ್
॥ ೩೦ ॥

ದೇವತೆಗಳೂ ಬಯಸುವ ಮನುಷ್ಯಜನ್ಮವನ್ನು, ಅದರಲ್ಲಿಯೂ ಬ್ರಾಹ್ಮಣಶರೀರವನ್ನು ಪಡೆದುಕೊಂಡು ಅದರ ಅನಾದರ ಮಾಡುವವರು, ತನ್ನ ನಿಜವಾದ ಸ್ವಾರ್ಥ-ಪರಮಾರ್ಥವನ್ನು ನಾಶಮಾಡುವವರು ಅಶುಭಗತಿಯನ್ನು ಪಡೆಯುತ್ತಾರೆ. ॥ ೨೨ ॥ ಈ ಮನುಷ್ಯ ಶರೀರವು ಮೋಕ್ಷ ಮತ್ತು ಸ್ವರ್ಗದ ದ್ವಾರವಾಗಿದೆ. ಇವನ್ನು ಪಡೆದಿದ್ದರೂ ಅನರ್ಥಗಳ ತವರಾದ ಧನದ ಮೋಸದಲ್ಲಿ ಯಾವ ಬುದ್ಧಿವಂತ ಮನುಷ್ಯನು ತಾನೇ ಸಿಕ್ಕಿಕೊಳ್ಳುವನು ? ॥ ೨೩. ॥ ಯಾವ ಮನುಷ್ಯನು ದೇವತೆಗಳು, ಋಷಿಗಳು, ಪಿತೃಗಳು, ಪ್ರಾಣಿಗಳು, ಜ್ಞಾತಿ-ಬಾಂಧವರು, ಕುಟುಂಬಿಗಳು ಹಾಗೂ ಧನದ ಇನ್ನಿತರ ಪಾಲುದಾರರು ಇವರಿಗೆಲ್ಲ ಅವರ ಪಾಲನ್ನು ಕೊಟ್ಟು ಸಂತೋಷಪಡಿಸುವುದಿಲ್ಲವೋ ಮತ್ತು ತಾನೂ ಅದನ್ನು ಉಪಭೋಗಿಸುವುದಿಲ್ಲವೋ ಅವನು ಯಕ್ಷನಂತೆ ಧನವನ್ನು ಕಾಯುವ ಕೃಪಣನಾಗಿ, ಅವಶ್ಯವಾಗಿ ಅಧೋಗತಿಯನ್ನು ಪಡೆಯುತ್ತಾನೆ. ॥ ೨೪ ॥ ನಾನು ನನ್ನ ಕರ್ತವ್ಯದಿಂದ ಚ್ಯುತನಾಗಿದ್ದೇನೆ. ನಾನು ಪ್ರಮಾದದಲ್ಲಿ ಆಯುಸ್ಸನ್ನು, ಧನವನ್ನು, ಬಲವನ್ನು, ಪೌರುಷವನ್ನು ಕಳೆದುಕೊಂಡೆ. ವಿವೇಕೀ ಜನರು ಯಾವ ಸಾಧನೆಗಳಿಂದ ಮೋಕ್ಷವನ್ನೂ ಕೂಡ ಪಡೆದುಕೊಳ್ಳುವರೋ, ಅವನ್ನೂ ನಾನು ಧನಗಳಿಸುವ ವ್ಯರ್ಥವಾದ ಪ್ರಯತ್ನದಲ್ಲಿ ಕಳಕೊಂಡುಬಿಟ್ಟೆ. ಈಗ ವೃದ್ಧಾಪ್ಯದಲ್ಲಿ ಯಾವ ಸಾಧನೆ ಮಾಡಲೀ ? ಎಂದು ಆ ಬ್ರಾಹ್ಮಣನು ಪಶ್ಚಾತ್ತಾಪಪಟ್ಟನು. ॥ ೨೫ ॥ ದೊಡ್ಡ-ದೊಡ್ಡ ವಿದ್ವಾಂಸರೂ ಕೂಡ ಧನದ ವ್ಯರ್ಥ ತೃಷ್ಣೆಯಿಂದ ನಿರಂತರ ಏಕೆ ದುಃಖಿಗಳಾಗಿ ಇರುತ್ತಾರೆ ? ಎಂಬುದು ನನಗೆ ತಿಳಿದಿರಲಿಲ್ಲ. ಏನೇ ಇರಲಿ, ಅವಶ್ಯವಾಗಿ ಈ ಪ್ರಪಂಚವು ಯಾರದೋ ಮಾಯೆಯಿಂದ ಅತ್ಯಂತ ಮೋಹಿತವಾಗುತ್ತಿದೆ. ॥ ೨೬ ॥

ಈ ಮನುಷ್ಯಶರೀರವು ಕಾಲನ ವಿಕರಾಳ ಹಿಡಿತದಲ್ಲಿ ಸಿಕ್ಕಿಕೊಂಡಿರುವುದು. ಇವನಿಗೆ ಧನದಿಂದಾಗಲೀ, ಧನವನ್ನು ಕೊಡುವ ದೇವತೆಗಳಿಂದಾಗಲೀ, ಜನರಿಂದಾಗಲೀ, ಭೋಗವಾಸನೆಯಿಂದಾಗಲೀ, ಅದನ್ನು ಪೂರ್ಣಗೊಳಿಸುವುದರಿಂದಾಗಲೀ, ಪದೇ-ಪದೇ ಜನ್ಮ-ಮೃತ್ಯುವಿನ ಚಕ್ರದಲ್ಲಿ ಕೆಡಹುವ ಸಕಾಮ ಕರ್ಮಗಳಿಂದಾಗಲೀ ಏನು ಲಾಭವಿದೆ ? ॥ ೨೭ ॥ ಸರ್ವದೇವ ಸ್ವರೂಪೀ ಭಗವಂತನು ನನ್ನ ಮೇಲೆ ಪ್ರಸನ್ನನಾಗಿರುವನು, ಇದರಲ್ಲಿ ಸಂದೇಹವೇ ಇಲ್ಲ, ಆದ್ದರಿಂದ ಅವನೇ ನನ್ನನ್ನು ಈ ಸ್ಥಿತಿಗೆ ತಂದು, ಜಗತ್ತಿನ ಕುರಿತು ನನಗೆ ಈ ದುಃಖಬುದ್ಧಿ, ವೈರಾಗ್ಯವನ್ನು ಕೊಟ್ಟಿರುವನು. ವಾಸ್ತವವಾಗಿ ವೈರಾಗ್ಯವೇ ಈ ಸಂಸಾರಸಾಗರದಿಂದ ಪಾರಾಗಲು ದೋಣಿಯಂತೆ ಇದೆ. ॥ ೨೮ ॥ ನನ್ನ ಆಯುಸ್ಸು ಬಾಕಿ ಉಳಿದಿದ್ದರೆ, ನಾನು ಆತ್ಮಲಾಭದಲ್ಲೇ ಸಂತುಷ್ಟನಾಗಿದ್ದು, ನನ್ನ ಪರಮಾರ್ಥದ ಸಂಬಂಧದಲ್ಲಿ ಜಾಗರೂಕನಾಗುವೆನು. ಈಗ ಉಳಿದಿರುವ ಸಮಯದಲ್ಲಿ ನನ್ನ ಶರೀರವನ್ನು ತಪಸ್ಸಿನ ಮೂಲಕ ಒಣಗಿಸಿಬಿಡುವೆನು. ಈಗ ನಾನು ಬೇರೆ ಏನನ್ನೂ ಬಯಸದೆ ಇದನ್ನೇ ಸಾಧಿಸುವ ಈ ಸ್ಥಿತಿಗೆ ತಲುಪಿರುವೆನು.॥ ೨೯ ॥ ಮೂರು ಲೋಕಗಳ ಒಡೆಯ ಹಾಗೂ ದೇವತೆಗಳೆಲ್ಲರೂ ನನ್ನ ಈ ಸಂಕಲ್ಪವನ್ನು ಅನುಮೋದಿಸಲಿ. ಈಗ ನಿರಾಶನಾಗುವ ಯಾವುದೇ ಮಾತಿಲ್ಲ, ಏಕೆಂದರೆ, ಖಟ್ವಾಂಗರಾಜನು ಕೇವಲ ಎರಡೇ ಗಳಿಗೆಯಲ್ಲಿ ಭಗವದ್ಧಾಮವನ್ನು ಪಡೆದುಕೊಂಡು ಬಿಟ್ಟಿದ್ದನು.॥೩೦॥

*ಶ್ರೀಭಗವಾನುವಾಚ*

**ಇತ್ಯಭಿಪ್ರೇತ್ಯ ಮನಸಾ ಹ್ಯಾವಂತ್ಯೋ ದ್ವಿಜಸತ್ತಮಃ ।**
**ಉನ್ಮುಚ್ಯ ಹೃದಯಗ್ರಂಥೀನ್ ಶಾಂತೋ ಭಿಕ್ಷುರಭೂನ್ಮುನಿಃ ॥ ೩೧ ॥**

**ಸ ಚಚಾರ ಮಹೀಮೇತಾಂ ಸಂಯತಾತ್ಮೇಂದ್ರಿಯಾನಿಲಃ ।**
**ಭಿಕ್ಷಾರ್ಥಂ ನಗರಗ್ರಾಮಾನಸಂಗೋಽಲಕ್ಷಿತೋಽವಿಶತ್ ॥ ೩೨ ॥**

**ತಂ ವೈ ಪ್ರವಯಸಂ ಭಿಕ್ಷುಮವಧೂತಮಸಜ್ಜನಾಃ ।**
**ದೃಷ್ಟ್ವಾ ಪರ್ಯಭವನ್ಭದ್ರ ಬಹ್ವೀಭಿಃ ಪರಿಭೂತಿಭಿಃ ॥ ೩೩ ॥**

**ಕೇಚಿತ್ತ್ರಿವೇಣುಂ ಜಗೃಹುರೇಕೇ ಪಾತ್ರಂ ಕಮಂಡಲುಮ್ ।**
**ಪೀಠಂ ಚೈಕೇಽಕ್ಷಸೂತ್ರಂ ಚ ಕಂಥಾಂ ಚೀರಾಣಿ ಕೇಚನ ॥ ೩೪ ॥**

**ಪ್ರದಾಯ ಚ ಪುನಸ್ತಾನಿ ದರ್ಶಿತಾನ್ಯಾದದುರ್ಮುನೇಃ ।**
**ಅನ್ನಂ ಚ ಭೈಕ್ಷ್ಯ ಸಂಪನ್ನಂ ಭುಂಜಾನಸ್ಯ ಸರಿತ್ತಟೇ ॥ ೩೫ ॥**

**ಮೂತ್ರಯಂತಿ ಚ ಪಾಪಿಷ್ಠಾಃ ಷ್ಠೀವಂತ್ಯಸ್ಯ ಚ ಮೂರ್ಧನಿ ।**
**ಯತವಾಚಂ ವಾಚಯಂತಿ ತಾಡಯಂತಿ ನ ವಕ್ತಿ ಚೇತ್ ॥ ೩೬ ॥**

**ತರ್ಜಯಂತ್ಯಪರೇ ವಾಗ್ಭಿಃ ಸ್ತೇನೋಽಯಮಿತಿ ವಾದಿನಃ ।**
**ಬಧ್ನಂತಿ ರಜ್ಜ್ವಾ ತಂ ಕೇಚಿದ್ಬಧ್ಯತಾಂ ಬಧ್ಯತಾಮಿತಿ ॥ ೩೭ ॥**

**ಕ್ಷಿಪಂತ್ಯೇಕೇಽವಜಾನಂತ ಏಷ ಧರ್ಮಧ್ವಜಃ ಶಠಃ ।**
**ಕ್ಷೀಣವಿತ್ತ ಇಮಾಂ ವೃತ್ತಿಮಗ್ರಹೀತ್ಸ್ವಜನೋಜ್ಝಿತಃ ॥ ೩೮ ॥**

**ಅಹೋ ಏಷ ಮಹಾಸಾರೋ ಧೃತಿಮಾನ್ ಗಿರಿರಾಡಿವ ।**
**ಮೌನೇನ ಸಾಧಯತ್ಯರ್ಥಂ ಬಕವದ್ದೃಢನಿಶ್ಚಯಃ ॥ ೩೯ ॥**

**ಇತ್ಯೇಕೇ ವಿಹಸಂತ್ಯೇನಮೇಕೇ ದುರ್ವಾತಯಂತಿ ಚ ।**
**ತಂ ಬಬಂಧುರ್ನಿರುರುಧುರ್ಯಥಾ ಕ್ರೀಡನಕಂ ದ್ವಿಜಮ್ ॥ ೪೦ ॥**

**ಭಗವಾನ್ ಶ್ರೀಕೃಷ್ಣನು ಹೇಳುತ್ತಾನೆ** – ಉದ್ಧವನೇ! ಆ ಉಜ್ಜೈನಿಯ ನಿವಾಸಿ ಬ್ರಾಹ್ಮಣನು 'ನಾನು ಮತ್ತು ನನ್ನದು ಎಂಬ ಗಂಟನ್ನು ಬಿಚ್ಚಿಬಿಟ್ಟಿರುವೆನು' ಎಂದು ಮನಸ್ಸಿನಲ್ಲೇ ನಿಶ್ಚಯಿಸಿದನು. ಅನಂತರ ಅವನು ಶಾಂತವಾಗಿ, ಮೌನೀ ಸಂನ್ಯಾಸಿಯಾಗಿ ಹೋದನು. ॥ ೩೧ ॥ ಈಗ ಅವನ ಚಿತ್ತದಲ್ಲಿ ಯಾವುದೇ ಸ್ಥಾನ, ವಸ್ತು, ವ್ಯಕ್ತಿಯ ಕುರಿತು ಆಸಕ್ತಿ ಉಳಿಯಲಿಲ್ಲ, ಅವನು ತನ್ನ ಮನ, ಇಂದ್ರಿಯ, ಪ್ರಾಣಗಳನ್ನು ವಶಪಡಿಸಿಕೊಂಡನು. ಅವನು ಪೃಥ್ವಿಯಲ್ಲಿ ಸ್ವಚ್ಛಂದವಾಗಿ ವಿಚರಿಸತೊಡಗಿದನು. ಅವನು ಭಿಕ್ಷೆಗಾಗಿ ಊರು-ನಗರಕ್ಕೆ ಅವಶ್ಯವಾಗಿ ಹೋಗುತ್ತಿದ್ದನು. ಆದರೆ ಯಾರೂ ಅವನನ್ನು ಗುರುತಿಸದಂತೆ ಇರುತ್ತಿದ್ದನು. ॥ ೩೨ ॥ ಎಲೈ ಉದ್ಧವನೇ! ಆ ಅವಧೂತ ಸಂನ್ಯಾಸಿಯು ತುಂಬಾ ಮುದುಕನಾಗಿದ್ದನು. ದುಷ್ಟರು ಅವನನ್ನು ನೋಡುತ್ತಲೇ ಹರಿಹಾಯ್ದು ಬೀಳುತ್ತಿದ್ದರು. ಅನೇಕ ರೀತಿಯಿಂದ ಅವನ ತಿರಸ್ಕಾರಮಾಡುತ್ತಾ ಸತಾಯಿಸುತ್ತಿದ್ದರು. ॥ ೩೩ ॥ ಕೆಲವರು ಅವನ ದಂಡವನ್ನು ಕಿತ್ತುಕೊಂಡರೆ, ಕೆಲವರು ಭಿಕ್ಷಾಪಾತ್ರೆಯನ್ನು ಎತ್ತಿಕೊಂಡು ಹೋಗುತ್ತಿದ್ದರು. ಕೆಲವರು ಕಮಂಡಲು ಎತ್ತಿಹಾಕುತ್ತಿದ್ದರೆ, ಕೆಲವರು ಆಸನ, ರುದ್ರಾಕ್ಷಿಮಾಲೆ, ಕಂಥಾ (ಚಿಂದಿಬಟ್ಟೆಗಳಿಂದ ಮಾಡಿದ ಕೌದಿ) ತೆಗೆದುಕೊಂಡು ಓಡಿಹೋಗುತ್ತಿದ್ದರು. ಕೆಲವರಾದರೋ ಅವನ ಲಂಗೋಟಿ, ವಸ್ತ್ರವನ್ನೂ ಅತ್ತ-ಇತ್ತ ಎಸೆದುಬಿಡುತ್ತಿದ್ದರು. ॥ ೩೪ ॥ ಕೆಲ-ಕೆಲವರು ಆ ವಸ್ತುಗಳನ್ನು ಕೊಟ್ಟು, ಕೆಲವರು ಕರುಣೆತೋರಿಸಿ ಮತ್ತೆ ಕಿತ್ತುಕೊಳ್ಳುತ್ತಿದ್ದರು. ಆ ಅವಧೂತನು ಮಧುಕರಿಯನ್ನು ಬೇಡಿತಂದು, ನದೀತೀರದಲ್ಲಿ ಅದನ್ನು ತಿನ್ನಲು ಕುಳಿತರೆ, ಪಾಪೀ ಜನರು ಕೆಲವೊಮ್ಮೆ ಅವನ ತಲೆಯಮೇಲೆ ಮೂತ್ರವಿಸರ್ಜನೆ ಮಾಡಿಬಿಡುತ್ತಿದ್ದರೆ, ಕೆಲವರು ಉಗುಳಿಬಿಡುತ್ತಿದ್ದರು. ಆ ಜನರು ಆ ಮೌನೀ ಅವಧೂತನನ್ನು ಅನೇಕ ರೀತಿಯಿಂದ ಮಾತನಾಡುವಂತೆ ಕಾಡುತ್ತಿದ್ದರು. ಮಾತನಾಡದಿದ್ದಾಗ ಬಡಿಯುತ್ತಿದ್ದರು. ॥ ೩೫-೩೬ ॥ ಕೆಲವರು ಅವನನ್ನು ಕಳ್ಳನೆಂದು ಗದರಿಸಿ-ಬೆದರಿಸುತ್ತಿದ್ದರು. ಕೆಲವರು 'ಇವನನ್ನು ಕಟ್ಟಿಹಾಕಿ' ಎಂದು ಹೇಳುತ್ತಾ ಮತ್ತೆ ಅವನನ್ನು ಹಗ್ಗದಿಂದ ಕಟ್ಟಿಹಾಕುತ್ತಿದ್ದರು. ॥ ೩೭ ॥ ಕೆಲವರು ಅವನನ್ನು ತಿರಸ್ಕರಿಸುತ್ತಾ – 'ನೋಡಿ-ನೋಡಿ! ಈಗ ಈ ಲೋಭಿಯು ಧರ್ಮದ ಸೋಗು ಹಾಕಿಕೊಂಡಿರುವನು. ಧನ-ಸಂಪತ್ತೆಲ್ಲ ಹೋಯಿತು. ಪತ್ನೀ-ಪುತ್ರರು ಮನೆಯಿಂದ ಹೊರಗೆ ಹಾಕಿದರು. ಈಗ ಇವನು ಭಿಕ್ಷೆಎತ್ತುವ ವೃತ್ತಿಯನ್ನು ತನ್ನದಾಗಿಸಿಕೊಂಡಿರುವನು. ಆಹಾ! ನೋಡಿರಲ್ಲ! ಈ ಧಡಿಯ ಭಿಕ್ಷುಕ ಧೈರ್ಯದಲ್ಲಿ ದೊಡ್ಡ ಪರ್ವತದಂತೆ ಇದ್ದಾನೆ. ಇವನು ಮೌನವಾಗಿದ್ದು ತನ್ನ ಕೆಲಸವನ್ನು ಸಾಧಿಸಿಕೊಳ್ಳಲು ಬಯಸುತ್ತಿರುವನು. ನಿಜವಾಗಿಯೂ ಇವನು ಬಕಪಕ್ಷಿಗಿಂತಲೂ ಮಿಗಿಲಾದ ವಂಚಕ ಮತ್ತು ದೃಢನಿಶ್ಚಯಿಯಾಗಿದ್ದಾನೆ' ಎಂದು ಗಳಹುತ್ತಿದ್ದರು. ॥ ೩೮-೩೯ ॥ ಕೆಲವರು ಆ ಅವಧೂತನನ್ನು ಪರಿಹಾಸ್ಯ ಮಾಡಿದರೆ, ಕೆಲವರು ಅವನ ಮೇಲೆ ಅಧೋವಾಯು ಬಿಡುತ್ತಿದ್ದರು. ಸಾಕುಪಕ್ಷಿಗಳಾದ ಗಿಳಿ, ಮೈನಾ ಹಕ್ಕಿಗಳನ್ನು ಜನರು ಬಂಧಿಸಿ ಪಂಜರದಲ್ಲಿ ಕೂಡಿಹಾಕುವಂತೆ, ಅವನನ್ನು ಬಂಧಿಸಿ, ಮನೆಗಳಲ್ಲಿ ಕೂಡಿಹಾಕುತ್ತಿದ್ದರು. ॥ ೪೦ ॥

ಏವಂ ಸ ಭೌತಿಕಂ ದುಃಖಂ ದೈವಿಕಂ ದೈಹಿಕಂ ಚ ಯತ್ ।
ಭೋಕ್ತವ್ಯಮಾತ್ಮನೋ ದಿಷ್ಟಂ ಪ್ರಾಪ್ತಂ ಪ್ರಾಪ್ತಮಬುಧ್ಯತ ॥ ೪೧ ॥

ಪರಿಭೂತ ಇಮಾಂ ಗಾಥಾಮಗಾಯತ ನರಾಧಮೈಃ ।
ಪಾತಯದ್ಭಿಃ ಸ್ವಧರ್ಮಸ್ಥೋ ಧೃತಿಮಾಸ್ಥಾಯ ಸಾತ್ತ್ವಿಕೀಮ್ ॥ ೪೨ ॥

ದ್ವಿಜ ಉವಾಚ

ನಾಯಂ ಜನೋ ಮೇ ಸುಖದುಃಖಹೇತು-
ರ್ನ ದೇವತಾಽಽತ್ಮಾ ಗ್ರಹಕರ್ಮಕಾಲಾಃ ।
ಮನಃ ಪರಂ ಕಾರಣಮಾಮನಂತಿ
ಸಂಸಾರಚಕ್ರಂ ಪರಿವರ್ತಯೇದ್ ಯತ್ ॥ ೪೩ ॥

ಮನೋ ಗುಣಾನ್ ವೈ ಸೃಜತೇ ಬಲೀಯ-
ಸ್ತತಶ್ಚ ಕರ್ಮಾಣಿ ವಿಲಕ್ಷಣಾನಿ ।
ಶುಕ್ಲಾನಿ ಕೃಷ್ಣಾನ್ಯಥ ಲೋಹಿತಾನಿ
ತೇಭ್ಯಃ ಸವರ್ಣಾಃ ಸೃತಯೋ ಭವಂತಿ ॥ ೪೪ ॥

ಅನೀಹ ಆತ್ಮಾ ಮನಸಾ ಸಮೀಹತಾ
ಹಿರಣ್ಮಯೋ ಮತ್ಸಖ ಉದ್ವಿಚಷ್ಟೇ ।
ಮನಃ ಸ್ವಲಿಂಗಂ ಪರಿಗೃಹ್ಯ ಕಾಮಾನ್
ಜುಷನ್ ನಿಬದ್ಧೋ ಗುಣಸಂಗತೋಽಸೌ ॥ ೪೫ ॥

ದಾನಂ ಸ್ವಧರ್ಮೋ ನಿಯಮೋ ಯಮಶ್ಚ
ಶ್ರುತಂ ಚ ಕರ್ಮಾಣಿ ಚ ಸದ್ವ್ರತಾನಿ ।
ಸರ್ವೇ ಮನೋನಿಗ್ರಹಲಕ್ಷಣಾಂತಾಃ
ಪರೋ ಹಿ ಯೋಗೋ ಮನಸಃ ಸಮಾಧಿಃ ॥ ೪೬ ॥

ಆದರೆ ಅವನು ಬಾಯಿಮುಚ್ಚಿಕೊಂಡು ಎಲ್ಲವನ್ನೂ ಸಹಿಸುತ್ತಿದ್ದನು. ಅವನಿಗೆ ಕೆಲವೊಮ್ಮೆ ಜ್ವರಾದಿಗಳ ಕಾರಣ ದೈಹಿಕಪೀಡೆ ಸಹಿಸಬೇಕಾಗುತ್ತಿತ್ತು. ಕೆಲವೊಮ್ಮೆ ಚಳಿ-ಸೆಕೇ ಮುಂತಾದ ದೈವೀ ಕಷ್ಟಗಳನ್ನು ಅನುಭವಿಸಬೇಕಾಗುತ್ತಿತ್ತು. ಕೆಲವೊಮ್ಮೆ ದುರ್ಜನರು ಅಪಮಾನಾದಿಗಳಿಂದ ಅವನಿಗೆ ಭೌತಿಕಕಷ್ಟ ಕೊಡುತ್ತಿದ್ದರು. ಆದರೆ ಸಂನ್ಯಾಸಿಯ ಮನಸ್ಸಿನಲ್ಲಿ ಇವುಗಳ ಯಾವ ವಿಕಾರಗಳೂ ಆಗುತ್ತಿರಲಿಲ್ಲ. ಇವೆಲ್ಲವೂ ನನ್ನ ಹಿಂದಿನಜನ್ಮದ ಕರ್ಮಗಳ ಫಲವಾಗಿದೆ, ಇದನ್ನು ನಾನು ಅವಶ್ಯವಾಗಿ ಭೋಗಿಸಲೇಬೇಕಾಗುವುದು ಎಂದು ತಿಳಿಯುತ್ತಿದ್ದನು. ॥ ೪೧ ॥ ನೀಚ ಜನರು ಅನೇಕ ರೀತಿಯ ತಿರಸ್ಕಾರಗೈದು ಅವನನ್ನು ಅವನ ಧರ್ಮದಿಂದ ಪತನವಾಗಿಸಲು ಪ್ರಯತ್ನಿಸುತ್ತಿದ್ದರೂ, ಅವನು ಭಾರೀ ದೃಢತೆಯಿಂದ ತನ್ನ ಧರ್ಮದಲ್ಲಿ ಸ್ಥಿರವಾಗಿರುತ್ತಿದ್ದನು. ಅವನು ಸಾತ್ತ್ವಿಕ ಧೃತಿಯ * ಆಶ್ರಯ ಪಡೆದು ಗೀತೆಯೊಂದನ್ನು ಹೀಗೆ ಹಾಡಿದನು – ॥ ೪೨ ॥

**ಬ್ರಾಹ್ಮಣನೆಂದನು** – ನನ್ನ ಸುಖ ಅಥವಾ ದುಃಖದ ಕಾರಣರು ಈ ಮನುಷ್ಯರಾಗಲೀ, ದೇವತೆಗಳಾಗಲೀ, ಶರೀರವಾಗಲೀ, ಗ್ರಹಗಳಾಗಲೀ, ಕರ್ಮವಾಗಲೀ, ಕಾಲವಾಗಲೀ, ಯಾವುದೂ ಅಲ್ಲ. ಶ್ರುತಿಗಳು, ಮಹಾತ್ಮರು ಮನಸ್ಸನ್ನೇ ಇದರ ಪರಮ ಕಾರಣವೆಂದು ಹೇಳುತ್ತಾರೆ. ಮನಸ್ಸೇ ಈ ಸಂಸಾರಚಕ್ರದಲ್ಲಿ ಜೀವಿಯನ್ನು ಅಲೆಸುತ್ತದೆ. ॥ ೪೩ ॥ ನಿಜವಾಗಿಯೂ ಈ ಮನಸ್ಸು ಬಹಳ ಬಲಿಷ್ಠವಾಗಿದೆ. ಇದೇ ವಿಷಯಗಳನ್ನು, ಅವುಗಳ ಕಾರಣ ಗುಣಗಳನ್ನು, ಅವುಗಳೊಂದಿಗೆ ಸಂಬಂಧವಿರಿಸುವ ವೃತ್ತಿಗಳನ್ನು ಸೃಷ್ಟಿಸಿದೆ. ಆ ವೃತ್ತಿಗಳ ಅನುಸಾರವೇ ಸಾತ್ತ್ವಿಕ, ರಾಜಸ, ತಾಮಸ ಹೀಗೆ ಅನೇಕ ಪ್ರಕಾರದ ಕರ್ಮಗಳು ನಡೆಯುತ್ತವೆ. ಕರ್ಮಗಳನುಸಾರವೇ ಜೀವಿಯ ವಿವಿಧ ಗತಿಗಳಾಗುತ್ತವೆ. ॥ ೪೪ ॥ ಮನಸ್ಸಿನ ವೃತ್ತಿಗಳ ಮೂಲಕವೇ ಕರ್ಮ ಪರಂಪರೆ ಉಂಟಾಗುತ್ತದೆ. ಆತ್ಮನಾದರೋ ನಿಷ್ಕ್ರಿಯನಾಗಿ, ಕರ್ಮಗಳ ಸಂಗದಿಂದ ರಹಿತನಾಗಿದ್ದಾನೆ. ಹಿರಣ್ಮಯ ಅರ್ಥಾತ್ – ವಿಜ್ಞಾನಸ್ವರೂಪಿಯಾಗಿದ್ದು, ಜೀವಿಯ ಸಖನಾಗಿರುವನು. ಸಾಕ್ಷಿರೂಪದಿಂದ ಎಚ್ಚರವಾಗಿದ್ದು ಜೀವಿಯನ್ನು ನೋಡುತ್ತಿರುತ್ತಾನೆ. ಆದರೆ ಜೀವಿಯು ಅಹಂಭಾವದಿಂದ ಮನಸ್ಸನ್ನು ಜೊತೆಯಾಗಿಸಿಕೊಂಡು ತನ್ನಲ್ಲಿಯೇ ಅನೇಕ ಪ್ರಕಾರದ ಗುಣವೃತ್ತಿಗಳನ್ನು ಕಲ್ಪಿಸಿಕೊಳ್ಳುತ್ತಾನೆ. ಅವುಗಳಲ್ಲಿ ಆಸಕ್ತನಾಗಿ ಸ್ವಯಂ ಬಂಧಿತನಾಗುತ್ತಾನೆ. ಈ ವಿಧವಾಗಿ ಮನಸ್ಸಿಗೆ ವಶೀಭೂತನಾಗಿ ಜೀವಿಯು ಅಲೆಯುತ್ತಾ ಇರುತ್ತಾನೆ. ॥ ೪೫ ॥ ದಾನ ಕೊಡುವುದು, ಸ್ವಧರ್ಮವನ್ನು ಪಾಲಿಸುವುದು, ಯಮ-ನಿಯಮಗಳನ್ನು ಪಾಲಿಸುವುದು, ವೇದಾಧ್ಯಯನ, ಒಳ್ಳೆಯ ವ್ರತಗಳನ್ನು ಪಾಲಿಸುವುದು, ವೇದಗಳಲ್ಲಿ ಹೇಳಿರುವ ಸತ್ಕರ್ಮಗಳು – ಹೀಗೆ ಇವೆಲ್ಲವೂ ಶುಭ ಕರ್ಮಗಳು. ಇವುಗಳಿಂದ ಮನಸ್ಸನ್ನು ವಶಪಡಿಸಲಾಗುತ್ತದೆ. ಇವೆಲ್ಲವನ್ನೂ ಮನಸ್ಸಿನ ನಿಗ್ರಹವಾಗುವ ತನಕ ಮಾಡಲೇ ಬೇಕು. ಆದರೆ ಮನಸ್ಸಿನ ಏಕಾಕಾರ ವೃತ್ತಿಯನ್ನು ಭಗವಂತನಲ್ಲಿ ತೊಡಗಿಸುವುದು ಪರಮ ಯೋಗವಾಗಿದೆ. ಮನಸ್ಸಿನ ಈ ಪ್ರಕಾರದ ಸಮಾಧಿ ಸ್ಥಿತಿ ಉಂಟಾದಮೇಲೆ ಬೇರೆ ಯಾವುದರ ಆವಶ್ಯಕತೆಯು ಉಳಿಯುವುದಿಲ್ಲ. ॥ ೪೬ ॥ ಯಾರ ಮನಸ್ಸು ಸುಸಂಯತವಾಗಿ

* ಸಾತ್ತ್ವಿಕ ಧೃತಿಯ ಲಕ್ಷಣ ಗೀತೆ ೧೮/೩೩ರಲ್ಲಿ ನೋಡಬೇಕು.

ಸಮಾಹಿತಂ ಯಸ್ಯ ಮನಃ ಪ್ರಶಾಂತಂ
　ದಾನಾದಿಭಿಃ ಕಿಂ ವದ ತಸ್ಯ ಕೃತ್ಯಮ್ ।
ಅಸಂಯತಂ ಯಸ್ಯ ಮನೋವಿನಶ್ಯದ್
　ದಾನಾದಿಭಿಶ್ಚೇದಪರಂ ಕಿಮೇಭಿಃ ॥ ೪೭ ॥

ಮನೋವಶೇಽನ್ಯೇ ಹ್ಯಭವನ್ ಸ್ಮ ದೇವಾ
　ಮನಶ್ಚ ನಾನ್ಯಸ್ಯ ವಶಂ ಸಮೇತಿ ।
ಭೀಷ್ಮೋ ಹಿ ದೇವಃ ಸಹಸಃ ಸಹೀಯಾನ್
　ಯುಂಜ್ಯಾದ್ವಶೇ ತಂ ಸ ಹಿ ದೇವದೇವಃ ॥ ೪೮ ॥

ತಂ ದುರ್ಜಯಂ ಶತ್ರುಮಸಹ್ಯವೇಗ-
　ಮರುಂತುದಂ ತನ್ನ ವಿಜಿತ್ಯ ಕೇಚಿತ್ ।
ಕುರ್ವಂತ್ಯಸದ್ವಿಗ್ರಹಮತ್ರ ಮರ್ತ್ಯೈ-
　ರ್ಮಿತ್ರಾಣ್ಯುದಾಸೀನರಿಪೂನ್ ವಿಮೂಢಾಃ ॥ ೪೯ ॥

ದೇಹಂ ಮನೋಮಾತ್ರಮಿಮಂ ಗೃಹೀತ್ವಾ
　ಮಮಾಹಮಿತ್ಯಂಧಧಿಯೋ ಮನುಷ್ಯಾಃ ।
ಏಷೋಽಹಮನ್ಯೋಽಯಮಿತಿ ಭ್ರಮೇಣ
　ದುರಂತಪಾರೇ ತಮಸಿ ಭ್ರಮಂತಿ ॥ ೫೦ ॥

ಜನಸ್ತು ಹೇತುಃ ಸುಖದುಃಖಯೋಶ್ಚೇತ್
　ಕಿಮಾತ್ಮನಶ್ಚಾತ್ರ ಹ ಭೌಮಯೋಸ್ತತ್ ।
ಜಿಹ್ವಾಂ ಕ್ವಚಿತ್ ಸಂದಶತಿ ಸ್ವದದ್ಭಿಃ
　ತದ್ವೇದನಾಯಾಂ ಕತಮಾಯ ಕುಪ್ಯೇತ್ ॥ ೫೧ ॥

ದುಃಖಸ್ಯ ಹೇತುರ್ಯದಿ ದೇವತಾಸ್ತು
　ಕಿಮಾತ್ಮನಸ್ತತ್ರ ವಿಕಾರಯೋಸ್ತತ್ ।
ಯದಂಗಮಂಗೇನ ನಿಹನ್ಯತೇ ಕ್ವಚಿತ್
　ಕ್ರುಧ್ಯೇತ ಕಸ್ಮೈ ಪುರುಷಃ ಸ್ವದೇಹೇ ॥ ೫೨ ॥

ಆತ್ಮಾ ಯದಿ ಸ್ಯಾತ್ಸುಖದುಃಖಹೇತುಃ
　ಕಿಮನ್ಯತಸ್ತತ್ರ ನಿಜಸ್ವಭಾವಃ ।
ನ ಹ್ಯಾತ್ಮನೋಽನ್ಯದ್ಯದಿ ತನ್ಮೃಷಾ ಸ್ಯಾತ್
　ಕ್ರುಧ್ಯೇತ ಕಸ್ಮಾನ್ನ ಸುಖಂ ನ ದುಃಖಮ್ ॥ ೫೩ ॥

ಪೂರ್ಣಶಾಂತವಾಗಿದೆಯೋ, ಅವನಿಗಾಗಿ ದಾನಾದಿ ಯಾವುದೇ ಕೃತ್ಯಗಳೂ ಕೂಡ ಬಾಕಿ ಉಳಿಯುವುದಿಲ್ಲ. ಯಾರ ಮನಸ್ಸು ವಶವಾಗಿಲ್ಲವೋ, ಅತ್ತ-ಇತ್ತ ಅಲೆಯುತ್ತಿದೆಯೋ, ಅವನಿಗೆ ದಾನಾದಿ ಕರ್ಮಗಳಿಂದಲೂ ಏನು ಲಾಭ ? ॥ ೪೭ ॥ ಮನಸ್ಸು ತನ್ನ ವಶವಾದಮೇಲೆ ಬೇರೆ ಇಂದ್ರಿಯಗಳ ದೇವತೆಗಳೂ ವಶರಾಗುತ್ತಾರೆ. ಇಂದ್ರಿಯಗಳು ಮನಸ್ಸನ್ನು ವಶಪಡಿಸಿ ಕೊಳ್ಳಲಾರವು. ಏಕೆಂದರೆ, ಮನಸ್ಸು ಬಲಿಷ್ಠರಲ್ಲಿ ಬಲಿಷ್ಠವಾಗಿದೆ. ಈ ಮನಸ್ಸಿನ ಮೇಲೆ ಹತೋಟಿ ಪಡೆಯುವವನು ದೇವತೆಗಳಿಗೂ ದೇವನಾಗುತ್ತಾನೆ. ॥ ೪೮ ॥ ನಿಜವಾಗಿಯೂ ಮನಸ್ಸು ಬಹು ದೊಡ್ಡ ಶತ್ರುವಾಗಿದೆ. ಇದರ ಆಕ್ರಮಣ ಅಸಹ್ಯವಾಗಿದೆ. ಇದು ಹೊರಗಿನ ಶರೀರವನ್ನೇ ಅಲ್ಲ, ಹೃದಯಾದಿ ಮರ್ಮಸ್ಥಾನಗಳನ್ನೂ ಭೇದಿಸುತ್ತದೆ. ಇದನ್ನು ಗೆಲ್ಲುವುದು ತುಂಬಾ ಕಠಿಣವಾಗಿದೆ. ಮನುಷ್ಯನು ಮೊಟ್ಟಮೊದಲಿಗೆ ಈ ಶತ್ರುವಿನ ಮೇಲೆ ವಿಜಯವನ್ನು ಪಡೆಯಬೇಕು. ಆದರೆ ಮೂರ್ಖಜನರು ಇದನ್ನು ಗೆಲ್ಲುವ ಪ್ರಯತ್ನವನ್ನೇ ಮಾಡುವುದಿಲ್ಲ. ಬೇರೆ ಮನುಷ್ಯರೊಂದಿಗೆ ಸುಳ್ಳು-ಸುಳ್ಳೇ ಜಗಳಕಾದು, ಈ ಜಗತ್ತಿನ ಜನರನ್ನೇ ಮಿತ್ರ-ಶತ್ರು – ಉದಾಸೀನರಾಗಿಸಿಕೊಳ್ಳುವರು. ॥ ೪೯ ॥ ಸಾಧಾರಣವಾಗಿ ಮನುಷ್ಯರ ಬುದ್ಧಿಯು ಕುರುಡಾಗಿರುತ್ತದೆ. ಅದರಿಂದಲೇ ಅವರು ಈ ಮನಃಕಲ್ಪಿತ ಶರೀರವನ್ನು 'ನಾನು–ನನ್ನದು' ಎಂದು ತಿಳಿದುಕೊಳ್ಳುತ್ತಾರೆ. ಮತ್ತೆ 'ಇದು ನಾನಾಗಿದ್ದೇನೆ – ಇದು ಬೇರೆಯಾಗಿದೆ' ಎಂಬ ಭ್ರಮೆಯ ಉರುಳಿನಲ್ಲಿ ಸಿಕ್ಕಿಹಾಕಿ ಕೊಳ್ಳುತ್ತಾರೆ. ಇದರ ಪರಿಣಾಮವಾಗಿ ಅವರು ಈ ಅನಂತ ಅಜ್ಞಾನಾಂಧಕಾರದಲ್ಲೇ ಅಲೆಯುತ್ತಾ ಇರುತ್ತಾರೆ. ॥ ೫೦ ॥ ಮನುಷ್ಯನೇ ಸುಖ–ದುಃಖಗಳಿಗೆ ಕಾರಣನಾಗಿದ್ದಾನೆ ಎಂದು ಒಪ್ಪಿಕೊಂಡರೂ ಅದರಲ್ಲಿ ಆತ್ಮನ ಸಂಬಂಧವೇನಿದೆ ? ಏಕೆಂದರೆ ಸುಖ–ದುಃಖಗಳನ್ನು ಕೊಡುವುದು ಮೃಣ್ಮಯಶರೀರವೇ ಆಗಿದೆ. ಭೋಗಿಸುವವನೂ ಮಣ್ಣಿನ ಶರೀರವೇ. ಎಂದಾದರೂ ಊಟದ ಸಮಯ ತನ್ನ ಹಲ್ಲುಗಳಿಂದಲೇ ತನ್ನ ನಾಲಿಗೆಯನ್ನು ಕಚ್ಚಿಕೊಂಡು ನೋವು ಉಂಟಾದರೆ ಮನುಷ್ಯನು ಯಾರ ಮೇಲೆ ಸಿಟ್ಟು ಮಾಡುವನು ? ॥ ೫೧ ॥ ದುಃಖವನ್ನು ಕೊಡುವುದರಲ್ಲಿ ದೇವತೆಗಳನ್ನು ಕಾರಣವೆಂದು ಒಪ್ಪಿಕೊಂಡರೆ, ಆದರಲ್ಲಿ ಆತ್ಮನ ಸಂಬಂಧವೇನಿದೆ ? ಏಕೆಂದರೆ, ಎಲ್ಲರ ಶರೀರಗಳಲ್ಲಿ ಇಂದ್ರಿಯಾಭಿಮಾನಿ ದೇವತೆಗಳು ಒಂದೇ ಆಗಿವೆ. ಇಂದ್ರಿಯದ ದೇವತೆಯು ಇನ್ನೊಂದು ಇಂದ್ರಿಯದ ದೇವತೆಗೆ ಕಷ್ಟಕೊಟ್ಟರೆ ಇದರಿಂದ ಆತ್ಮನ ಹಾನಿ ಏನಾಯಿತು ? ತನ್ನದೇ ಒಂದು ಅವಯವ ಇನ್ನೊಂದು ಅವಯವಕ್ಕೆ ತೊಂದರೆ ಕೊಟ್ಟರೆ ಯಾರಮೇಲೆ ಸಿಟ್ಟಾಗುವುದು ? ॥ ೫೨ ॥ ಆತ್ಮನನ್ನೇ ಸುಖ–ದುಃಖದ ಕಾರಣವೆಂದು ಒಪ್ಪಿಕೊಂಡರೆ ಬೇರೆಯವರಿಂದ ಅವನಿಗೆ ಏನು ಸಂಬಂಧವಿದೆ ? ಏಕೆಂದರೆ ಆತ್ಮನಾದರೋ ತನ್ನ ಸ್ವರೂಪವೇ ಆಗಿದೆ. ಆತ್ಮವಲ್ಲದೆ ಬೇರೆ ಏನೂ ಇಲ್ಲವೇ ಇಲ್ಲ. ಕಂಡುಬರುವುದೆಲ್ಲವೂ ಮಿಥ್ಯೆಯೇ ಆಗಿದೆ. ಆತ್ಮನು ಆನಂದ ಸ್ವರೂಪನಾಗಿದ್ದಾನೆ. ಅಲ್ಲಿ ಸುಖ–ದುಃಖ ಎರಡೂ ಇಲ್ಲ. ಹಾಗಾದರೆ ಸಿಟ್ಟು ಯಾರಮೇಲೆ ಮಾಡುವುದು ? ॥ ೫೩ ॥

ಗ್ರಹಾ ನಿಮಿತ್ತಂ ಸುಖದುಃಖಯೋಶ್ಚೇತ್
ಕಿಮಾತ್ಮನೋಽಜಸ್ಯ ಜನಸ್ಯ ತೇ ವೈ ।
ಗ್ರಹೈರ್ಗ್ರಹಸ್ಯೈವ ವದಂತಿ ಪೀಡಾಂ
ಕ್ರುಧ್ಯೇತ ಕಸ್ಮೈ ಪುರುಷಸ್ತತೋಽನ್ಯಃ ॥ ೫೪ ॥

ಕರ್ಮಾಸ್ತು ಹೇತುಃ ಸುಖದುಃಖಯೋಶ್ಚೇತ್
ಕಿಮಾತ್ಮನಸ್ತದ್ಧಿ ಜಡಾಜಡತ್ವೇ ।
ದೇಹಸ್ತ್ವಚಿತ್ ಪುರುಷೋಽಯಂ ಸುಪರ್ಣಃ
ಕ್ರುಧ್ಯೇತ ಕಸ್ಮೈ ನ ಹಿ ಕರ್ಮಮೂಲಮ್ ॥ ೫೫ ॥

ಕಾಲಸ್ತು ಹೇತುಃ ಸುಖದುಃಖಯೋಶ್ಚೇತ್
ಕಿಮಾತ್ಮನಸ್ತತ್ರ ತದಾತ್ಮಕೋಽಸೌ ।
ನಾಗ್ನೇರ್ಹಿ ತಾಪೋ ನ ಹಿಮಸ್ಯ ತತ್ ಸ್ಯಾತ್
ಕ್ರುಧ್ಯೇತ ಕಸ್ಮೈ ನ ಪರಸ್ಯ ದ್ವಂದ್ವಮ್ ॥ ೫೬ ॥

ನ ಕೇನಚಿತ್ ಕ್ವಾಪಿ ಕಥಂಚನಾಸ್ಯ
ದ್ವಂದ್ವೋಪರಾಗಃ ಪರತಃ ಪರಸ್ಯ ।
ಯಥಾಹಮಃ ಸಂಸೃತಿರೂಪಿಣಃ ಸ್ಯಾ-
ದೇವಂ ಪ್ರಬುದ್ಧೋ ನ ಬಿಭೇತಿ ಭೂತೈಃ ॥ ೫೭ ॥

ಏತಾಂ ಸ ಆಸ್ಥಾಯ ಪರಾತ್ಮನಿಷ್ಠಾ-
ಮಧ್ಯಾಸಿತಾಂ ಪೂರ್ವತಮೈರ್ಮಹರ್ಷಿಭಿಃ ।
ಅಹಂ ತರಿಷ್ಯಾಮಿ ದುರಂತಪಾರಂ
ತಮೋ ಮುಕುಂದಾಂಘ್ರಿನಿಷೇವಯೈವ ॥ ೫೮ ॥

*ಶ್ರೀಭಗವಾನುವಾಚ*

ನಿರ್ವಿದ್ಯ ನಷ್ಟದ್ರವಿಣೋ ಗತಕ್ಲಮಃ
ಪ್ರವ್ರಜ್ಯ ಗಾಂ ಪರ್ಯಟಮಾನ ಇತ್ಥಮ್ ।
ನಿರಾಕೃತೋಽಸದ್ಭಿರಪಿ ಸ್ವಧರ್ಮಾ-
ದಕಂಪಿತೋಽಮುಂ ಮುನಿರಾಹ ಗಾಥಾಮ್ ॥ ೫೯ ॥

ಸುಖ-ದುಃಖಗಳನ್ನು ಕೊಡುವವರು ಗ್ರಹಗಳು ಎಂದು ಒಪ್ಪಿಕೊಂಡರೆ, ಅಜನ್ಮಾ ಆತ್ಮನಿಗೆ ಸುಖ-ದುಃಖಗಳನ್ನು ಕೊಡಲು ಅವು ಕಾರಣವಾಗಲಾರರು. ಏಕೆಂದರೆ, ಹುಟ್ಟಿದವನಿಗೇ ಗ್ರಹಗಳು ಪೀಡೆ ಕೊಡಬಲ್ಲರು. ಆತ್ಮನು ಶಾಶ್ವತನಾಗಿದ್ದಾನೆ. ಶರೀರ ನಾಶವುಳ್ಳದ್ದಾಗಿದೆ. ಆದ್ದರಿಂದ ಗ್ರಹಗಳ ಪ್ರಭಾವ ಶರೀರದ ಮೇಲೆಯೇ ಬೀಳಬಲ್ಲದು. ಆತ್ಮನಿಗೆ ಅದರೊಂದಿಗೆ ಯಾವ ಸಂಬಂಧವೂ ಇಲ್ಲ. ಹಾಗಾದರೆ ಕ್ರೋಧ ಯಾರ ಮೇಲೆ ಮಾಡುವುದು ? ॥ ೫೪ ॥ ಕರ್ಮಗಳನ್ನೇ ಸುಖ-ದುಃಖದ ಕಾರಣವೆಂದು ಒಪ್ಪಿಕೊಂಡರೆ, ಅವುಗಳೊಂದಿಗೆ ಆತ್ಮನ ಸಂಬಂಧ ಏನಿದೆ ? ಏಕೆಂದರೆ ಆತ್ಮನು ಸಾಕ್ಷಿಯಾಗಿದ್ದಾನೆ, ಶುದ್ಧ ಜ್ಞಾನ ಸ್ವರೂಪನಾಗಿದ್ದಾನೆ. ಜಡ ಮತ್ತು ಚೇತನಗಳು ಸೇರದೇ ಕರ್ಮ ಸಂಭವವಿಲ್ಲ, ಅವನು ಕರ್ಮಗಳಿಂದ ಸರ್ವಥಾ ನಿರ್ಲಿಪ್ತನಾಗಿರುವನು. ದೇಹವು ಜಡವಾಗಿರುವುದರಿಂದ ಏನೂ ಮಾಡುವುದಿಲ್ಲ, ಆದೇ ರೀತಿ ಆತ್ಮ ಚೇತನವಾಗಿದೆ. ಆದ್ದರಿಂದ ಕರ್ಮಗಳ ಸಂಬಂಧವಿಲ್ಲ.ಹೀಗೆ ಕರ್ಮಮೂಲಕ ಸುಖ-ದುಃಖಗಳು ಮತ್ತು ಆತ್ಮನಿಗೆ ಯಾವ ಸಂಬಂಧವಿದೆ ? ಹಾಗೂ ಅವನು ಯಾರಮೇಲೆ ಸಿಟ್ಟುಮಾಡುವುದು? ॥ ೫೫ ॥ ಕಾಲವನ್ನು ಸುಖ-ದುಃಖವನ್ನು ಕೊಡುವವನೆಂದು ಒಪ್ಪಿಕೊಂಡರೆ ಕಾಲ ಮತ್ತು ಆತ್ಮಾ ಒಂದೇ ಆಗಿದೆ. ಈ ರೀತಿ ಆತ್ಮನಿಂದ ಆತ್ಮನಿಗೆ ಕಷ್ಟವಾಗುವುದಿಲ್ಲ, ಅಗ್ನಿಗೆ ಅಗ್ನಿಯಿಂದ ತಾಪವಾಗುವುದಿಲ್ಲ, ಮಂಜುಗಡ್ಡೆಯಿಂದ ಮಂಜುಗಡ್ಡೆಗೆ ಶೀತಲತೆ ಬಾಧಿಸದು. ಹಾಗೆಯೇ ಆತ್ಮನಿಗೂ ಸುಖ-ದುಃಖಾದಿ ದ್ವಂದ್ವಗಳು ಇಲ್ಲ, ಇಂತಹ ಸ್ಥಿತಿಯಲ್ಲಿ ಸಿಟ್ಟು ಯಾರಮೇಲೆ ಮಾಡುವುದು ? ॥ ೫೬ ॥ ಪ್ರಕೃತಿಯಿಂದಲೂ ಅತೀತನಾದ ಆತ್ಮನಿಗೆ ಯಾರಿಂದಲೂ, ಯಾವರೀತಿಯಿಂದಲೂ ದ್ವಂದ್ವಗಳ ಸ್ಪರ್ಶವಾಗುವುದಿಲ್ಲ, ಇರುವ ಈ ಅಹಂಕಾರವೇ ಸಂಸೃತಿ (ಸಂಸಾರ)ರೂಪವಾಗಿದೆ. ಆದರಿಂದಲೇ ದ್ವಂದ್ವಗಳು ಉಂಟಾಗುತ್ತವೆ. ಈ ದ್ವಂದ್ವಗಳಿಂದ ಜನ್ಮ ಮೃತ್ಯು ಉಂಟಾಗುತ್ತದೆ. ಆದರೆ ಆತ್ಮಾ ಈ ದ್ವಂದ್ವಗಳಿಂದ ಮುಕ್ತವಾಗಿದೆ. ಹೀಗೆ ತಿಳಿದುಕೊಂಡ ಯೋಗಿಯು ಯಾವ ಪ್ರಾಣಿಗೂ ಹೆದರುವುದಿಲ್ಲ ॥ ೫೭ ॥ ಹಿಂದೆ ಮಹರ್ಷಿಗಳು ಆಶ್ರಯಿಸಿದ ಅಧ್ಯಾತ್ಮ-ನಿಷ್ಠೆಯನ್ನೇ ನಾನೂ ಆಶ್ರಯ ಪಡೆಯುವೆನು. ಈ ಪ್ರಕಾರ ಭಗವಾನ್ ಮುಕುಂದನ ಚರಣಕಮಲಗಳ ಸೇವೆಯ ಪ್ರಭಾವದಿಂದ ಈ ಅಜ್ಞಾನರೂಪೀ ಅಗಾಧ ಸಂಸಾರಸಾಗರವನ್ನು ದಾಟಿ ಹೋಗುವೆನು. ॥ ೫೮ ॥

**ಭಗವಾನ್ ಶ್ರೀಕೃಷ್ಣನು ಹೇಳುತ್ತಾನೆ –** ಎಲೈ ಉದ್ಧವನೇ ! ಆ ಅವಧೂತ ಬ್ರಾಹ್ಮಣನು ನಷ್ಟವಾಗಿ ಹೋದ ಧನದ ಕ್ಲೇಶವನ್ನೂ ಪೂರ್ಣವಾಗಿ ಕಳೆದುಕೊಂಡನು. ಈಗ ಅವನು ಪ್ರಪಂಚದಿಂದ ವಿರಕ್ತನಾಗಿದ್ದು ಸಂನ್ಯಾಸಿಯಾಗಿ ಭೂಮಿಯಲ್ಲಿ ಸ್ವಚ್ಛಂದವಾಗಿ ವಿಚರಿಸುತ್ತಿದ್ದನು. ದುಷ್ಟರು ಅವನನ್ನು ಬಹಳವಾಗಿ ಕಾಡಿದರೂ ಅವನು ತನ್ನ ಧರ್ಮದಿಂದ ವಿಚಲಿತನಾಗದೇ ಅಚಲವಾಗಿದ್ದನು. ಆಗ ಆ ಮೌನೀ ಅವಧೂತನು ಮನಸ್ಸಿನಲ್ಲೇ ಈ ಮೇಲಿನ ಗೀತೆಯನ್ನು ಹಾಡಿದ್ದನು. ॥ ೫೯ ॥

ಸುಖದುಃಖಪ್ರದೋ ನಾನ್ಯಃ ಪುರುಷಸ್ಯಾತ್ಮವಿಭ್ರಮಃ ।
ಮಿತ್ರೋದಾಸೀನರಿಪವಃ ಸಂಸಾರಸ್ತಮಸಃ ಕೃತಃ
॥ ೬೦ ॥

ಉದ್ಧವನೇ ! ಈ ಪ್ರಪಂಚದಲ್ಲಿ ಮನುಷ್ಯನಿಗೆ ಬೇರೆ ಯಾರೂ ಸುಖ-ದುಃಖಗಳನ್ನು ಕೊಡುವುದಿಲ್ಲ. ಇದಾದರೋ ಅವನ ಚಿತ್ತದ ಭ್ರಮೆಮಾತ್ರವಾಗಿದೆ. ಈ ಇಡೀ ಪ್ರಪಂಚ ಮತ್ತು ಇದರೊಳಗಿನ ಮಿತ್ರ, ಉದಾಸೀನ, ಶತ್ರು ಈ ಭೇದಗಳು ಅಜ್ಞಾನ ಕಲ್ಪಿತವಾಗಿವೆ. ॥ ೬೦ ॥

ತಸ್ಮಾತ್ ಸರ್ವಾತ್ಮನಾ ತಾತ ನಿಗೃಹಾಣ ಮನೋ ಧಿಯಾ ।
ಮಯ್ಯಾವೇಶಿತಯಾ ಯುಕ್ತ ಏತಾವಾನ್ಯೋಗಸಂಗ್ರಹಃ
॥ ೬೧ ॥

ಅದಕ್ಕಾಗಿ ಪ್ರಿಯ ಉದ್ಧವನೇ! ನಿನ್ನ ವೃತ್ತಿಗಳನ್ನು ನನ್ನಲ್ಲಿ ತನ್ಮಯಗೊಳಿಸು ಹಾಗೂ ನಿನ್ನ ಶಕ್ತಿಯೆಲ್ಲವನ್ನು ತೊಡಗಿಸಿ ಮನಸ್ಸನ್ನು ವಶಪಡಿಸಿಕೋ. ಮತ್ತೆ ನನ್ನಲ್ಲೇ ನಿತ್ಯ ಯುಕ್ತನಾಗಿ ಸ್ಥಿತನಾಗಿ ಬಿಡು, ಸಾಕು. ಎಲ್ಲ ಯೋಗಸಾಧನೆಯ ಸಾರ-ಸಂಗ್ರಹ ಇದೇ ಆಗಿದೆ. ॥ ೬೧ ॥

ಯ ಏತಾಂ ಭಿಕ್ಷುಣಾ ಗೀತಾಂ ಬ್ರಹ್ಮನಿಷ್ಠಾಂ ಸಮಾಹಿತಃ ।
ಧಾರಯನ್ ಶ್ರಾವಯನ್ ಶೃಣ್ವನ್ ದ್ವಂದ್ವೈರ್ನೈವಾಭಿಭೂಯತೇ
॥ ೬೨ ॥

ಈ ಭಿಕ್ಷು(ಸಂನ್ಯಾಸಿಯ) ಗೀತೆಯು ಮೂರ್ತಿಮಂತ ಬ್ರಹ್ಮಜ್ಞಾನ ನಿಷ್ಠೆಯೇ ಆಗಿದೆ. ಇದನ್ನು ಏಕಾಗ್ರಚಿತ್ತದಿಂದ ಕೇಳಿ, ಹೇಳಿ, ಧಾರಣೆಮಾಡುವವನು ಎಂದೂ ದುಃಖಾದಿ ದ್ವಂದ್ವಗಳಿಗೆ ವಶನಾಗಲಾರನು. ॥ ೬೨ ॥

ಇಪ್ಪತ್ತಮೂರನೆಯ ಅಧ್ಯಾಯವು ಮುಗಿಯಿತು. ॥ ೨೩ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಏಕಾದಶ ಸ್ಕಂಧೇ ತ್ರಯೋವಿಂಶೋಽಧ್ಯಾಯಃ ॥ ೨೩ ॥

# ಇಪ್ಪತ್ತನಾಲ್ಕನೆಯ ಅಧ್ಯಾಯ

## ಸಾಂಖ್ಯಯೋಗ

ಶ್ರೀಭಗವಾನುವಾಚ

ಅಥ ತೇ ಸಂಪ್ರವಕ್ಷ್ಯಾಮಿ ಸಾಂಖ್ಯಂ ಪೂರ್ವೈರ್ವಿನಿಶ್ಚಿತಮ್ ।
ಯದ್ವಿಜ್ಞಾಯ ಪುಮಾನ್ಸದ್ಯೋ ಜಹ್ಯಾದ್ವೈಕಲ್ಪಿಕಂ ಭ್ರಮಮ್
॥ ೧ ॥

ಭಗವಾನ್ ಶ್ರೀಕೃಷ್ಣನು ಹೇಳುತ್ತಾನೆ – ಪ್ರಿಯ ಉದ್ಧವನೇ ! ಈಗ ನಿನಗೆ ಸಾಂಖ್ಯಶಾಸ್ತ್ರದ ನಿರ್ಣಯವನ್ನು ಹೇಳುವೆನು. ಹಿಂದಿನಕಾಲದ ದೊಡ್ಡ-ದೊಡ್ಡ ಋಷಿ-ಮುನಿಗಳು ಇದನ್ನು ನಿಶ್ಚಯಿಸಿರುವರು. ಜೀವಿಯು ಇದನ್ನು ಚೆನ್ನಾಗಿ ತಿಳಿದುಕೊಂಡರೆ, ಅವನು ವೈಕಲ್ಪಿಕ ಭ್ರಮೆಯನ್ನು ತತ್ಕಾಲವೇ ತ್ಯಜಿಸಿಬಿಡುವನು. ಒಂದು ಬ್ರಹ್ಮನಲ್ಲದೆ ಬೇರೆ ಏನೂ ಇಲ್ಲವೇ ಇಲ್ಲ ಎಂಬುದು ಅವನ ಅರಿವಿಗೆ ಬರುತ್ತದೆ. ॥ ೧ ॥

ಆಸೀಜ್ಞಾನಮಥೋ ಹ್ಯರ್ಥ ಏಕಮೇವಾವಿಕಲ್ಪಿತಮ್ ।
ಯದಾ ವಿವೇಕನಿಪುಣಾ ಆದೌ ಕೃತಯುಗೇಽಯುಗೇ
॥ ೨ ॥

ಕಲ್ಪದ ಪ್ರಾರಂಭದಲ್ಲಿ ಯುಗವೇ ಇಲ್ಲದಿದ್ದಾಗ ಜ್ಞಾನ-ಜ್ಞೇಯ (ವಸ್ತುಪದಾರ್ಥ) ಹೀಗೆ ಯಾವ ಭೇದವೂ ಇರಲಿಲ್ಲ. ಕೇವಲ ಒಂದೇ ತತ್ತ್ವವು ಅವಿಭಾಜಿತವಾಗಿತ್ತು. ಬಳಿಕ ಕೃತಯುಗವು ಬಂದಾಗ ವಿವೇಕ ನಿಪುಣರಾದ ಜನರು ಬಂದರು. ಆಗ ಎಲ್ಲರಲ್ಲಿಯೂ ಬ್ರಹ್ಮದೃಷ್ಟಿಯೇ ಇತ್ತು. ಅವರು ಎಲ್ಲರನ್ನೂ ಅಭೇದರೂಪವಾಗಿ ಓರ್ವ ಪರಮಾತ್ಮನ ಸ್ವರೂಪವೆಂದೇ ತಿಳಿಯುತ್ತಿದ್ದರು. ॥ ೨ ॥

ತನ್ಮಾಯಾಫಲರೂಪೇಣ ಕೇವಲಂ ನಿರ್ವಿಕಲ್ಪಿತಮ್ ।
ವಾಙ್ಮನೋಽಗೋಚರಂ ಸತ್ಯಂ ದ್ವಿಧಾ ಸಮಭವದ್ಬೃಹತ್
॥ ೩ ॥

ಬ್ರಹ್ಮನಲ್ಲಿ ಯಾವ ಪ್ರಕಾರದ ವಿಕಲ್ಪವೂ ಇಲ್ಲ; ಅದು ಕೇವಲ – ಅದ್ವಿತೀಯ ಸತ್ಯವಾಗಿದೆ. ಮನಸ್ಸು ವಾಣಿಯ ಗತಿಯು ಅದರಲ್ಲಿಲ್ಲ. ಆ ಬೃಹತ್ ಸತ್ಯಸ್ವರೂಪೀ ಬ್ರಹ್ಮವೇ ಮಾಯೆ ಮತ್ತು ಅದರಲ್ಲಿ ಪ್ರತಿಬಿಂಬಿತ ಜೀವಿಯ ರೂಪದಲ್ಲಿ – ದೃಶ್ಯ ಮತ್ತು ದೃಷ್ಟಾವ ರೂಪದಲ್ಲಿ – ಎರಡು ಭಾಗವಾಗಿ ವಿಭಕ್ತನಂತೇ ಆದನು. ॥ ೩ ॥

ತಯೋರೇಕತರೋ ಹ್ಯರ್ಥಃ ಪ್ರಕೃತಿಃ ಸೋಭಯಾತ್ಮಿಕಾ ।
ಜ್ಞಾನಂ ತ್ವನ್ಯತಮೋ ಭಾವಃ ಪುರುಷಃ ಸೋಽಭಿಧೀಯತೇ
॥ ೪ ॥

ಅದರಲ್ಲಿ ಒಂದು ವಸ್ತುವನ್ನು ಪ್ರಕೃತಿ ಎಂದು ಹೇಳುತ್ತಾರೆ. ಅದೇ ಜಗತ್ತಿನಲ್ಲಿ ಕಾರ್ಯ ಮತ್ತು ಕಾರಣದ ರೂಪವನ್ನು ಧರಿಸಿತು. ಈ ಪ್ರಕಾರ ಕಾರ್ಯ ಮತ್ತು ಕಾರಣರೂಪವನ್ನು ಧರಿಸುವುದರಿಂದ ಪ್ರಕೃತಿಯು ಉಭಯಾತ್ಮಿಕೆಯಾಯಿತು. ಎರಡನೆಯ ವಸ್ತುವು ಚೇತನ ಜೀವಾತ್ಮಾ

ತಮೋ ರಜಃ ಸತ್ತ್ವಮಿತಿ ಪ್ರಕೃತೇರಭವನ್ಗುಣಾಃ ।
ಮಯಾ ಪ್ರಕ್ಷೋಭ್ಯಮಾಣಾಯಾಃ ಪುರುಷಾನುಮತೇನ ಚ ॥ ೫ ॥

ತೇಭ್ಯಃ ಸಮಭವತ್ಸೂತ್ರಂ ಮಹಾನ್ಸೂತ್ರೇಣ ಸಂಯುತಃ ।
ತತೋ ವಿಕುರ್ವತೋ ಜಾತೋಽಹಂಕಾರೋ ಯೋ ವಿಮೋಹನಃ ॥ ೬ ॥

ವೈಕಾರಿಕಸ್ತೈಜಸಶ್ಚ ತಾಮಸಶ್ಚೇತ್ಯಹಂ ತ್ರಿವೃತ್ ।
ತನ್ಮಾತ್ರೇಂದ್ರಿಯಮನಸಾಂ ಕಾರಣಂ ಚಿದಚಿನ್ಮಯಃ ॥ ೭ ॥

ಅರ್ಥಸ್ತನ್ಮಾತ್ರಿಕಾಜ್ಜಜ್ಞೇ ತಾಮಸಾದಿಂದ್ರಿಯಾಣಿ ಚ ।
ತೈಜಸಾದ್ದೇವತಾ ಆಸನ್ನೇಕಾದಶ ಚ ವೈಕೃತಾತ್ ॥ ೮ ॥

ಮಯಾ ಸಂಚೋದಿತಾ ಭಾವಾಃ ಸರ್ವೇ ಸಂಹತ್ಯಕಾರಿಣಃ ।
ಅಂಡಮುತ್ಪಾದಯಾಮಾಸುರ್ಮಮಾಯತನಮುತ್ತಮಮ್ ॥ ೯ ॥

ತಸ್ಮಿನ್ನಹಂ ಸಮಭವಮಂಡೇ ಸಲಿಲಸಂಸ್ಥಿತೌ ।
ಮಮ ನಾಭ್ಯಾಮಭೂತ್ಪದ್ಮಂ ವಿಶ್ವಾಖ್ಯಂ ತತ್ರ ಚಾತ್ಮಭೂಃ ॥ ೧೦ ॥

ಸೋಽಸೃಜತ್ತಪಸಾ ಯುಕ್ತೋ ರಜಸಾ ಮದನುಗ್ರಹಾತ್ ।
ಲೋಕಾನ್ಸಪಾಲಾನ್ ವಿಶ್ವಾತ್ಮಾ ಭೂರ್ಭುವಃಸ್ವರಿತಿ ತ್ರಿಧಾ ॥ ೧೧ ॥

ದೇವಾನಾಮೋಕ ಆಸೀತ್ಸ್ವರ್ಭೂತಾನಾಂ ಚ ಭುವಃ ಪದಮ್ ।
ಮರ್ತ್ಯಾದೀನಾಂ ಚ ಭೂರ್ಲೋಕಃ ಸಿದ್ಧಾನಾಂ ತ್ರಿತಯಾತ್ಪರಮ್ ॥ ೧೨ ॥

ಅಧೋಽಸುರಾಣಾಂ ನಾಗಾನಾಂ ಭೂಮೇರೋಕೋಽಸೃಜತ್ಪ್ರಭುಃ ।
ತ್ರಿಲೋಕ್ಯಾಂ ಗತಯಃ ಸರ್ವಾಃ ಕರ್ಮಣಾಂ ತ್ರಿಗುಣಾತ್ಮನಾಮ್ ॥ ೧೩ ॥

ಯೋಗಸ್ಯ ತಪಸಶ್ಚೈವ ನ್ಯಾಸಸ್ಯ ಗತಯೋಽಮಲಾಃ ।
ಮಹರ್ಜನಸ್ತಪಃ ಸತ್ಯಂ ಭಕ್ತಿಯೋಗಸ್ಯ ಮದ್ಗತಿಃ ॥ ೧೪ ॥

ಅದು ಜ್ಞಾನಸ್ವರೂಪನಾಗಿದ್ದು, ಅವನನ್ನು ಪುರುಷನೆಂದು ಹೇಳುತ್ತಾರೆ. ॥ ೪ ॥ ಉದ್ಧವನೇ! ನಾನೇ ಜೀವಿಗಳ ಶುಭ-ಅಶುಭ ಕರ್ಮಗಳನುಸಾರವಾಗಿ ಪ್ರಕೃತಿಯನ್ನು ಕ್ಷುಬ್ಧಗೊಳಿಸಿದೆ. ಆಗ ಅದರಿಂದ ಸತ್ತ್ವ, ರಜ, ತಮ ಈ ಮೂರು ಗುಣಗಳು ಪ್ರಕಟವಾದುವು. ॥ ೫ ॥ ಅವುಗಳಿಂದ ಕ್ರಿಯಾ-ಶಕ್ತಿಪ್ರಧಾನ ಸೂತ್ರ ಮತ್ತು ಜ್ಞಾನಶಕ್ತಿಪ್ರಧಾನ ಮಹತ್ತತ್ತ್ವ ಪ್ರಕಟವಾಯಿತು. ಅವೆರಡೂ ಪರಸ್ಪರ ಕೂಡಿಕೊಂಡೇ ಇರುತ್ತವೆ. ಮಹತ್ತತ್ತ್ವದಲ್ಲಿ ವಿಕಾರ ಉಂಟಾದಾಗ ಅಹಂಕಾರ ವ್ಯಕ್ತವಾಯಿತು. ಈ ಅಹಂಕಾರವೇ ಜೀವಿಗಳನ್ನು ಮೋಹದಲ್ಲಿ ಕೆಡಹುವಂತಹುದು. ॥ ೬ ॥ ಆ ಅಹಂಕಾರವು ಸಾತ್ತ್ವಿಕ, ರಾಜಸ, ತಾಮಸ ಎಂಬ ಮೂರು ಪ್ರಕಾರದಿಂದಿದೆ. ಅಹಂಕಾರವೇ ಪಂಚತನ್ಮಾತ್ರೆಗಳು, ಇಂದ್ರಿಯಗಳು, ಮನಸ್ಸು ಇವುಗಳ ಕಾರಣವಾಗಿದೆ. ಅದು ಜಡ-ಚೇತನ ಉಭಯಾತ್ಮಕವಾಗಿದೆ. ಈ ಅಹಂಕಾರವು ಕಾರ್ಯವೂ, ಕಾರಣವೂ ಆಗಿದೆ. ॥ ೭ ॥ ತಾಮಸ ಅಹಂಕಾರದಿಂದ ಪಂಚತನ್ಮಾತ್ರೆಗಳು ಮತ್ತು ಅವುಗಳಿಂದ ಪಂಚಭೂತಗಳ ಉತ್ಪತ್ತಿಯಾಯಿತು. ರಾಜಸ ಅಹಂಕಾರದಿಂದ ಇಂದ್ರಿಯಗಳು ಮತ್ತು ಸಾತ್ತ್ವಿಕ ಅಹಂಕಾರದಿಂದ ಇಂದ್ರಿಯಗಳ ಅಧಿಷ್ಠಾತೃ ಹನ್ನೊಂದು ದೇವತೆಗಳು ಪ್ರಕಟಗೊಂಡವು. ॥ ೮ ॥ ಇವೆಲ್ಲ ಪದಾರ್ಥಗಳು ನನ್ನ ಪ್ರೇರಣೆಯಿಂದ ಒಂದಾಗಿ ಪರಸ್ಪರ ಸೇರಿಕೊಂಡವು. ಇವುಗಳೇ ಈ ಬ್ರಹ್ಮಾಂಡರೂಪೀ ಅಂಡವನ್ನು ಉತ್ಪನ್ನಮಾಡಿದವು. ಈ ಬ್ರಹ್ಮಾಂಡವು ನನ್ನ ಉತ್ತಮ ನಿವಾಸವಾಗಿದೆ. ॥ ೯ ॥ ಈ ಅಂಡವು ನೀರಿನಲ್ಲಿ ಸ್ಥಿತವಾದಾಗ ನಾನೇ ನಾರಾಯಣರೂಪದಿಂದ ಇದರಲ್ಲಿ ವಿರಾಜಮಾನನಾದೆ. ನನ್ನ ನಾಭಿಯಿಂದ ವಿಶ್ವಕಮಲದ ಉತ್ಪತ್ತಿಯಾಯಿತು. ಅದರ ಮೇಲೆ ಬ್ರಹ್ಮನ ಆವಿರ್ಭಾವ ವಾಯಿತು. ॥ ೧೦ ॥ ವಿಶ್ವಸ್ರಷ್ಟಾ ಬ್ರಹ್ಮನು ಬಹಳ ದೊಡ್ಡ ತಪಸ್ಸು ಮಾಡಿದನು. ಅನಂತರ ನನ್ನ ಕೃಪಾಪ್ರಸಾದವನ್ನು ಪಡೆದು, ರಜೋಗುಣದ ಮೂಲಕ ಭೂಃ, ಭುವಃ, ಸ್ವಃ, ಅರ್ಥಾತ್ - ಪೃಥ್ವಿ, ಅಂತರಿಕ್ಷ, ಸ್ವರ್ಗ ಈ ಮೂರು ಲೋಕಗಳ ಹಾಗೂ ಇವುಗಳ ಲೋಕಪಾಲಕರನ್ನು ರಚಿಸಿದನು. ॥ ೧೧ ॥ ದೇವತೆಗಳ ನಿವಾಸಕ್ಕಾಗಿ ಸ್ವರ್ಲೋಕವನ್ನೂ, ಭೂತ-ಪ್ರೇತಾದಿಗಳಿಗಾಗಿ ಭುವರ್ಲೋಕ (ಅಂತರಿಕ್ಷ)ವನ್ನೂ, ಮನುಷ್ಯಾದಿಗಳಿಗಾಗಿ ಭೂರ್ಲೋಕ (ಪೃಥಿವಿ)ಯನ್ನೂ ನಿಶ್ಚಯಿಸಿದನು. ಈ ಮೂರು ಲೋಕಗಳ ಮೇಲೆ ಮಹರ್ಲೋಕ, ತಪೋಲೋಕ ಮುಂತಾದವುಗಳು ಸಿದ್ಧರ ನಿವಾಸಸ್ಥಾನಗಳಾದವು.॥ ೧೨ ॥ ಸೃಷ್ಟಿಕಾರ್ಯದಲ್ಲಿ ಸಮರ್ಥರಾದ ಬ್ರಹ್ಮದೇವರು ಅಸುರ ಮತ್ತು ನಾಗಗಳಿಗಾಗಿ ಪೃಥ್ವಿಯ ಕೆಳಗೆ ಅತಲ, ವಿತಲ, ಸುತಲ ಮುಂತಾದ ಏಳು ಪಾತಾಳಗಳನ್ನು ನಿರ್ಮಿಸಿದರು. ಸ್ವರ್ಗ, ಮರ್ತ್ಯ, ಅಂತರಿಕ್ಷ ಈ ಮೂರು ಲೋಕಗಳಲ್ಲಿ ತ್ರಿಗುಣಾತ್ಮಕ ಕರ್ಮಗಳನುಸಾರ ವಿವಿಧಗತಿಗಳು ಪ್ರಾಪ್ತವಾಗುತ್ತವೆ. ॥ ೧೩ ॥ ಯೋಗ, ತಪಸ್ಸು, ಸಂನ್ಯಾಸದ ಮೂಲಕ ಮಹರ್ಲೋಕ, ಜನೋಲೋಕ, ತಪೋಲೋಕ ಮತ್ತು ಸತ್ಯಲೋಕರೂಪೀ ಉತ್ತಮ ಗತಿಯು ದೊರೆಯುತ್ತದೆ. ಹಾಗೆಯೇ ಭಕ್ತಿಯೋಗದಿಂದ ನನ್ನ ಪರಮಧಾಮವು ದೊರೆಯುತ್ತದೆ. ॥ ೧೪ ॥

ಮಯಾ ಕಾಲಾತ್ಮನಾ ಧಾತ್ರಾ ಕರ್ಮಯುಕ್ತಮಿದಂ ಜಗತ್ ।
ಗುಣಪ್ರವಾಹ ಏತಸ್ಮಿನ್ನುನ್ಮಜ್ಜತಿ ನಿಮಜ್ಜತಿ ॥ ೧೪ ॥

ಅಣುರ್ಬೃಹತ್ ಕೃಶಃ ಸ್ಥೂಲೋ ಯೋ ಯೋ ಭಾವಃ ಪ್ರಸಿಧ್ಯತಿ ।
ಸರ್ವೋಽಪ್ಯುಭಯಸಂಯುಕ್ತಃ ಪ್ರಕೃತ್ಯಾ ಪುರುಷೇಣ ಚ ॥ ೧೫ ॥

ಯಸ್ತು ಯಸ್ಯಾದಿರಂತಶ್ಚ ಸ ವೈ ಮಧ್ಯಂ ಚ ತಸ್ಯ ಸನ್ ।
ವಿಕಾರೋ ವ್ಯವಹಾರಾರ್ಥೋ ಯಥಾ ತೈಜಸಪಾರ್ಥಿವಾಃ ॥ ೧೬ ॥

ಯದುಪಾದಾಯ ಪೂರ್ವಸ್ತು ಭಾವೋ ವಿಕುರುತೇಽಪರಮ್ ।
ಆದಿರಂತೋ ಯದಾ ಯಸ್ಯ ತತ್ಸತ್ಯಮಭಿಧೀಯತೇ ॥ ೧೭ ॥

ಪ್ರಕೃತಿರ್ಹ್ಯಸ್ಯೋಪಾದಾನಮಾಧಾರಃ ಪುರುಷಃ ಪರಃ ।
ಸತೋಽಭಿವ್ಯಂಜಕಃ ಕಾಲೋ ಬ್ರಹ್ಮ ತತ್ತ್ರಿತಯಂ ತ್ವಹಮ್ ॥ ೧೮ ॥

ಸರ್ಗಃ ಪ್ರವರ್ತತೇ ತಾವತ್ ಪೌರ್ವಾಪರ್ಯೇಣ ನಿತ್ಯಶಃ ।
ಮಹಾನ್ಗುಣವಿಸರ್ಗಾರ್ಥಃ ಸ್ಥಿತ್ಯಂತೋ ಯಾವದೀಕ್ಷಣಮ್ ॥ ೨೦ ॥

ವಿರಾಣ್ಮಯಾಽಽಸಾದ್ಯಮಾನೋ ಲೋಕಕಲ್ಪವಿಕಲ್ಪಕಃ ।
ಪಂಚತ್ವಾಯ ವಿಶೇಷಾಯ ಕಲ್ಪತೇ ಭುವನೈಃ ಸಹ ॥ ೨೧ ॥

ಅನ್ನೇ ಪ್ರಲೀಯತೇ ಮರ್ತ್ಯಮನ್ನಂ ಧಾನಾಸು ಲೀಯತೇ ।
ಧಾನಾ ಭೂಮೌ ಪ್ರಲೀಯಂತೇ ಭೂಮಿರ್ಗಂಧೇ ಪ್ರಲೀಯತೇ ॥ ೨೨ ॥

ಅಪ್ಸು ಪ್ರಲೀಯತೇ ಗಂಧ ಆಪಶ್ಚ ಸ್ವಗುಣೇ ರಸೇ ।
ಲೀಯತೇ ಜ್ಯೋತಿಷಿ ರಸೋ ಜ್ಯೋತೀ ರೂಪೇ ಪ್ರಲೀಯತೇ ॥ ೨೩ ॥

ರೂಪಂ ವಾಯೌ ಸ ಚ ಸ್ಪರ್ಶೇ ಲೀಯತೇ ಸೋಽಪಿ ಚಾಂಬರೇ ।
ಅಂಬರಂ ಶಬ್ದತನ್ಮಾತ್ರ ಇಂದ್ರಿಯಾಣಿ ಸ್ವಯೋನಿಷು ॥ ೨೪ ॥

ಈ ಇಡೀ ಜಗತ್ತು ಕರ್ಮ ಮತ್ತು ಅವುಗಳ ಸಂಸ್ಕಾರಗಳಿಂದ ಯುಕ್ತವಾಗಿದೆ. ನಾನೇ ಕಾಲರೂಪದಿಂದ ಕರ್ಮಗಳನುಸಾರ ಅವುಗಳ ಫಲದ ವಿಧಾನವನ್ನು ಮಾಡುತ್ತೇನೆ. ಈ ಗುಣಪ್ರವಾಹದಲ್ಲಿ ಬಿದ್ದು ಜೀವಿಯು ಕೆಲವೊಮ್ಮೆ ಮುಳುಗುತ್ತಾನೆ, ಕೆಲವೊಮ್ಮೆ ಮೇಲಕ್ಕೆ ಬರುತ್ತಾನೆ – ಕೆಲವೊಮ್ಮೆ ಅಧೋಗತಿಯಾದರೆ, ಕೆಲವೊಮ್ಮೆ ಅವನಿಗೆ ಪುಣ್ಯವಶದಿಂದ ಉಚ್ಚಗತಿಯು ದೊರೆಯುತ್ತದೆ. ॥೧೪॥ ಜಗತ್ತಿನಲ್ಲಿ ಚಿಕ್ಕದು-ದೊಡ್ಡದು, ತೆಳ್ಳನೆಯ ದಪ್ಪನೆಯ, ಎಷ್ಟು ಪದಾರ್ಥಗಳು ಉಂಟಾಗುತ್ತವೋ ಅವೆಲ್ಲವೂ ಪ್ರಕೃತಿ-ಪುರುಷರ ಸಂಯೋಗದಿಂದಲೇ ಉಂಟಾಗುತ್ತವೆ. ॥೧೫॥

ಆದಿ ಮತ್ತು ಅಂತ್ಯದಲ್ಲಿರುವುದೇ ಮಧ್ಯದಲ್ಲಿಯೂ ಇದೆ; ಅದೇ ಸತ್ಯವಾಗಿದೆ. ವಿಕಾರವಾದರೋ ಕೇವಲ ವ್ಯವಹಾರಕ್ಕಾಗಿ ಮಾಡಿದ ಕಲ್ಪನೆಮಾತ್ರವಾಗಿದೆ. ಕಂಕಣ-ಕುಂಡಲಗಳು ಚಿನ್ನದ ವಿಕಾರಗಳು. ಮಡಿಕೆ-ಕುಡಿಕೆ ಮಣ್ಣಿನ ವಿಕಾರಗಳು. ಮೊದಲು ಚಿನ್ನ ಮತ್ತು ಮಣ್ಣೇ ಆಗಿದ್ದವು. ಕೊನೆಗೂ ಚಿನ್ನ-ಮಣ್ಣು ಆಗಿಯೇ ಉಳಿಯುವವು. ಆದ್ದರಿಂದ ನಡುವಿನಲ್ಲಿಯೂ ಚಿನ್ನ, ಮಣ್ಣೇ ಆಗಿವೆ. ಪೂರ್ವವರ್ತಿ ಕಾರಣ (ಮಹತ್ತತ್ತ್ವಾದಿ)ವೂ ಯಾವ ಪರಮ ಕಾರಣವನ್ನು ಉಪಾದಾನವಾಗಿಸಿಕೊಂಡು ಅಪರ (ಅಹಂಕಾರಾದಿ) ಕಾರ್ಯ-ವರ್ಗವನ್ನು ಸೃಷ್ಟಿಸುತ್ತದೆಯೋ ಅದೇ ಅವುಗಳಿಗಿಂತಲೂ ಪರಮಸತ್ಯವಾಗಿದೆ. ತಾತ್ಪರ್ಯ – ಯಾವುದೇ ಕಾರ್ಯದ ಆದಿಯಲ್ಲಿ ಮತ್ತು ಅಂತ್ಯದಲ್ಲಿ ಇರುವುದೋ ಅದೇ ಸತ್ಯವಾಗಿದೆ. ॥೧೬-೧೮॥ ಈ ಪ್ರಪಂಚದ ಉಪಾದನ ಕಾರಣ ಪ್ರಕೃತಿಯಾಗಿದೆ, ಆಧಾರ ಪುರುಷ (ಜೀವಾತ್ಮಾ) ಆಗಿದ್ದಾನೆ, ಇದನ್ನು ಪ್ರಕಟಪಡಿಸುವವನು ಕಾಲವಾಗಿದೆ. ಈ ತ್ರಿವಿಧತೆ ವಸ್ತುತಃ ಬ್ರಹ್ಮಸ್ವರೂಪವೇ ಆಗಿದೆ. ಆ ಶುದ್ಧಬ್ರಹ್ಮನು ನಾನೇ ಆಗಿದ್ದೇನೆ. ॥೧೯॥ ಪರಮಾತ್ಮನ ಈಕ್ಷಣ ಶಕ್ತಿಯು ತನ್ನ ಕೆಲಸ ಮಾಡುತ್ತಿರುವವರೆಗೆ, ಅವನ ಪಾಲನ ಪ್ರವೃತ್ತಿ ನಡೆಯುತ್ತಾ ಇರುವವರೆಗೆ, ಜೀವಿಗಳ ಕರ್ಮಭೋಗಗಳಿಗಾಗಿ ಕಾರಣವು – ಕಾರ್ಯರೂಪದಿಂದ ಅಥವಾ ಪಿತಾ-ಪುತ್ರಾದಿರೂಪದಿಂದ ಈ ಸೃಷ್ಟಿಚಕ್ರವು ನಿರಂತರ ನಡೆಯುತ್ತಾ ಇರುತ್ತದೆ. ॥೨೦॥ ಈ ವಿರಾಟವೇ ವಿವಿಧ ಲೋಕಗಳ ಸೃಷ್ಟಿ ಸ್ಥಿತಿ, ಸಂಹಾರದ ಲೀಲಾಭೂಮಿಯಾಗಿದೆ. ನಾನು ಪ್ರಳಯದ ಸಂಕಲ್ಪಮಾಡಿದಾಗ, ಕಾಲರೂಪದಿಂದ ಇದರಲ್ಲಿ ಪ್ರವೇಶಿಸುತ್ತೇನೆ. ಆಗ ಇದು ಭವನಗಳೊಂದಿಗೆ ವಿನಾಶಕ್ಕೆ ಯೋಗ್ಯವಾಗುತ್ತದೆ. ॥೨೧॥ ಅದರ ಲೀನವಾಗುವ ಪ್ರಕ್ರಿಯೆ ಹೀಗಿದೆ – ಪ್ರಾಣಿಗಳ ಶರೀರವು ಅನ್ನದಲ್ಲಿ, ಅನ್ನವು ಬೀಜದಲ್ಲಿ, ಬೀಜವು ಭೂಮಿಯಲ್ಲಿ, ಭೂಮಿಯು ಗಂಧ ತನ್ಮಾತ್ರೆಯಲ್ಲಿ ಲೀನವಾಗಿ ಹೋಗುತ್ತದೆ. ॥೨೨॥ ಗಂಧವು ಜಲದಲ್ಲಿ, ಜಲವು ತನ್ನ ಗುಣ ರಸದಲ್ಲಿ, ರಸವು ತೇಜದಲ್ಲಿ, ತೇಜವು ರೂಪದಲ್ಲಿ ಲೀನವಾಗಿ ಹೋಗುತ್ತದೆ. ॥೨೩॥ ರೂಪವು ವಾಯುವಿನಲ್ಲಿ, ವಾಯು ಸ್ಪರ್ಶದಲ್ಲಿ, ಸ್ಪರ್ಶ ಆಕಾಶದಲ್ಲಿ, ಆಕಾಶವು ಶಬ್ದ ತನ್ಮಾತ್ರೆಯಲ್ಲಿ ಲೀನವಾಗುತ್ತದೆ. ಇಂದ್ರಿಯಗಳು ತಮ್ಮ-ತಮ್ಮ ಕಾರಣ ದೇವತೆಗಳಲ್ಲಿ ಮತ್ತು ಕೊನೆಗೆ ರಾಜಸ ಅಹಂಕಾರದಲ್ಲಿ ಸೇರಿ ಹೋಗುತ್ತವೆ. ॥೨೪॥

ಯೋನಿರ್ವೈಕಾರಿಕೇ ಸೌಮ್ಯ ಲೀಯತೇ ಮನಸೀಶ್ವರೇ ।
ಶಬ್ದೋ ಭೂತಾದಿಮಪ್ಯೇತಿ ಭೂತಾದಿರ್ಮಹತಿ ಪ್ರಭುಃ ॥ ೨೫ ॥

ಸೌಮ್ಯನೇ ! ರಾಜಸ ಅಹಂಕಾರವು ತನ್ನ ನಿಯಂತಾ ಸಾತ್ತ್ವಿಕ ಅಹಂಕಾರರೂಪೀ ಮನಸ್ಸಿನಲ್ಲಿ ಶಬ್ದತನ್ಮಾತ್ರೆ ಪಂಚಭೂತಗಳ ಕಾರಣ ತಾಮಸ ಅಹಂಕಾರದಲ್ಲಿ ಹಾಗೂ ಇಡೀ ಜಗತ್ತನ್ನು ಮೋಹಿತಗೊಳಿಸಲು ಸಮರ್ಥವಾದ ತ್ರಿವಿಧ ಅಹಂಕಾರವು ಮಹತ್ತತ್ತ್ವದಲ್ಲಿ ಲೀನವಾಗುತ್ತದೆ. ॥ ೨೫ ॥ ಜ್ಞಾನಶಕ್ತಿ ಮತ್ತು ಕ್ರಿಯಾಶಕ್ತಿಪ್ರಧಾನ ಮಹತ್ತತ್ತ್ವವು ತನ್ನ ಕಾರಣ ಗುಣಗಳಲ್ಲಿ ಲೀನವಾಗುತ್ತದೆ. ಗುಣಗಳು ಅವ್ಯಕ್ತ ಪ್ರಕೃತಿಯಲ್ಲಿ ಹಾಗೂ ಪ್ರಕೃತಿಯು ತನ್ನ ಪ್ರೇರಕ ಅವಿನಾಶೀ ಕಾಲನಲ್ಲಿ ಲೀನವಾಗಿ ಹೋಗುತ್ತದೆ. ॥ ೨೬ ॥ ಕಾಲವು ಮಾಯಾಮಯ (ವಿದ್ಯಾಮಯ) ಜೀವನಲ್ಲಿ ಮತ್ತು ಜೀವನು ಅಜನ್ಮಾ ಆತ್ಮನಾದ ನನ್ನಲ್ಲಿ ಲೀನವಾಗಿ ಹೋಗುತ್ತಾನೆ. ಆತ್ಮವು ಯಾವುದರಲ್ಲಿಯೂ ಲೀನವಾಗುವುದಿಲ್ಲ. ಅವನು ಉಪಾಧಿರಹಿತ ತನ್ನ ಸ್ವರೂಪದಲ್ಲೇ ಸ್ಥಿತವಾಗಿರುತ್ತದೆ. ಅವನು ಜಗತ್ತಿನ ಸೃಷ್ಟಿ ಹಾಗೂ ಲಯದ ಅಧಿಷ್ಠಾನ ಮತ್ತು ಅವಧಿಯಾಗಿದ್ದಾನೆ. ॥ ೨೭ ॥ ಉದ್ಧವನೇ! ಈ ಪ್ರಕಾರ ವಿವೇಕ ದೃಷ್ಟಿಯಿಂದ ನೋಡುವವನ ಚಿತ್ತದಲ್ಲಿ ಈ ಪ್ರಪಂಚದ ಭ್ರಮೆ ಎಂದಿಗೂ ಆಗಲಾರದು. ಒಂದೊಮ್ಮೆ ಅದರ ಸ್ಫೂರ್ತಿ ಉಂಟಾದರೂ ಅದು ಹೆಚ್ಚು ಸಮಯದವರೆಗೆ ಹೇಗೆ ನಿಲ್ಲಬಲ್ಲದು ? ಸೂರ್ಯೋದಯವಾದ ಬಳಿಕವೂ ಆಕಾಶದಲ್ಲಿ ಅಂಧಕಾರವು ಇರಬಲ್ಲುದೇ ? ॥ ೨೮ ॥ ಎಲೈ ಉದ್ಧವನೇ! ನಾನು ಕಾರ್ಯ ಮತ್ತು ಕಾರಣ ಇವೆರಡರ ಸಾಕ್ಷಿಯಾಗಿದ್ದೇನೆ. ನಾನು ನಿನಗೆ ಸೃಷ್ಟಿಯಿಂದ ಪ್ರಳಯದ ಮತ್ತು ಪ್ರಳಯದಿಂದ ಸೃಷ್ಟಿವರೆಗಿನ ಸಾಂಖ್ಯವಿಧಿಯನ್ನು ತಿಳಿಸಿಹೇಳಿದೆ. ಇದರಿಂದ ಸಂದೇಹದ ಗ್ರಂಥಿಯು ಬಿಚ್ಚಲ್ಪಟ್ಟು, ಪುರುಷನು ತನ್ನ ಸ್ವರೂಪದಲ್ಲಿ ಸ್ಥಿತನಾಗಿ ಹೋಗುತ್ತಾನೆ. ॥ ೨೯ ॥

ಸ ಲೀಯತೇ ಮಹಾನ್ಸ್ವೇಷು ಗುಣೇಷು ಗುಣವತ್ತಮಃ ।
ತೇऽವ್ಯಕ್ತೇ ಸಂಪ್ರಲೀಯಂತೇ ತತ್ಕಾಲೇ ಲೀಯತೇऽವ್ಯಯೇ ॥ ೨೬ ॥

ಕಾಲೋ ಮಾಯಾಮಯೇ ಜೀವೇ ಜೀವ ಆತ್ಮನಿ ಮಯ್ಯಜೇ ।
ಆತ್ಮಾ ಕೇವಲ ಆತ್ಮಸ್ಥೋ ವಿಕಲ್ಪಾಪಾಯಲಕ್ಷಣಃ ॥ ೨೭ ॥

ಏವಮನ್ವೀಕ್ಷಮಾಣಸ್ಯ ಕಥಂ ವೈಕಲ್ಪಿಕೋ ಭ್ರಮಃ ।
ಮನಸೋ ಹೃದಿ ತಿಷ್ಠೇತ ವ್ಯೋಮ್ನೀ ವಾರ್ಕೋದಯೇ ತಮಃ ॥ ೨೮ ॥

ಏಷ ಸಾಂಖ್ಯ ವಿಧಿಃ ಪ್ರೋಕ್ತಃ ಸಂಶಯಗ್ರಂಥಿ ಭೇದನಃ ।
ಪ್ರತಿಲೋಮಾನುಲೋಮಾಭ್ಯಾಂ ಪರಾವರದೃಶಾ ಮಯಾ ॥ ೨೯ ॥

ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೨೪ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಏಕಾದಶ ಸ್ಕಂಧೇ ಚತುರ್ವಿಂಶೋऽಧ್ಯಾಯಃ ॥ ೨೪ ॥

# ಇಪ್ಪತ್ತೈದನೆಯ ಅಧ್ಯಾಯ

## ಮೂರೂ ಗುಣವೃತ್ತಿಗಳ ನಿರೂಪಣೆ

*ಶ್ರೀಭಗವಾನುವಾಚ*

ಗುಣಾನಾಮಸಮಿಶ್ರಾಣಾಂ ಪುಮಾನ್ ಯೇನ ಯಥಾ ಭವೇತ್ ।
ತನ್ಮೇ ಪುರುಷವರ್ಯೇದಮುಪಧಾರಯ ಶಂಸತಃ ॥ ೧ ॥

ಶಮೋ ದಮಸ್ತಿತಿಕ್ಷೇಕ್ಷಾ ತಪಃ ಸತ್ಯಂ ದಯಾ ಸ್ಮೃತಿಃ ।
ತುಷ್ಟಿಸ್ತ್ಯಾಗೋऽಸ್ಪೃಹಾ ಶ್ರದ್ಧಾ ಹ್ರೀರ್ದಯಾದಿಃ ಸ್ವನಿರ್ವೃತಿಃ ॥ ೨ ॥

ಭಗವಾನ್ ಶ್ರೀಕೃಷ್ಣನು ಹೇಳುತ್ತಾನೆ – ಪುರುಷಪುಂಗವ ಉದ್ಧವನೇ! ಪ್ರತಿಯೊಬ್ಬ ವ್ಯಕ್ತಿಯಲ್ಲಿಯೂ ಪ್ರ-ಪ್ರತ್ಯೇಕ ಗುಣಗಳು ಪ್ರಕಾಶಬೀರುತ್ತವೆ. ಅವುಗಳ ಕಾರಣದಿಂದ ಪ್ರಾಣಿಗಳ ಸ್ವಭಾವ ದಲ್ಲಿಯೂ ಭೇದಗಳು ಉಂಟಾಗುತ್ತವೆ. ಯಾವ ಗುಣದಿಂದ ಯಾವ-ಯಾವ ಸ್ವಭಾವಗಳು ಉಂಟಾಗುತ್ತವೆ ಎಂಬುದನ್ನು ನಾನು ಈಗ ತಿಳಿಸುತ್ತೇನೆ. ಮನಸ್ಸಿಟ್ಟು ಕೇಳು. ॥ ೧ ॥ ಶಮ (ಮನಸ್ಸಿನ ಸಂಯಮ), ದಮ (ಇಂದ್ರಿಯನಿಗ್ರಹ), ತಿತಿಕ್ಷಾ (ಸಹಿಷ್ಣುತೆ), ವಿವೇಕ, ತಪಸ್ಸು, ಸತ್ಯ, ದಯೆ, ಸ್ಮೃತಿ, ಸಂತೋಷ, ತ್ಯಾಗ, ವಿಷಯಗಳ ಕುರಿತು ಅನಿಚ್ಛೆ, ಶ್ರದ್ಧೆ, ಲಜ್ಜೆ (ಪಾಪಮಾಡು

ಕಾಮ ಈಹಾ ಮದಸ್ತೃಷ್ಣಾ ಸ್ತಂಭ ಆಶೀರ್ಭಿದಾ ಸುಖಮ್ ।
ಮದೋತ್ಸಾಹೋ ಯಶಃಪ್ರೀತಿರ್ಹಾಸ್ಯಂ ವೀರ್ಯಂ ಬಲೋದ್ಯಮಃ
॥ ೩ ॥

ಕ್ರೋಧೋ ಲೋಭೋಽನೃತಂ ಹಿಂಸಾ ಯಾಚ್ಞಾ ದಂಭಃ ಕ್ಲಮಃ ಕಲಿಃ ।
ಶೋಕಮೋಹೌ ವಿಷಾದಾರ್ತೀ ನಿದ್ರಾಽಽಶಾ ಭೀರನುದ್ಯಮಃ
॥ ೪ ॥

ಸತ್ತ್ವಸ್ಯ ರಜಸಶ್ಚೈತಾಸ್ತಮಸಶ್ಚಾನುಪೂರ್ವಶಃ ।
ವೃತ್ತಯೋ ವರ್ಣಿತಪ್ರಾಯಾಃ ಸನ್ನಿಪಾತಮಥೋ ಶೃಣು
॥ ೫ ॥

ಸನ್ನಿಪಾತಸ್ತ್ವಹಮಿತಿ ಮಮೇತ್ಯುದ್ಧವ ಯಾ ಮತಿಃ ।
ವ್ಯವಹಾರಃ ಸನ್ನಿಪಾತೋ ಮನೋಮಾತ್ರೇಂದ್ರಿಯಾಸುಭಿಃ
॥ ೬ ॥

ಧರ್ಮೇ ಚಾರ್ಥೇ ಚ ಕಾಮೇ ಚ ಯದಾಸೌ ಪರಿನಿಷ್ಠಿತಃ ।
ಗುಣಾನಾಂ ಸನ್ನಿಕರ್ಷೋಽಯಂ ಶ್ರದ್ಧಾರತಿಧನಾವಹಃ
॥ ೭ ॥

ಪ್ರವೃತ್ತಿಲಕ್ಷಣೇ ನಿಷ್ಠಾ ಪುಮಾನ್ಯರ್ಹಿ ಗೃಹಾಶ್ರಮೇ ।
ಸ್ವಧರ್ಮೇ ಚಾನುತಿಷ್ಠೇತ ಗುಣಾನಾಂ ಸಮಿತಿರ್ಹಿ ಸಾ
॥ ೮ ॥

ಪುರುಷಂ ಸತ್ತ್ವಸಂಯುಕ್ತಮನುಮೀಯಾಚ್ಛಮಾದಿಭಿಃ ।
ಕಾಮಾದಿಭೀ ರಜೋಯುಕ್ತಂ ಕ್ರೋಧಾದ್ಯೈಸ್ತಮಸಾ ಯುತಮ್
॥ ೯ ॥

ಯದಾ ಭಜತಿ ಮಾಂ ಭಕ್ತ್ಯಾ ನಿರಪೇಕ್ಷಃ ಸ್ವಕರ್ಮಭಿಃ ।
ತಂ ಸತ್ತ್ವಪ್ರಕೃತಿಂ ವಿದ್ಯಾತ್ಪುರುಷಂ ಸ್ತ್ರಿಯಮೇವ ವಾ
॥ ೧೦ ॥

ಯದಾ ಆಶಿಷ ಆಶಾಸ್ಯ ಮಾಂ ಭಜೇತ ಸ್ವಕರ್ಮಭಿಃ ।
ತಂ ರಜಃಪ್ರಕೃತಿಂ ವಿದ್ಯಾದ್ಧಿಂಸಾಮಾಶಾಸ್ಯ ತಾಮಸಮ್
॥ ೧೧ ॥

ಸತ್ತ್ವಂ ರಜಸ್ತಮ ಇತಿ ಗುಣಾ ಜೀವಸ್ಯ ನೈವ ಮೇ ।
ಚಿತ್ತಜಾ ಯೈಸ್ತು ಭೂತಾನಾಂ ಸಜ್ಜಮಾನೋ ನಿಬಧ್ಯತೇ
॥ ೧೨ ॥

ವುದರಲ್ಲಿ ಸ್ವಾಭಾವಿಕ ಸಂಕೋಚ), ಆತ್ಮರತಿ, ದಾನ, ವಿನಯ, ಸರಳತೆ ಮುಂತಾದವುಗಳು ಸತ್ತ್ವಗುಣದ ವೃತ್ತಿಗಳು. ॥ ೨ ॥ ಇಚ್ಛೆ, ಪ್ರಯತ್ನ ಮದ, ತೃಷ್ಣೆ (ತೃಪ್ತಿಯಿಲ್ಲದಿರುವುದು) ಗರ್ವ, ಧನಕ್ಕಾಗಿ ದೇವತೆಗಳಲ್ಲಿ ಪ್ರಾರ್ಥನೆ, ಭೇದಬುದ್ಧಿ ವಿಷಯಭೋಗ, ಯುದ್ಧಾದಿಗಳಲ್ಲಿ ಮದಜನಿತ ಉತ್ಸಾಹ, ತನ್ನ ಕೀರ್ತಿಯಲ್ಲಿ ಪ್ರೀತಿ, ಹಾಸ್ಯ, ಪರಾಕ್ರಮ, ಹಠದಿಂದ ಉದ್ಯೋಗಮಾಡುವ ಪ್ರವೃತ್ತಿ – ಇವು ರಜೋಗುಣದ ವೃತ್ತಿಗಳು. ॥ ೩ ॥ ಕ್ರೋಧ (ಅಸಹಿಷ್ಣುತೆ), ಲೋಭ, ಸುಳ್ಳುಹೇಳುವುದು, ಹಿಂಸೆ, ಯಾಚನೆ, ಡಂಭಾಚಾರ, ಶ್ರಮ, ಕಲಹ, ಶೋಕ, ಮೋಹ, ವಿಷಾದ, ದೀನತೆ, ನಿದ್ದೆ ಆಸೆ, ಭಯ, ಅಕರ್ಮಣ್ಯತೆ – ಇವು ತಮೋಗುಣದ ವೃತ್ತಿಗಳು. ॥ ೪ ॥ ಈ ಕ್ರಮದಿಂದ ಸತ್ತ್ವಗುಣ, ರಜೋಗುಣ, ತಮೋಗುಣ ಇವುಗಳು ಅಧಿಕಾಂಶವಿರುವ ವ್ಯಕ್ತಿಗಳ ವೃತ್ತಿಗಳನ್ನು ಬೇರೆ-ಬೇರೆ ಯಾಗಿ ವರ್ಣಿಸಿರುವೆನು. ಈಗ ಅವುಗಳ ಬೆರಕೆಯಿಂದ ಆಗುವ ವೃತ್ತಿಗಳ ವರ್ಣನೆಯನ್ನು ಕೇಳು. ॥ ೫ ॥ ಉದ್ಧವನೇ! ಮೂರೂ ಗುಣಗಳ ಮಿಶ್ರಣದಿಂದಲೇ 'ನಾನು' ಮತ್ತು 'ನನ್ನದು' ಎಂಬ ಬುದ್ಧಿಯು ಉತ್ಪನ್ನವಾಗುತ್ತದೆ. ಮನಸ್ಸು, ಶಬ್ದಾದಿ ವಿಷಯಗಳು, ಇಂದ್ರಿಯಗಳು ಮತ್ತು ಪ್ರಾಣಗಳು ಇವುಗಳ ಕಾರಣದಿಂದ ವೃತ್ತಿಗಳ ವ್ಯವಹಾರ ನಡೆಯುತ್ತದೆ. ಸಾತ್ತ್ವಿಕ, ರಾಜಸ, ತಾಮಸ ಮೂರೂ ಗುಣಗಳ ಮಿಶ್ರಣದಿಂದಲೇ ಕ್ರಿಯೆಗಳು ನಡೆಯು ತ್ತವೆ. ॥ ೬ ॥ ಮನುಷ್ಯನು ಧರ್ಮ, ಅರ್ಥ, ಕಾಮರೂಪೀ ಪುರು ಷಾರ್ಥಗಳನ್ನು ಸಾಧಿಸಲು ತೊಡಗಿದಾಗ, ಅವನಿಗೆ ಮೂರೂ ಗುಣಗಳ ಆವಶ್ಯಕತೆ ಬೀಳುತ್ತದೆ. ಆಗ ಅವನಿಗೆ ಸತ್ತ್ವಗುಣದಿಂದ ಶ್ರದ್ಧೆ, ರಜೋಗುಣದಿಂದ ಆಸಕ್ತಿ, ತಮೋಗುಣದಿಂದ ಧನದ ಪ್ರಾಪ್ತಿಯಾಗುತ್ತದೆ. ಇದೂ ಕೂಡ ಗುಣಗಳ ಮಿಶ್ರಣವೇ ಆಗಿದೆ. ॥ ೭ ॥ ಮನುಷ್ಯನು ಸಕಾಮ ಕರ್ಮದ ಅನುಷ್ಠಾನ ಮಾಡುವಾಗ ಅಥವಾ ಅವನು ಗೃಹಸ್ಥಾಶ್ರಮದಲ್ಲಿ ನಿಷ್ಠೆ ಇರಿಸುತ್ತಾ ತನ್ನ ಕರ್ಮಗಳನ್ನು ಪಾಲಿಸುವಾಗಲೂ ಅವನಲ್ಲಿ ಮೂರೂ ಗುಣ ಗಳ ಸಮ್ಮಿಶ್ರಣವಿದೆ ಎಂದು ತಿಳಿಯಬೇಕು. ॥ ೮ ॥

ಮಾನಸಿಕ ಶಾಂತಿ, ಜಿತೇಂದ್ರಿಯತೆ ಮೊದಲಾದ ಗುಣಗಳಿಂದ ಸತ್ತ್ವಗುಣೀ ಮನುಷ್ಯನ, ಕಾಮನೆ ಮೊದಲಾದವುಗಳಿಂದ ರಜೋ ಗುಣಿ ವ್ಯಕ್ತಿಯ ಕ್ರೋಧ, ಹಿಂಸೆ ಮುಂತಾದ ಗುಣಗಳಿಂದ ತಮೋ ಗುಣಿಯ ಪರಿಚಯವಾಗುತ್ತದೆ. ॥ ೯ ॥ ಪುರುಷರಿರಲೀ, ಸ್ತ್ರೀಯಾ ಗಿರಲೀ ಅವರು ನಿಷ್ಕಾಮರಾಗಿ ತಮ್ಮ ನಿತ್ಯ ನೈಮಿತ್ತಿಕ ಕರ್ಮಗಳ ಮೂಲಕ ನನ್ನನ್ನು ಆರಾಧಿಸುತ್ತಿದ್ದರೆ ಅವರನ್ನು ಸತ್ತ್ವಗುಣಿಗಳು ಎಂದು ತಿಳಿಯಬೇಕು. ॥ ೧೦ ॥ ಸಕಾಮಭಾವದಿಂದ ತನ್ನ ಕರ್ಮಗಳ ಮೂಲಕ ನನ್ನ ಭಜನೆ-ಪೂಜೆ ಮಾಡುವವನು ರಜೋ ಗುಣಿಯಾಗಿದ್ದಾನೆ. ತನ್ನ ಶತ್ರುವಿನ ಮೃತ್ಯುವಾಗಿ, ಹಿಂಸಾಯುಕ್ತ ನನ್ನ ಭಜನೆ-ಪೂಜೆ ಮಾಡುವವನು ತಮೋಗುಣೀ ಎಂದು ತಿಳಿಯ ಬೇಕು. ॥ ೧೧ ॥ ಸತ್ತ್ವ, ರಜ, ತಮ ಈ ಮೂರೂ ಗುಣಗಳು ಜೀವಿಯದಾಗಿವೆ. ಪರಮಾತ್ಮನಾದ ನನ್ನವುಗಳಲ್ಲ. ಇವು ಪ್ರಾಣಿಗಳ ಚಿತ್ತದಲ್ಲಿ ಹುಟ್ಟುತ್ತವೆ. ಈ ಗುಣಗಳ ಕಾರಣದಿಂದಲೇ ಶರೀರ, ಧನಾದಿಗಳಲ್ಲಿ ಆಸಕ್ತನಾಗಿ ಜೀವಿಯು ಸ್ವಯಂ ಬಂಧಿತನಾಗು ತ್ತಾನೆ. ॥ ೧೨ ॥

ಯದೇತರೌ ಜಯೇತ್ಸತ್ತ್ವಂ ಭಾಸ್ವರಂ ವಿಶದಂ ಶಿವಮ್ ।
ತದಾ ಸುಖೇನ ಯುಜ್ಯೇತ ಧರ್ಮಜ್ಞಾನಾದಿಭಿಃ ಪುಮಾನ್ ॥ ೧೩ ॥

ಯದಾ ಜಯೇತ್ತಮಃ ಸತ್ತ್ವಂ ರಜಃ ಸಂಗಂ ಭಿದಾ ಚಲಮ್ ।
ತದಾ ದುಃಖೇನ ಯುಜ್ಯೇತ ಕರ್ಮಣಾ ಯಶಸಾ ಶ್ರಿಯಾ ॥ ೧೪ ॥

ಯದಾ ಜಯೇದ್ರಜಃ ಸತ್ತ್ವಂ ತಮೋ ಮೂಢಂ ಲಯಂ ಜಡಮ್ ।
ಯುಜ್ಯೇತ ಶೋಕಮೋಹಾಭ್ಯಾಂ ನಿದ್ರಯಾ ಹಿಂಸಯಾಽಶಯಾ ॥ ೧೫ ॥

ಯದಾ ಚಿತ್ತಂ ಪ್ರಸೀದೇತ ಇಂದ್ರಿಯಾಣಾಂ ಚ ನಿರ್ವೃತಿಃ ।
ದೇಹೇಽಭಯಂ ಮನೋಽಸಂಗಂ ತತ್ಸತ್ತ್ವಂ ವಿದ್ಧಿ ಮತ್ಪದಮ್ ॥ ೧೬ ॥

ವಿಕುರ್ವನ್ಕ್ರಿಯಯಾ ಚಾಧೀರನಿರ್ವೃತ್ತಿಶ್ಚ ಚೇತಸಾಮ್ ।
ಗಾತ್ರಾಸ್ವಾಸ್ಥ್ಯಂ ಮನೋ ಭ್ರಾಂತಂ ರಜ ಏತೈರ್ನಿಶಾಮಯ ॥ ೧೭ ॥

ಸೀದಚ್ಚಿತ್ತಂ ವಿಲೀಯೇತ ಚೇತಸೋ ಗ್ರಹಣೇಽಕ್ಷಮಮ್ ।
ಮನೋ ನಷ್ಟಂ ತಮೋ ಗ್ಲಾನಿಸ್ತಮಸ್ತದುಪಧಾರಯ ॥ ೧೮ ॥

ಏಧಮಾನೇ ಗುಣೇ ಸತ್ತ್ವೇ ದೇವಾನಾಂ ಬಲಮೇಧತೇ ।
ಅಸುರಾಣಾಂ ಚ ರಜಸಿ ತಮಸ್ಯುದ್ಧವ ರಕ್ಷಸಾಮ್ ॥ ೧೯ ॥

ಸತ್ತ್ವಾಜ್ಜಾಗರಣಂ ವಿದ್ಯಾದ್ರಜಸಾ ಸ್ವಪ್ನಮಾದಿಶೇತ್ ।
ಪ್ರಸ್ವಾಪಂ ತಮಸಾ ಜಂತೋಸ್ತುರೀಯಂ ತ್ರಿಷು ಸಂತತಮ್ ॥ ೨೦ ॥

ಉಪರ್ಯುಪರಿ ಗಚ್ಛಂತಿ ಸತ್ತ್ವೇನ ಬ್ರಾಹ್ಮಣಾ ಜನಾಃ ।
ತಮಸಾಧೋಽಧ ಆಮುಖ್ಯಾದ್ ರಜಸಾಂತರಚಾರಿಣಃ ॥ ೨೧ ॥

ಸತ್ತ್ವಗುಣವು ಪ್ರಕಾಶಕ, ನಿರ್ಮಲ ಮತ್ತು ಶಾಂತವಾಗಿದೆ. ಅದು ರಜೋಗುಣ, ತಮೋಗುಣಗಳನ್ನು ಅದುಮಿ ಬೆಳೆದಾಗ ಪುರುಷನು ಸುಖಿ, ಧರ್ಮ, ಜ್ಞಾನ ಮುಂತಾದುವನ್ನು ಪಡೆದು ಕೊಳ್ಳುತ್ತಾನೆ. ॥ ೧೩ ॥ ರಜೋಗುಣವು ಭೇದಬುದ್ಧಿಯ ಕಾರಣ ವಾಗಿದೆ. ಆಸಕ್ತಿ ಮತ್ತು ಪ್ರವೃತ್ತಿ ಅದರ ಸ್ವಭಾವವಾಗಿದೆ. ತಮೋ ಗುಣ ಮತ್ತು ಸತ್ತ್ವಗುಣಗಳನ್ನು ಅದುಮಿ ರಜೋಗುಣವು ಬೆಳೆದಾಗ ಮನುಷ್ಯನು ದುಃಖಿ, ಕರ್ಮ, ಕೀರ್ತಿ, ಲಕ್ಷ್ಮೀ (ಸಂಪತ್ತು) ಇವುಗಳಿಂದ ಸಂಪನ್ನನಾಗುತ್ತಾನೆ. ॥ ೧೪ ॥ ತಮೋ ಗುಣದ ಸ್ವರೂಪವು ಅಜ್ಞಾನವಾಗಿದೆ. ಆಲಸ್ಯ, ಬುದ್ಧಿಯ ಮೂಢತೆ ಅದರ ಸ್ವಭಾವವಾಗಿದೆ. ಆ ತಮೋಗುಣವು ಬೆಳೆದು ಸತ್ತ್ವಗುಣ ಮತ್ತು ರಜೋಗುಣಗಳನ್ನು ಅದುಮಿಬಿಡುತ್ತದೋ ಆಗ ಪ್ರಾಣಿಯು ಬಗೆ-ಬಗೆಯ ಆಸೆಗಳನ್ನು ಮಾಡುತ್ತಾನೆ. ಶೋಕ-ಮೋಹದಲ್ಲಿ ಬೀಳುವನು. ಹಿಂಸಿಸಲು ತೊಡಗುವನು. ಅಥವಾ ನಿದ್ರಾ-ಆಲಸ್ಯಕ್ಕೆ ವಶೀಭೂತನಾಗಿ ಮಲಗಿಕೊಂಡೇ ಇರುವನು. ॥ ೧೫ ॥ ಚಿತ್ತವು ಪ್ರಸನ್ನವಾದಾಗ, ಇಂದ್ರಿಯಗಳು ಶಾಂತವಾದಾಗ, ದೇಹವು ನಿರ್ಭಯವಾದಾಗ, ಮನಸ್ಸಿನಲ್ಲಿ ಆಸಕ್ತಿಯು ಉಳಿಯದಿದ್ದಾಗ, ಸತ್ತ್ವಗುಣವು ವೃದ್ಧಿಯಾಗಿದೆ ಎಂದು ತಿಳಿಯಬೇಕು. ಸತ್ತ್ವಗುಣವು ನನ್ನ ಪ್ರಾಪ್ತಿಯ ಸಾಧನೆ ಯಾಗಿದೆ. ॥ ೧೬ ॥ ಕೆಲಸ ಮಾಡುತ್ತಾ-ಮಾಡುತ್ತಾ ಜೀವಿಯ ಬುದ್ಧಿಯು ಚಂಚಲವಾದಾಗ; ಜ್ಞಾನೇಂದ್ರಿಯಗಳು ಅಸಂತುಷ್ಟ ರಾಗಿ, ಕರ್ಮೇಂದ್ರಿಯಗಳು ವಿಕಾರದಿಂದ ಕೂಡಿದರೆ; ಮನಸ್ಸು ಭ್ರಾಂತವಾಗಿ, ಶರೀರವು ಅಸ್ವಸ್ಥವಾದಾಗ ರಜೋಗುಣದ ವೇಗವು ಹೆಚ್ಚುತ್ತಿದೆ ಎಂದು ತಿಳಿಯಬೇಕು. ॥ ೧೭ ॥ ಚಿತ್ತವು ಜ್ಞಾನೇಂದ್ರಿ ಯಗಳ ಮೂಲಕ ಶಬ್ದಾದಿ ವಿಷಯಗಳನ್ನು ಸರಿಯಾಗಿ ಅರಿಯಲು ಅಸಮರ್ಥವಾದಾಗ ಮತ್ತು ಖಿನ್ನವಾಗಿ ಲೀನವಾಗತೊಡಗಿದಾಗ, ಮನಸ್ಸು ಬರಿದಾಗಿ, ಅಜ್ಞಾನ, ವಿಷಾದಗಳು ಹೆಚ್ಚಿದಾಗ, ತಮೋ ಗುಣವು ಹೆಚ್ಚಿರುವುದನ್ನು ತಿಳಿಯಬೇಕು. ॥ ೧೮ ॥

ಉದ್ಧವನೇ! ಸತ್ತ್ವಗುಣವು ವೃದ್ಧಿಯಾದಾಗ ದೇವತೆಗಳ, ರಜೋಗುಣ ಬೆಳೆದಾಗ ಅಸುರರ, ತಮೋಗುಣವು ಹೆಚ್ಚಿದಾಗ ರಾಕ್ಷಸರ ಬಲವು ಹೆಚ್ಚುತ್ತದೆ. (ವೃತ್ತಿಗಳಲ್ಲಿಯೂ ಕ್ರಮಶಃ ಸತ್ತ್ವಾದಿ ಗುಣಗಳ ಹೆಚ್ಚಳ ಉಂಟಾದಾಗ ದೇವತ್ವ, ಆಸುರತ್ವ, ರಾಕ್ಷಸತ್ವ ಪ್ರಧಾನವಾದ ನಿವೃತ್ತಿ, ಪ್ರವೃತ್ತಿ, ಮೋಹದ ಪ್ರಧಾನತೆ ಉಂಟಾಗು ತ್ತದೆ.) ॥ ೧೯ ॥ ಸತ್ತ್ವಗುಣದಿಂದ ಜಾಗ್ರತ್-ಅವಸ್ಥೆ, ರಜೋ ಗುಣದಿಂದ ಸ್ವಪ್ನಾವಸ್ಥೆ, ತಮೋಗುಣದಿಂದ ಸುಷುಪ್ತಿ-ಅವಸ್ಥೆ ಉಂಟಾಗುತ್ತವೆ. ಈ ಮೂರರಲ್ಲಿಯೂ ತುರೀಯವು ಸಮಾನ ವಾಗಿ ವ್ಯಾಪಿಸಿರುತ್ತದೆ. ಅದೇ ಶುದ್ಧ, ಏಕರಸ ಆತ್ಮನಾಗಿ ದ್ದಾನೆ. ॥ ೨೦ ॥ ವೇದಗಳ ಅಭ್ಯಾಸದಲ್ಲಿ ತತ್ಪರರಾದ ಬ್ರಾಹ್ಮಣರು ಸತ್ತ್ವಗುಣದ ಮೂಲಕ ಉತ್ತರೋತ್ತರ ಮೇಲಿನ ಲೋಕಗಳಿಗೆ ಹೋಗುತ್ತಾರೆ. ತಮೋಗುಣದಿಂದ ಜೀವಿಗಳಿಗೆ ವೃಕ್ಷಾದಿಗಳ ವರೆಗಿನ ಅಧೋಗತಿ ಪ್ರಾಪ್ತವಾಗುತ್ತದೆ. ರಜೋಗುಣದಿಂದ ಮನುಷ್ಯ ಶರೀರವು ದೊರೆಯುತ್ತದೆ. ॥ ೨೧ ॥

ಸತ್ತ್ವೇ ಪ್ರಲೀನಾಃ ಸ್ವರ್ಯಾಂತಿ ನರಲೋಕಂ ರಜೋಲಯಾಃ ।
ತಮೋಲಯಾಸ್ತು ನಿರಯಂ ಯಾಂತಿ ಮಾಮೇವ ನಿರ್ಗುಣಾಃ ॥ ೨೨ ॥

ಮದರ್ಪಣಂ ನಿಷ್ಫಲಂ ವಾ ಸಾತ್ತ್ವಿಕಂ ನಿಜಕರ್ಮ ತತ್ ।
ರಾಜಸಂ ಫಲಸಂಕಲ್ಪಂ ಹಿಂಸಾಪ್ರಾಯಾದಿ ತಾಮಸಮ್ ॥ ೨೩ ॥

ಕೈವಲ್ಯಂ ಸಾತ್ತ್ವಿಕಂ ಜ್ಞಾನಂ ರಜೋ ವೈಕಲ್ಪಿಕಂ ಚ ಯತ್ ।
ಪ್ರಾಕೃತಂ ತಾಮಸಂ ಜ್ಞಾನಂ ಮನ್ನಿಷ್ಠಂ ನಿರ್ಗುಣಂ ಸ್ಮೃತಮ್ ॥ ೨೪ ॥

ವನಂ ತು ಸಾತ್ತ್ವಿಕೋ ವಾಸೋ ಗ್ರಾಮೋ ರಾಜಸ ಉಚ್ಯತೇ ।
ತಾಮಸಂ ದ್ಯೂತಸದನಂ ಮನ್ನಿಕೇತಂ ತು ನಿರ್ಗುಣಮ್ ॥ ೨೫ ॥

ಸಾತ್ತ್ವಿಕಃ ಕಾರಕೋಽಸಂಗೀ ರಾಗಾಂಧೋ ರಾಜಸಃ ಸ್ಮೃತಃ ।
ತಾಮಸಃ ಸ್ಮೃತಿವಿಭ್ರಷ್ಟೋ ನಿರ್ಗುಣೋ ಮದಪಾಶ್ರಯಃ ॥ ೨೬ ॥

ಸಾತ್ತ್ವಿಕ್ಯಾಧ್ಯಾತ್ಮಿಕೀ ಶ್ರದ್ಧಾ ಕರ್ಮಶ್ರದ್ಧಾ ತು ರಾಜಸೀ ।
ತಾಮಸ್ಯಧರ್ಮೇ ಯಾ ಶ್ರದ್ಧಾ ಮತ್ಸೇವಾಯಾಂ ತು ನಿರ್ಗುಣಾ ॥ ೨೭ ॥

ಪಥ್ಯಂ ಪೂತಮನಾಯಸ್ತಮಾಹಾರ್ಯಂ ಸಾತ್ತ್ವಿಕಂ ಸ್ಮೃತಮ್ ।
ರಾಜಸಂ ಚೇಂದ್ರಿಯಪ್ರೇಷ್ಠಂ ತಾಮಸಂ ಚಾರ್ತಿದಾಶುಚಿ ॥ ೨೮ ॥

ಸಾತ್ತ್ವಿಕಂ ಸುಖಮಾತ್ಮೋತ್ಥಂ ವಿಷಯೋತ್ಥಂ ತು ರಾಜಸಮ್ ।
ತಾಮಸಂ ಮೋಹದೈನ್ಯೋತ್ಥಂ ನಿರ್ಗುಣಂ ಮದಪಾಶ್ರಯಮ್ ॥ ೨೯ ॥

ದ್ರವ್ಯಂ ದೇಶಃ ಫಲಂ ಕಾಲೋ ಜ್ಞಾನಂ ಕರ್ಮ ಚ ಕಾರಕಃ ।
ಶ್ರದ್ಧಾವಸ್ಥಾಽಽಕೃತಿರ್ನಿಷ್ಠಾ ತ್ರೈಗುಣ್ಯಃ ಸರ್ವ ಏವ ಹಿ ॥ ೩೦ ॥

ಸತ್ತ್ವಗುಣವು, ವೃದ್ಧಿಯಾದಾಗ ಮೃತ್ಯು ಸಂಭವಿಸಿದರೆ ಅವನು ಸ್ವರ್ಗವನ್ನು ಪಡೆದುಕೊಳ್ಳುತ್ತಾನೆ, ರಜೋಗುಣವು ಹೆಚ್ಚಿದಾಗ ಮೃತ್ಯುವಾದರೆ ಅವನಿಗೆ ಮನುಷ್ಯಲೋಕ ದೊರೆಯುತ್ತದೆ. ತಮೋಗುಣವು ಬೆಳೆದಾಗ ಸತ್ತರೆ ಅವನಿಗೆ ನರಕದ ಪ್ರಾಪ್ತಿಯಾಗುತ್ತದೆ. ಆದರೆ ತ್ರಿಗುಣಾತೀತ-ಜೀವನ್ಮುಕ್ತ ಪುರುಷನಿಗೆ ನನ್ನ ಪ್ರಾಪ್ತಿಯೇ ಆಗುತ್ತದೆ. ॥ ೨೨ ॥ ತನ್ನ ಸ್ವಧರ್ಮವನ್ನು ಭಗವದರ್ಪಣ ಭಾವದಿಂದ ಅಥವಾ ನಿಷ್ಕಾಮಭಾವದಿಂದ ಮಾಡಿದಾಗ ಅದು ಸಾತ್ತ್ವಿಕವಾಗುತ್ತದೆ. ಯಾವುದೇ ಕರ್ಮಾನುಷ್ಠಾನದಲ್ಲಿ ಫಲದ ಕಾಮನೆ ಇದ್ದಾಗ ಅದು ರಾಜಸವಾಗುತ್ತದೆ. ಯಾವುದೇ ಕರ್ಮದಲ್ಲಿ ಯಾರನ್ನಾದರೂ ಸತಾಯಿಸುವ ಅಥವಾ ತೋರಿಕೆಯ ಭಾವವಿದ್ದರೆ ಅದು ತಾಮಸಿಕವಾಗುತ್ತದೆ. ॥ ೨೩ ॥ ಶುದ್ಧ ಆತ್ಮನ ಜ್ಞಾನವು ಸಾತ್ತ್ವಿಕಜ್ಞಾನವಾಗಿದೆ. ತನ್ನನ್ನು ಕರ್ತಾ-ಭೋಕ್ತಾ ಎಂದು ತಿಳಿಯುವ ಜ್ಞಾನವು ರಾಜಸವಾಗಿದೆ. ಏಕಮಾತ್ರ ತನ್ನ ಶರೀರವನ್ನೇ ಆತ್ಮನೆಂದು ತಿಳಿಯುವುದು ತಾಮಸಿಕವಾಗಿದೆ. ಈ ಮೂರರಿಂದಲೂ ವಿಲಕ್ಷಣವಾದ ನನ್ನ ಸ್ವರೂಪದ ನಿಜವಾದ ಜ್ಞಾನ ಗುಣಾತೀತವಾಗಿದೆ. ॥ ೨೪ ॥ ಏಕಾಂತ ಪವಿತ್ರದೇಶದಲ್ಲಿ ವಾಸಿಸುವುದು ಸಾತ್ತ್ವಿಕವಾಗಿದೆ. ಗೃಹಾಸಕ್ತಿ ಇರುವುದು ರಾಜಸವಾಗಿದೆ ಮತ್ತು ಜೂಜು ಮದ್ಯಪಾನಾದಿಗಳಲ್ಲಿ ಆಸಕ್ತನಾಗುವುದು ತಾಮಸಿಕವಾಗಿದೆ. ಇವೆಲ್ಲಕ್ಕಿಂತ ಹೆಚ್ಚಾಗಿ ನನ್ನ ಮಂದಿರದಲ್ಲಿ ವಾಸಿಸುವುದು ನಿರ್ಗುಣ ನಿವಾಸವಾಗಿದೆ. ॥ ೨೫ ॥ ಅನಾಸಕ್ತಭಾವದಿಂದ ಕರ್ಮ ಮಾಡುವವನು ಸಾತ್ತ್ವಿಕನು ; ರಾಗಾಂಧನಾಗಿ ಕರ್ಮಮಾಡುವವನು ರಾಜಸಿಯು ; ಪೂರ್ವಾಪರ ವಿಚಾರರಹಿತನಾಗಿ ಕರ್ಮ ಮಾಡುವವನು ತಾಮಸಿಕನಾಗಿದ್ದಾನೆ. ಇವುಗಳನ್ನು ಬಿಟ್ಟು ಕೇವಲ ನನಗೆ ಶರಣಾಗಿ, ಅಹಂಕಾರವಿಲ್ಲದೆ ಕರ್ಮಮಾಡುವವನು ನಿರ್ಗುಣನಾಗಿದ್ದಾನೆ. ॥ ೨೬ ॥ ಆತ್ಮವಿಷಯಕ ಶ್ರದ್ಧೆಯು ಸಾತ್ತ್ವಿಕವಾಗಿದೆ, ಕರ್ಮವಿಷಯಕ ಶ್ರದ್ಧೆಯು ರಾಜಸವಾಗಿದೆ. ಅಧರ್ಮದಲ್ಲಿರುವ ಶ್ರದ್ಧೆಯು ತಾಮಸವಾಗಿದೆ. ನನ್ನ ಸೇವೆಯಲ್ಲೇ ಇರುವ ಶ್ರದ್ಧೆಯು ನಿರ್ಗುಣವಾಗಿದೆ. ॥ ೨೭ ॥

ಆರೋಗ್ಯದಾಯಕ, ಪವಿತ್ರ ಮತ್ತು ಅನಾಯಾಸವಾಗಿ ದೊರೆಯುವ ಭೋಜನವು ಸಾತ್ತ್ವಿಕವಾಗಿದೆ. ನಾಲಿಗೆಗೆ ರುಚಿಯಾದ, ಸ್ವಾದಿಷ್ಟದೃಷ್ಟಿಯಿಂದ ಕೂಡಿದ ಆಹಾರವು ರಾಜಸವಾಗಿದೆ. ದುಃಖಮಯ, ಅಪವಿತ್ರ ಊಟವು ತಾಮಸವಾಗಿದೆ. ॥ ೨೮ ॥ ಅಂತರ್ಮುಖತೆಯಿಂದ, ಆತ್ಮಚಿಂತನೆಯಿಂದ ದೊರೆಯುವ ಸುಖವು ಸಾತ್ತ್ವಿಕವಾಗಿದೆ. ಬಹಿರ್ಮುಖತೆಯಿಂದ, ವಿಷಯಗಳಿಂದ ಸಿಗುವ ಸುಖವು ರಾಜಸವಾಗಿದೆ. ಅಜ್ಞಾನ, ದೀನತೆಯಿಂದ ಆಗುವ ಸುಖವು ತಾಮಸವಾಗಿದೆ. ನನ್ನನ್ನು ಆಶ್ರಯಿಸಿದಾಗ ಉಂಟಾಗುವ ಸುಖವು ಗುಣಾತೀತ, ಅಪ್ರಾಕೃತವಾಗಿದೆ. ॥ ೨೯ ॥

ಉದ್ಧವನೇ! ದ್ರವ್ಯ (ವಸ್ತು), ದೇಶ (ಸ್ಥಾನ), ಫಲ, ಕಾಲ, ಜ್ಞಾನ, ಕರ್ಮ, ಕರ್ತಾ, ಶ್ರದ್ಧೆ, ಅವಸ್ಥೆ, ದೇವ-ಮನುಷ್ಯ-ತಿರ್ಯಗಾದಿ ಶರೀರ ಮತ್ತು ನಿಷ್ಠೆ – ಇವೆಲ್ಲವೂ ತ್ರಿಗುಣಾತ್ಮಕವೇ ಆಗಿವೆ. ॥ ೩೦ ॥ ಪುರುಷಶ್ರೇಷ್ಠನೇ! ಪುರುಷ ಮತ್ತು ಪ್ರಕೃತಿಯ

**ಸರ್ವೇ ಗುಣಮಯಾ ಭಾವಾಃ ಪುರುಷಾವ್ಯಕ್ತಧಿಷ್ಠಿತಾಃ ।**
**ದೃಷ್ಟಂ ಶ್ರುತಮನುಧ್ಯಾತಂ ಬುದ್ಧ್ಯಾ ವಾ ಪುರುಷರ್ಷಭ ॥ ೩೧ ॥**

ಆಶ್ರಿತವಾಗಿರುವ ಎಲ್ಲ ಭಾವಗಳು ಗುಣಮಯವೇ ಆಗಿವೆ. ಅವು ಬೇಕಾದರೆ ನೇತ್ರಾದಿ ಇಂದ್ರಿಯಗಳಿಂದ ಅನುಭವಿಸಿದುದಾಗಲೀ, ಅಥವಾ ಶಾಸ್ತ್ರಗಳ ಮೂಲಕ ಲೋಕ-ಲೋಕಾಂತರದ ಸಂಬಂಧವಾಗಿ ಕೇಳಿದುದಾಗಲೀ, ಇಲ್ಲವೇ ಬುದ್ಧಿಯಿಂದ ಯೋಚಿಸಿ, ವಿಚಾರಮಾಡಿದುದಾಗಲೀ ಎಲ್ಲವೂ ತ್ರಿಗುಣಾತ್ಮಕವೇ ಆಗಿವೆ. ॥ ೩೧ ॥

**ಏತಾಃ ಸಂಸೃತಯಃ ಪುಂಸೋ ಗುಣಕರ್ಮನಿಬಂಧನಾಃ ।**
**ಯೇನೇಮೇ ನಿರ್ಜಿತಾಃ ಸೌಮ್ಯ ಗುಣಾ ಜೀವೇನ ಚಿತ್ತಜಾಃ ।**
**ಭಕ್ತಿಯೋಗೇನ ಮನ್ನಿಷ್ಠೋ ಮದ್ಭಾವಾಯ ಪ್ರಪದ್ಯತೇ ॥ ೩೨ ॥**

ಜೀವಿಗಳಿಗೆ ದೊರೆಯುವ ಯೋನಿಗಳು ಅಥವಾ ಗತಿಗಳೆಲ್ಲವೂ ಅವನ ಗುಣ-ಕರ್ಮಗಳ ಅನುಸಾರವೇ ಇರುತ್ತವೆ. ಎಲೈ ಸೌಮ್ಯ! ಎಲ್ಲ ಗುಣಗಳು ಚಿತ್ತದೊಂದಿಗೆ ಸಂಬಂಧವಿರಿಸುತ್ತವೆ. ಅವುಗಳ ಮೇಲೆ ವಿಜಯ ಸಾಧಿಸಿದ ಜೀವಿಯು ಭಕ್ತಿಯೋಗದ ಮೂಲಕ ನನ್ನಲ್ಲೇ ಸ್ಥಿತನಾಗಿ, ಕೊನೆಯಲ್ಲಿ ನನ್ನ ಸ್ವರೂಪವನ್ನೇ ಪಡೆದುಕೊಳ್ಳುವನು. ॥ ೩೨ ॥

**ತಸ್ಮಾದ್ದೇಹಮಿಮಂ ಲಬ್ಧ್ವಾ ಜ್ಞಾನವಿಜ್ಞಾನಸಂಭವಮ್ ।**
**ಗುಣಸಂಗಂ ವಿನಿರ್ಧೂಯ ಮಾಂ ಭಜಂತು ವಿಚಕ್ಷಣಾಃ ॥ ೩೩ ॥**

ಈ ಮನುಷ್ಯ ಶರೀರವು ಬಹಳ ದುರ್ಲಭವಾಗಿದೆ. ಇದೇ ಶರೀರದಲ್ಲಿ ತತ್ತ್ವಜ್ಞಾನ ಮತ್ತು ಅದರಲ್ಲಿ ನಿಷ್ಠಾರೂಪೀ ವಿಜ್ಞಾನವನ್ನು ಪಡೆಯುವ ಸಂಭವವಿದೆ. ಅದಕ್ಕಾಗಿ ಇದನ್ನು ಪಡೆದ ಬುದ್ಧಿವಂತನಾದ ಮನುಷ್ಯನು ಗುಣಗಳ ಆಸಕ್ತಿಯನ್ನು ತೊಡೆದು ನನ್ನನ್ನೇ ಭಜಿಸಬೇಕು. ॥ ೩೩ ॥

**ನಿಸ್ಸಂಗೋ ಮಾಂ ಭಜೇದ್ವಿದ್ವಾನಪ್ರಮತ್ತೋ ಜಿತೇಂದ್ರಿಯಃ ।**
**ರಜಸ್ತಮಶ್ಚಾಭಿಜಯೇತ್ಸತ್ತ್ವ ಸಂಸೇವಯಾ ಮುನಿಃ ॥ ೩೪ ॥**

ವಿಚಾರಶೀಲ ಪುರುಷನು ತುಂಬಾ ಎಚ್ಚರಿಕೆಯಿಂದ ಸತ್ತ್ವಗುಣದ ಸೇವನೆಯಿಂದ ರಜೋಗುಣ, ತಮೋಗುಣಗಳನ್ನು ಗೆದ್ದುಕೊಳ್ಳಬೇಕು. ಇಂದ್ರಿಯಗಳನ್ನು ವಶಪಡಿಸಿಕೊಂಡು, ನನ್ನ ಸ್ವರೂಪವನ್ನು ಅರಿತುಕೊಂಡು, ನನ್ನ ಭಜನೆಯಲ್ಲಿ ತೊಡಗಬೇಕು. ಆಸಕ್ತಿಯು ಲೇಶಮಾತ್ರವೂ ಇರಬಾರದು. ॥ ೩೪ ॥

**ಸತ್ತ್ವಂ ಚಾಭಿಜಯೇದ್ಯುಕ್ತೋ ನೈರಪೇಕ್ಷ್ಯೇಣ ಶಾಂತಧೀಃ ।**
**ಸಂಪದ್ಯತೇ ಗುಣೈರ್ಮುಕ್ತೋ ಜೀವೋ ಜೀವಂ ವಿಹಾಯ ಮಾಮ್ ॥ ೩೫ ॥**

ಧ್ಯಾನಯೋಗದ ಮೂಲಕ ಚಿತ್ತವೃತ್ತಿಗಳನ್ನು ಶಾಂತಗೊಳಿಸಿಕೊಂಡು, ನಿರಪೇಕ್ಷತೆಯಿಂದ ಸತ್ತ್ವಗುಣದ ವಿಜಯ ಸಾಧಿಸಿಕೊಳ್ಳಬೇಕು. ಹೀಗೆ ಗುಣಗಳಿಂದ ಮುಕ್ತನಾದ ಜೀವಿಯು ತನ್ನ ಜೀವಭಾವವನ್ನು ಬಿಟ್ಟು, ನನ್ನಲ್ಲಿ ಒಂದಾಗಿಹೋಗುತ್ತಾನೆ.॥ ೩೫ ॥

**ಜೀವೋ ಜೀವವಿನಿರ್ಮುಕ್ತೋ ಗುಣೈಶ್ಚಾಶಯಸಂಭವೈಃ ।**
**ಮಯ್ಯೈವ ಬ್ರಹ್ಮಣಾ ಪೂರ್ಣೋ ನ ಬಹಿರ್ನಾಂತರಶ್ಚರೇತ್ ॥ ೩೬ ॥**

ಜೀವಭಾವದಿಂದ ಮುಕ್ತನಾದ ಜೀವಿಯು ಅಂತಃಕರಣದಲ್ಲಿ ಉತ್ಪನ್ನವಾಗುವ ಗುಣಗಳಿಂದ ಮುಕ್ತನಾಗಿ, ಪರಿಪೂರ್ಣನಾದ ನನ್ನೊಂದಿಗೆ ಏಕೀಭಾವವನ್ನು ಪಡೆದುಕೊಂಡು, ನನ್ನಲ್ಲಿಯೇ ಸೇರಿಹೋಗುತ್ತಾನೆ. ಮತ್ತೆ ಅವನಿಗೆ ಪುನರ್ಜನ್ಮ ಇರುವುದಿಲ್ಲ. ॥ ೩೬ ॥

*ಇಪ್ಪತ್ತೈದನೆಯ ಅಧ್ಯಾಯವು ಮುಗಿಯಿತು. ॥ ೨೫ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಏಕಾದಶ ಸ್ಕಂಧೇ ಪಂಚವಿಂಶೋಽಧ್ಯಾಯಃ ॥ ೨೫ ॥

# ಇಪ್ಪತ್ತಾರನೆಯ ಅಧ್ಯಾಯ

## ಪುರೂರವನ ವೈರಾಗ್ಯೋಕ್ತಿ

*ಶ್ರೀಭಗವಾನುವಾಚ*

**ಮಲ್ಲಕ್ಷಣಮಿಮಂ ಕಾಯಂ ಲಬ್ಧ್ವಾ ಮದ್ಧರ್ಮ ಆಸ್ಥಿತಃ ।**
**ಆನಂದಂ ಪರಮಾತ್ಮಾನಮಾತ್ಮಸ್ಥಂ ಸಮುಪೈತಿ ಮಾಮ್ ॥ ೧ ॥**

ಭಗವಾನ್ ಶ್ರೀಕೃಷ್ಣನು ಹೇಳುತ್ತಾನೆ – ಎಲೈ ಉದ್ಧವನೇ! ಈ ಮನುಷ್ಯಶರೀರವು ನನ್ನ ಸ್ವರೂಪಜ್ಞಾನದ ಮತ್ತು ನನ್ನ ಪ್ರಾಪ್ತಿಯ ಮುಖ್ಯಸಾಧನವಾಗಿದೆ. ಇದನ್ನು ಪಡೆದ ಯಾವ ಮನುಷ್ಯನು ನಿಜವಾದ ಪ್ರೇಮದಿಂದ ನನ್ನ ಭಕ್ತಿ ಮಾಡುವನೋ, ಅವನು ಅಂತಃಕರಣದಲ್ಲಿ ಸ್ಥಿತನಾದ ಆನಂದಸ್ವರೂಪೀ ಪರಮಾತ್ಮನಾದ ನನ್ನನ್ನು ಪಡೆದುಕೊಳ್ಳುವನು. ॥ ೧ ॥

ಗುಣಮಯ್ಯಾ ಜೀವಯೋನ್ಯಾ ವಿಮುಕ್ತೋ ಜ್ಞಾನನಿಷ್ಠಯಾ ।
ಗುಣೇಷು ಮಾಯಾಮಾತ್ರೇಷು ದೃಶ್ಯಮಾನೇಷ್ವವಸ್ತುತಃ ।
ವರ್ತಮಾನೋಽಪಿ ನ ಪುಮಾನ್ ಯುಜ್ಯತೇಽವಸ್ತುಭಿರ್ಗುಣೈಃ
॥ ೨ ॥

ಸಂಗಂ ನ ಕುರ್ಯಾದಸತಾಂ ಶಿಶ್ನೋದರತೃಪಾಂ ಕ್ವಚಿತ್ ।
ತಸ್ಯಾನುಗಸ್ತಮಸ್ಯಂಧೇ ಪತತ್ಯಂಧಾನುಗಾಂಧವತ್
॥ ೩ ॥

ಐಲಃ ಸಮ್ರಾಡಿಮಾಂ ಗಾಥಾಮಗಾಯತ ಬೃಹಚ್ಛ್ರವಾಃ ।
ಊರ್ವಶೀವಿರಹಾನ್ಮುಹ್ಯನ್ನಿರ್ವಿಣ್ಣಃ ಶೋಕಸಂಯಮೇ
॥ ೪ ॥

ತ್ಯಕ್ತ್ವಾಽಽತ್ಮಾನಂ ವ್ರಜಂತೀಂ ತಾಂ ನಗ್ನ ಉನ್ಮತ್ತವನ್ನೃಪಃ ।
ವಿಲಪನ್ನನ್ವಗಾಜ್ಜಾಯೇ ಘೋರೇ ತಿಷ್ಠೇತಿ ವಿಕ್ಲವಃ
॥ ೫ ॥

ಕಾಮಾನತೃಪ್ತೋಽನುಜುಷನ್ ಕ್ಷುಲ್ಲಕಾನ್ವರ್ಷಯಾಮಿನೀಃ ।
ನ ವೇದ ಯಾಂತೀರ್ನಾಯಾಂತೀರುರ್ವಶ್ಯಾಕೃಷ್ಟಚೇತನಃ
॥ ೬ ॥

ಐಲ ಉವಾಚ

ಅಹೋ ಮೇ ಮೋಹವಿಸ್ತಾರಃ ಕಾಮಕಶ್ಮಲಚೇತಸಃ ।
ದೇವ್ಯಾ ಗೃಹೀತಕಂಠಸ್ಯ ನಾಯುಃಖಂಡಾ ಇಮೇ ಸ್ಮೃತಾಃ
॥ ೭ ॥

ನಾಹಂ ವೇದಾಭಿನಿರ್ಮುಕ್ತಃ ಸೂರ್ಯೋ ವಾಭ್ಯುದಿತೋಽಮುಯಾ ।
ಮುಷಿತೋ ವರ್ಷಪೂಗಾನಾಂ ಬತಾಹಾನಿ ಗತಾನ್ಯುತ
॥ ೮ ॥

ಜೀವಿಗಳ ಎಲ್ಲ ಯೋನಿಗಳು, ಎಲ್ಲ ಗತಿಗಳು ತ್ರಿಗುಣಮಯವಾಗಿವೆ. ಜೀವಿಯು ಜ್ಞಾನನಿಷ್ಠೆಯ ಮೂಲಕ ಅವುಗಳಿಂದ ಎಂದೆಂದಿಗೂ ಮುಕ್ತನಾಗಿ ಹೋಗುತ್ತಾನೆ. ಕಂಡುಬರುವ ಸತ್ತ್ವ, ರಜ ಮುಂತಾದ ಗುಣಗಳು ವಾಸ್ತವಿಕವಾಗಿಲ್ಲ, ಮಾಯಾಮಾತ್ರವಾಗಿವೆ. ಜ್ಞಾನ ಉಂಟಾದ ಬಳಿಕ ಪುರುಷನು ಅವುಗಳ ನಡುವೆ ಇದ್ದರೂ ಕೂಡ, ಅವುಗಳ ಮೂಲಕ ವ್ಯವಹರಿಸುತ್ತಿದ್ದರೂ ಕೂಡ, ಅವುಗಳಿಂದ ಬಂಧಿತನಾಗುವುದಿಲ್ಲ, ಏಕೆಂದರೆ, ಆ ಗುಣಗಳ ವಾಸ್ತವಿಕ ಅಸ್ತಿತ್ವವೇ ಇರುವುದಿಲ್ಲ. ॥ ೨ ॥ ವಿಷಯಗಳ ಸೇವನೆ ಮತ್ತು ಉದರ ಪೋಷಣೆಯಲ್ಲೇ ತೊಡಗಿರುವ ಅಸತ್ ಪುರುಷರ ಸಂಗವನ್ನು ಎಂದೂ ಮಾಡಬಾರದು. ಸಾಮಾನ್ಯವಾಗಿ ಇದರ ಕುರಿತು ಜನರು ಲಕ್ಷ್ಯವಿಡಬೇಕು; ಏಕೆಂದರೆ, ಅವರನ್ನು ಅನುಸರಿಸುವವರಿಗೆ – 'ಕುರುಡನ ಆಸರೆಯಿಂದ ನಡೆಯುವ ಕುರುಡನಂತೆ' ದುರ್ದಶೆ ಉಂಟಾಗುತ್ತದೆ. ಅವನಿಗಾದರೋ ಘೋರ ಅಂಧಕಾರದಲ್ಲಿ ಅಲೆಯಬೇಕಾಗುತ್ತದೆ. ॥ ೩ ॥ ಉದ್ಧವನೇ! ಹಿಂದೆ ಪರಮ ಯಶಸ್ವೀ ಸಾಮ್ರಾಟ ಇಲಾನಂದನ ಪುರೂರವನು ಊರ್ವಶಿಯ ವಿರಹದಿಂದ ಅತ್ಯಂತ ವ್ಯಾಕುಲನಾಗಿದ್ದನು. ಮತ್ತೆ ಶೋಕ ದೂರವಾದಾಗ ಅವನಲ್ಲಿ ಪ್ರಬಲವಾದ ವೈರಾಗ್ಯವು ಉದಿಸಿತು. ಆಗ ಅವನು ಅನುಭವಸಿದ್ಧವಾದ ಈ ಗಾಥೆಯನ್ನು ಹಾಡಿದನು. ॥ ೪ ॥ ತನ್ನನ್ನು ಅಗಲಿ ಓಡಿಹೋಗುತ್ತಿರುವ ಊರ್ವಶಿಯ ಹಿಂದೆ ರಾಜಾ ಪುರೂರವನು ವಿವಸ್ತ್ರನಾಗಿ ಹುಚ್ಚನಂತೆ ಅತ್ಯಂತ ವಿಹ್ವಲನಾಗಿ ಓಡುತ್ತಾ ಹೀಗೆ ಹೇಳತೊಡಗಿದನು – 'ದೇವೀ! ನಿಷ್ಠುರ ಹೃದಯಳೇ! ಸ್ವಲ್ಪ ಹೊತ್ತಾದರೂ ನಿಂತುಕೋ. ಓಡಿಹೋಗಬೇಡ. ॥ ೫ ॥ ಊರ್ವಶಿಯು ರಾಜನ ಚಿತ್ತವನ್ನು ಸಂಪೂರ್ಣವಾಗಿ ಅಪಹರಿಸಿಬಿಟ್ಟಿದ್ದಳು. ಅವಳೊಂದಿಗಿನ ಕಾಮೋಪಭೋಗದಿಂದ ಅವನಿಗೆ ತೃಪ್ತಿಯೇ ಆಗಿರಲಿಲ್ಲ, ಅವನು ಕ್ಷುದ್ರವಾದ ವಿಷಯಸೇವನೆಯಲ್ಲಿ ಅವನಿಗೆ ಎಷ್ಟೋ ವರ್ಷಗಳ ರಾತ್ರಿಗಳು ಬಂದು ಹೋದುದರ ಅರಿವೇ ಇಲ್ಲದಷ್ಟು ಮುಳುಗಿಹೋಗಿದ್ದನು. ಈಗ ಊರ್ವಶಿಯು ಬಿಟ್ಟು ಹೋದಾಗ ವಿವೇಕ ಉಂಟಾಗಿ, ಮನಸ್ಸಿನಲ್ಲೇ ಹೀಗೆ ಅಂದುಕೊಂಡನು. ॥ ೬ ॥

**ಪುರೂರವನು ಹೇಳಿದನು –** ಅಯ್ಯೋ ಶಿವನೇ! ನನ್ನ ಮೂಢತೆಯನ್ನಾದರೋ ನೋಡಬಾರದೇ! ಕಾಮವಾಸನೆಯು ನನ್ನ ಚಿತ್ತವನ್ನು ಎಷ್ಟು ಕಲುಷಿತಗೊಳಿಸಿತು! ಊರ್ವಶಿಯು ತನ್ನ ಬಾಹುಗಳಿಂದ ನನ್ನ ಕತ್ತನ್ನು ಅಪ್ಪಿಕೊಂಡಳು, ಅದರಿಂದ ನಾನು ಆಯುಸ್ಸಿನ ಎಷ್ಟು ವರ್ಷಗಳನ್ನು ಕಳೆದುಕೊಂಡೆ! ಅಯ್ಯೋ! ವಿಸ್ಮೃತಿಗೂ ಒಂದು ಮೇರೆ ಇರುತ್ತದಲ್ಲ! ॥ ೭ ॥ ಅಯ್ಯಯ್ಯೋ! ಇವಳು ನನ್ನನ್ನು ಬರಿದಾಗಿಸಿದಳು. ಸೂರ್ಯ ಹುಟ್ಟಿದನೋ, ಮುಳುಗಿದನೋ ಎಂಬುದನ್ನೂ ನಾನು ಅರಿಯದೆ ಹೋದೆ. ಅನೇಕ ವರ್ಷಗಳ ದಿನಗಳ ಮೇಲೆ ದಿನಗಳು ಸಂದುಹೋದುವು. ಆದರೆ ನನ್ನ ಅರಿವಿಗೆ ಬರಲಿಲ್ಲ, ಎಂತಹ ದುಃಖದ ಮಾತಾಗಿದೆ ಇದು! ॥ ೮ ॥ ಅಯ್ಯೋ! ಆಶ್ಚರ್ಯವೇ! ನನ್ನ ಮನಸ್ಸಿನಲ್ಲಿ ಎಷ್ಟು

ಅಹೋ ಮೇ ಆತ್ಮಸಮ್ಮೋಹೋ ಯೇನಾತ್ಮಾ ಯೋಷಿತಾಂ ಕೃತಃ ।
ಕ್ರೀಡಾಮೃಗಶ್ಚಕ್ರವರ್ತೀ ನರದೇವಶಿಖಾಮಣಿಃ ॥ ೯ ॥

ಸಪರಿಚ್ಛದಮಾತ್ಮಾನಂ ಹಿತ್ವಾ ತೃಣಮಿವೇಶ್ವರಮ್ ।
ಯಾಂತೀಂ ಸ್ತ್ರಿಯಂ ಚಾನ್ವಗಮಂ ನಗ್ನ ಉನ್ಮತ್ತವದ್ರುದನ್ ॥ ೧೦ ॥

ಕುತಸ್ತಸ್ಯಾನುಭಾವಃ ಸ್ಯಾತ್ತೇಜ ಈಶತ್ವಮೇವ ವಾ ।
ಯೋಽನ್ವಗಚ್ಛಂ ಸ್ತ್ರಿಯಂ ಯಾಂತೀಂ ಖರವತ್ಪಾದತಾಡಿತಃ ॥ ೧೧ ॥

ಕಿಂ ವಿದ್ಯಯಾ ಕಿಂ ತಪಸಾ ಕಿಂ ತ್ಯಾಗೇನ ಶ್ರುತೇನ ವಾ ।
ಕಿಂ ವಿವಿಕ್ತೇನ ಮೌನೇನ ಸ್ತ್ರೀಭಿರ್ಯಸ್ಯ ಮನೋ ಹೃತಮ್ ॥ ೧೨ ॥

ಸ್ವಾರ್ಥಸ್ಯಾಕೋವಿದಂ ಧಿಙ್ಮಾಂ ಮೂರ್ಖಂ ಪಂಡಿತಮಾನಿನಮ್ ।
ಯೋಽಹಮೀಶ್ವರತಾಂ ಪ್ರಾಪ್ಯ ಸ್ತ್ರೀಭಿರ್ಗೋಖರವಜ್ಜಿತಃ ॥ ೧೩ ॥

ಸೇವತೋ ವರ್ಷಪೂಗಾನ್ಮೇ ಉರ್ವಶ್ಯಾ ಅಧರಾಸವಮ್ ।
ನ ತೃಪ್ಯತ್ಯಾತ್ಮಭೂಃ ಕಾಮೋ ವಹ್ನಿರಾಹುತಿಭಿರ್ಯಥಾ ॥ ೧೪ ॥

ಪುಂಶ್ಚಲ್ಯಾಪಹೃತಂ ಚಿತ್ತಂ ಕೋ ನ್ವನ್ಯೋ ಮೋಚಿತುಂ ಪ್ರಭುಃ ।
ಆತ್ಮಾರಾಮೇಶ್ವರಮೃತೇ ಭಗವಂತಮಧೋಕ್ಷಜಮ್ ॥ ೧೫ ॥

ಬೋಧಿತಸ್ಯಾಪಿ ದೇವ್ಯಾ ಮೇ ಸೂಕ್ತವಾಕ್ಯೇನ ದುರ್ಮತೇಃ ।
ಮನೋಗತೋ ಮಹಾಮೋಹೋ ನಾಪಯಾತ್ಯಜಿತಾತ್ಮನಃ ॥ ೧೬ ॥

ಕಿಮೇತಯಾ ನೋಽಪಕೃತಂ ರಜ್ಜ್ವಾ ವಾ ಸರ್ಪಚೇತಸಃ ।
ರಜ್ಜುಸ್ವರೂಪಾವಿದುಷೋ ಯೋಽಹಂ ಯದಜಿತೇಂದ್ರಿಯಃ ॥ ೧೭ ॥

ಕ್ವಾಯಂ ಮಲೀಮಸಃಕಾಯೋ ದೌರ್ಗಂಧ್ಯಾದ್ಯಾತ್ಮಕೋಽಶುಚಿಃ ।
ಕ್ವ ಗುಣಾಃ ಸೌಮನಸ್ಯಾದ್ಯಾ ಹ್ಯಧ್ಯಾಸೋಽವಿದ್ಯಯಾ ಕೃತಃ ॥ ೧೮ ॥

ಮೋಹ ಬೆಳೆದುಹೋಯಿತು. ಅವಳು ನರಶ್ರೇಷ್ಠ ಚಕ್ರವರ್ತಿ ಶಿಖಾಮಣಿ ಸಾಮ್ರಾಟ ಪುರೂರವನಾದ ನನ್ನನ್ನು ಸ್ತ್ರೀಯರ ಕ್ರೀಡಾಮೃಗ (ಆಟಿಕೆ)ವನ್ನಾಗಿಸಿಬಿಟ್ಟಳು. ॥ ೯ ॥ ನೋಡು! ನಾನು ಪ್ರಜೆಯನ್ನು ಮರ್ಯಾದೆಯಲ್ಲಿ ಇರಿಸುವಂತಹ ಸಾಮ್ರಾಟ ನಾಗಿದ್ದೇನೆ. ಅವಳು ನನ್ನನ್ನು ಮತ್ತು ನನ್ನ ರಾಜ್ಯವನ್ನು ಹುಲ್ಲಿನ ಕಡ್ಡಿಯಂತೆ ತಿರಸ್ಕರಿಸಿ ಹೊರಟುಹೋದಳು. ನಾನು ಹುಚ್ಚನಂತೆ ಬತ್ತಲೆಯಾಗಿ ಅಳುತ್ತಾ, ಗೋಳಾಡುತ್ತಾ ಅವಳ ಹಿಂದೆ ಓಡುತ್ತಿರುವೆನಲ್ಲ! ಅಯ್ಯೋ! ಇದೊಂದು ಜೀವನವೇ! ॥ ೧೦ ॥ ಹೆಣ್ಣು ಕತ್ತೆಯು ಹಿಂದಿನಿಂದ ಒದೆಯುತ್ತಿದ್ದರೂ ಅದನ್ನು ಲೆಕ್ಕಿಸದೆ ಅದರ ಹಿಂದೆಯೇ ಹೋಗುವ ಗಂಡುಕತ್ತೆಯಂತೆ ನಾನೂ ಈ ಹೆಂಗಸಿನ ಹಿಂದೆ ಓಡುತ್ತಿರುವೆನಲ್ಲ! ಮತ್ತೆ ನನ್ನಲ್ಲಿ ಪ್ರಭಾವ, ತೇಜ ಮತ್ತು ಸ್ವಾಮಿತ್ವ ಹೇಗೆ ತಾನೇ ಇರಬಲ್ಲದು? ॥ ೧೧ ॥ ಯಾವನ ಮನಸ್ಸನ್ನು ಸ್ತ್ರೀಯು ಅಪಹರಿಸುತ್ತಾಳೋ ಅವನಿಗೆ ಎಷ್ಟು ವಿದ್ಯೆ ಇದ್ದರೇನು ವ್ಯರ್ಥವೇ. ಅವನಿಗೆ ತಪಸ್ಸು, ತ್ಯಾಗ, ಶಾಸ್ತ್ರಾಭ್ಯಾಸ ದಿಂದಲೂ ಯಾವುದೇ ಲಾಭವಿಲ್ಲ, ಅವನ ಏಕಾಂತವಾಸ, ಮೌನ ಇವುಗಳೂ ನಿಷ್ಫಲವೇ. ॥ ೧೨ ॥ ನನ್ನ ಲಾಭ-ಹಾನಿಯನ್ನೇ ಅರಿಯದ ನಾನು ನನ್ನನ್ನು ಬಹುದೊಡ್ಡ ಪಂಡಿತನೆಂದು ತಿಳಿಯುತ್ತಿದ್ದೇನೆ. ನನ್ನಂತಹ ಮೂರ್ಖನಿಗೆ ಧಿಕ್ಕಾರವಿರಲಿ. ಅಯ್ಯೋ! ಶಿವನೇ! ನಾನು ಚಕ್ರವರ್ತಿ ಸಾಮ್ರಾಟನಾಗಿದ್ದರೂ ಕತ್ತೆ, ಎತ್ತುಗಳಂತೆ ಸ್ತ್ರೀಯಳ ಬಲೆಯಲ್ಲಿ ಸಿಕ್ಕಿಹೋದೆನಲ್ಲ! ॥ ೧೩ ॥ ನಾನು ಅನೇಕ ವರ್ಷಗಳವರೆಗೆ ಊರ್ವಶಿಯ ಅಧರಾಮೃತವನ್ನು ಕುಡಿಯುತ್ತಾ ಇದ್ದೆ, ಆದರೆ ನನ್ನ ಕಾಮವಾಸನೆ ತೃಪ್ತವಾಗಲಿಲ್ಲ. ತುಪ್ಪದ ಆಹುತಿಯಿಂದ ಅಗ್ನಿಯು ತೃಪ್ತವಾಗುವುದಿಲ್ಲ. ಹಾಗೆಯೇ ನನ್ನಲ್ಲಿ ಉತ್ಪನ್ನವಾದ ಕಾಮವು ತೃಪ್ತವಾಗುವುದಿಲ್ಲ. ॥ ೧೪ ॥ ಆ ಕುಲಟೆಯು ನನ್ನ ಚಿತ್ತವನ್ನು ಅಪಹರಿಸಿಬಿಟ್ಟಿರುವಳು. ಅವಳ ಉರುಳಿನಿಂದ ನನ್ನ ಮನಸ್ಸನ್ನು ಬಿಡಿಸಲು ಆತ್ಮಾರಾಮನೂ, ಜೀವನ್ಮುಕ್ತರ ಸ್ವಾಮಿಯೂ ಆದ ಇಂದ್ರಿಯಾತೀತ ಭಗವಂತನನ್ನು ಬಿಟ್ಟು ಬೇರೆ ಯಾರಿದ್ದಾರೆ? ॥ ೧೫ ॥ ಊರ್ವಶಿಯಾದರೋ ನನಗೆ ವೈದಿಕ ಸೂಕ್ತದಿಂದ ಯಥಾರ್ಥವಾದ ಮಾತನ್ನು ಹೇಳಿದ್ದಳು. ಆದರೆ ನನ್ನ ಮನಸ್ಸಿನ ಆ ಭಯಂಕರ ಮೋಹವು ಅಳಿದುಹೋಗದಿದ್ದಾಗ, ನನ್ನ ಬುದ್ಧಿಯು ಪೂರ್ಣವಾಗಿ ಕೆಟ್ಟುಹೋಗಿತ್ತು. ನನ್ನ ಇಂದ್ರಿಯಗಳೇ ನನ್ನ ಕೈಮೀರಿ ಹೋಗಿದ್ದಾಗ ನಾನು ಹೇಗೆ ತಿಳಿದುಕೊಳ್ಳಬಲ್ಲೆ? ॥ ೧೬ ॥ ಹಗ್ಗವನ್ನು ಸರ್ಪವೆಂದು ತಿಳಿದು ಅದರಲ್ಲಿ ಸರ್ಪದ ಕಲ್ಪನೆ ಮಾಡಿ, ದುಃಖಿತನಾದವನಿಗೆ, ಆ ಹಗ್ಗವು ಏನು ತಾನೇ ಮಾಡಬಲ್ಲದು? ಸ್ವತಃ ನಾನೇ ಅಜಿತೇಂದ್ರಿಯನಾದ ಕಾರಣ ಅಪರಾಧಿ ನಾನೇ ಆಗಿದ್ದೇನೆ. ॥ ೧೭ ॥ ದುರ್ಗಂಧದಿಂದ ತುಂಬಿಕೊಂಡಿರುವ ಮಲಿನವೂ, ಅಪವಿತ್ರವೂ ಆಗಿರುವ ಆ ದೇಹವೆಲ್ಲಿ? ಕೋಮಲತೆ, ಪವಿತ್ರತೆ, ಸುಗಂಧವೇ ಮುಂತಾದ ಪುಷ್ಪಗಳಂತಿರುವ ಗುಣವೆಲ್ಲಿ? ಆದರೆ ನಾನೇ ಅಜ್ಞಾನವಶನಾಗಿ ಕುರೂಪದಲ್ಲಿ ಸುಂದರತೆಯ ಆರೋಪಮಾಡಿದೆ, ಇದು ನನ್ನ ಮೂಢತೆಯೇ ಆಗಿದೆ. ॥ ೧೮ ॥ ಈ ಶರೀರವು ಜನ್ಮದಾತರಾದ

ಪಿತ್ರೋಃ ಕಿಂ ಸ್ವಂ ನು ಭಾರ್ಯಾಯಾಃ
ಸ್ವಾಮಿನೋಽಗ್ನೇಃ ಶ್ವಗೃಧ್ರಯೋಃ ।
ಕಿಮಾತ್ಮನಃ ಕಿಂ ಸುಹೃದಾಮಿತಿ
ಯೋ ನಾವಸೀಯತೇ ॥ ೧೯ ॥

ತಸ್ಮಿನ್ ಕಲೇವರೇಽಮೇಧ್ಯೇ ತುಚ್ಛನಿಷ್ಠೇ ವಿಷಜ್ಜತೇ ।
ಅಹೋ ಸುಭದ್ರಂ ಸುನಸಂ ಸುಸ್ಮಿತಂ ಚ ಮುಖಂ ಸ್ತ್ರಿಯಃ ॥ ೨೦ ॥

ತ್ವಙ್ಮಾಂಸರುಧಿರಸ್ನಾಯುಮೇದೋಮಜ್ಜಾಸ್ಥಿಸಂಹತೌ ।
ವಿಣ್ಮೂತ್ರಪೂಯೇ ರಮತಾಂ ಕೃಮೀಣಾಂ ಕಿಯದಂತರಮ್ ॥ ೨೧ ॥

ಅಥಾಪಿ ನೋಪಸಜ್ಜೇತ ಸ್ತ್ರೀಷು ಸ್ತ್ರೈಣೇಷು ಚಾರ್ಥವಿತ್ ।
ವಿಷಯೇಂದ್ರಿಯಸಂಯೋಗಾನ್ಮನಃ ಕ್ಷುಭ್ಯತಿ ನಾನ್ಯಥಾ ॥ ೨೨ ॥

ಅದೃಷ್ಟಾದಶ್ರುತಾದ್ಭಾವಾನ್ ನ ಭಾವ ಉಪಜಾಯತೇ ।
ಅಸಂಪ್ರಯುಂಜತಃ ಪ್ರಾಣಾನ್ ಶಾಮ್ಯತಿ ಸ್ತಿಮಿತಂ ಮನಃ ॥ ೨೩ ॥

ತಸ್ಮಾತ್ ಸಂಗೋ ನ ಕರ್ತವ್ಯಃ
ಸ್ತ್ರೀಷು ಸ್ತ್ರೈಣೇಷು ಚೇಂದ್ರಿಯೈಃ ।
ವಿದುಷಾಂ ಚಾಪ್ಯವಿಶ್ರಬ್ಧಃ
ಷಡ್ವರ್ಗಃ ಕಿಮು ಮಾದೃಶಾಮ್ ॥ ೨೪ ॥

ಶ್ರೀಭಗವಾನುವಾಚ

ಏವಂ ಪ್ರಗಾಯನ್ ನೃಪದೇವದೇವಃ
ಸ ಉರ್ವಶೀಲೋಕಮಥೋ ವಿಹಾಯ ।
ಆತ್ಮಾನಮಾತ್ಮನ್ಯವಗಮ್ಯ ಮಾಂ ವೈ
ಉಪಾರಮಜ್ಜ್ಞಾನವಿಧೂತಮೋಹಃ ॥ ೨೫ ॥

ತತೋ ದುಸ್ಸಂಗ ಮುತ್ಸೃಜ್ಯ ಸತ್ಸು ಸಜ್ಜೇತ ಬುದ್ಧಿಮಾನ್ ।
ಸಂತ ಏತಸ್ಯ ಛಿಂದಂತಿ ಮನೋವ್ಯಾಸಂಗಮುಕ್ತಿಭಿಃ ॥ ೨೬ ॥

ಸಂತೋಽನಪೇಕ್ಷಾ ಮಚ್ಚಿತ್ತಾಃ ಪ್ರಶಾಂತಾಃ ಸಮದರ್ಶಿನಃ ।
ನಿರ್ಮಮಾ ನಿರಹಂಕಾರಾ ನಿರ್ದ್ವಂದ್ವಾ ನಿಷ್ಪರಿಗ್ರಹಾಃ ॥ ೨೭ ॥

ತಂದೆ-ತಾಯಿಯರಿಗೆ ಸೇರಿದ್ದೇ? ವಿವಾಹಿತ ಪತ್ನಿಗೆ ಸೇರಿದ್ದೇ? ಅನ್ನವನ್ನಿಟ್ಟು ಸಾಕಿದ ಒಡೆಯನಿಗೆ ಸೇರಿದ್ದೇ? ಕೊನೆಗೆ ಬೆಂಕಿಗೆ ಸೇರಿದ್ದೇ? ನರಿ-ನಾಯಿಗಳಿಗೆ ಸೇರಿದ್ದೇ? ಇದನ್ನು ನನ್ನದೆಂದು ಹೇಳಲೇ? ಸುಹೃದ್ ಸಂಬಂಧಿಗಳದ್ದೆಂದು ಹೇಳಲೇ? ತುಂಬಾ ವಿಚಾರಮಾಡಿದಾಗ ಇದು ಯಾರದೂ ಅಲ್ಲ ಎಂಬುದೇ ನಿಶ್ಚಯವಾಗುತ್ತದೆ. ॥ ೧೯ ॥ ಈ ಶರೀರವು ಖಂಡಿತವಾಗಿ ಅಪವಿತ್ರವಾಗಿದ್ದು ಸ್ವರೂಪತಃ ತುಚ್ಛವಾಗಿದೆ. ಇಂತಹ ಶರೀರದಲ್ಲಿ ಆಸಕ್ತಿಯನ್ನಿರಿಸಿ 'ಆಹಾ! ಈ ಸ್ತ್ರೀಯ ಮುಖ, ಮೂಗು, ನಗು ಎಷ್ಟು ಸುಂದರವಾಗಿದೆ' ಎಂದು ಹೇಳತೊಡಗುತ್ತಾನೆ. ॥ ೨೦ ॥ ಈ ಶರೀರವು ಚರ್ಮ, ಮಾಂಸ, ಮಜ್ಜೆ ರಕ್ತ, ಸ್ನಾಯು, ಮೇದಸ್ಸು ಎಲುಬುಗಳ ರಾಶಿಯಾಗಿದೆ. ಮಲ-ಮೂತ್ರ, ಕೀವುಗಳಿಂದ ತುಂಬಿಕೊಂಡಿದೆ. ಮನುಷ್ಯನು ಇದರಲ್ಲಿ ರಮಿಸಿದರೆ ಮಲ ಮೂತ್ರದ ಕ್ರಿಮಿಗಳಿಗೂ ಇವನಿಗೂ ಅಂತರವೇನಿದೆ? ॥ ೨೧ ॥ ಆದಕ್ಕಾಗಿ ತನ್ನ ಒಳಿತನ್ನು ಬಯಸುವ ವಿವೇಕಿ ಮನುಷ್ಯನು ಸ್ತ್ರೀಯರ ಹಾಗೂ ಸ್ತ್ರೀಲಂಪಟರ ಸಂಗವನ್ನು ಎಂದಿಗೂ ಮಾಡಬಾರದು. ವಿಷಯ ಮತ್ತು ಇಂದ್ರಿಯಗಳ ಸಂಯೋಗದಿಂದಲೇ ಮನಸ್ಸಿನಲ್ಲಿ ವಿಕಾರ ಉಂಟಾಗುತ್ತದೆ. ಅದು ಬಿಟ್ಟು ವಿಕಾರಕ್ಕೆ ಬೇರೆ ಯಾವ ಅವಕಾಶವೂ ಇಲ್ಲ. ॥ ೨೨ ॥ ಎಂದೂ ನೋಡದ, ಕೇಳದೆ ಇರುವ ವಸ್ತುವಿನ ಕುರಿತು ಮನಸ್ಸಿನಲ್ಲಿ ವಿಕಾರ ಉಂಟಾಗುವುದಿಲ್ಲ. ವಿಷಯಗಳೊಂದಿಗೆ ಇಂದ್ರಿಯಗಳ ಸಂಯೋಗವು ಆಗದಂತೆ ನೋಡುವವನ ಮನಸ್ಸು ತಾನಾಗಿ ನಿಶ್ಚಲವಾಗಿ ಶಾಂತವಾಗುತ್ತದೆ. ಆದ್ದರಿಂದ ಮಾತು, ಕಿವಿ, ಮನಸ್ಸೇ ಮೊದಲಾದ ಇಂದ್ರಿಯಗಳಿಂದ ಸ್ತ್ರೀಯರ, ಸ್ತ್ರೀಲಂಪಟರ ಸಂಗ ಎಂದೂ ಮಾಡಬಾರದು. ನನ್ನಂತಹ ಜನರ ಮಾತಾದರೂ ಏನು, ದೊಡ್ಡ-ದೊಡ್ಡ ವಿದ್ವಾಂಸರಿಗೂ ಕೂಡ ತಮ್ಮ ಇಂದ್ರಿಯಗಳು ಮತ್ತು ಮನಸ್ಸು ನಂಬಲರ್ಹವಾದುವುಗಳಲ್ಲ. ॥ ೨೩-೨೪ ॥

**ಭಗವಾನ್ ಶ್ರೀಕೃಷ್ಣನು ಹೇಳುತ್ತಾನೆ** – ಉದ್ಧವನೇ! ರಾಜರಾಜೇಶ್ವರ ಪುರೂರವನ ಮನಸ್ಸಿನಲ್ಲಿ ಈ ರೀತಿಯ ಉದ್ಗಾರಗಳು ಏಳುತ್ತಿದ್ದಾಗ, ಅವನು ಊರ್ವಶಿಯ ಕಡೆಯಿಂದ ತನ್ನ ಮನಸ್ಸನ್ನು ಪೂರ್ಣವಾಗಿ ವಿಮುಖಗೊಳಿಸಿದನು. ಈಗ ಜ್ಞಾನೋದಯವಾದ ಕಾರಣ ಅವನ ಮೋಹವು ತೊಲಗಿತು. ಅವನು ತನ್ನ ಹೃದಯದಲ್ಲೇ ಆತ್ಮಸ್ವರೂಪನಾದ ನನ್ನ ಸಾಕ್ಷಾತ್ಕಾರಮಾಡಿಕೊಂಡನು ಹಾಗೂ ಶಾಂತಭಾವದಿಂದ ಸ್ಥಿತನಾದನು. ॥ ೨೫ ॥ ಆದಕ್ಕಾಗಿ ಬುದ್ಧಿವಂತರಾದ ಮನುಷ್ಯರು ಪುರೂರವನಂತೆ ಕುಸಂಗವನ್ನು ಬಿಟ್ಟು, ಸತ್ಪುರುಷರ ಸಂಗವನ್ನು ಮಾಡಬೇಕು. ಸಂತ ಮಹಾತ್ಮರು ತಮ್ಮ ಸದುಪದೇಶದಿಂದ ಅವನ ಮನಸ್ಸಿನ ಆಸಕ್ತಿಯನ್ನು ಇಲ್ಲವಾಗಿಸುತ್ತಾರೆ. ಸಂತ ಪುರುಷರಿಗೆ ಎಂದೂ ಯಾವುದೇ ವಸ್ತುವಿನ ಅಪೇಕ್ಷೆ ಇರುವುದಿಲ್ಲ. ಅವರ ಚಿತ್ತ ನನ್ನಲ್ಲೇ ತೊಡಗಿರುತ್ತದೆ. ಅವರ ಹೃದಯದಲ್ಲಿ ಶಾಂತಿಯ ಅಗಾಧ ಸಮುದ್ರವೇ ಉಕ್ಕುತ್ತಿರುತ್ತದೆ. ಅವರು ಯಾವಾಗಲೂ ಎಲ್ಲೆಡೆ, ಎಲ್ಲದರಲ್ಲಿ ಸಮರೂಪದಿಂದ ಸ್ಥಿತನಾದ ಭಗವಂತನನ್ನೇ ದರ್ಶಿಸುತ್ತಿರುತ್ತಾರೆ. ಅವರಲ್ಲಿ ಮಮತೆ, ಅಹಂಕಾರವು ಲೇಶಮಾತ್ರವೂ ಇರುವುದಿಲ್ಲ. ಅವರು ಚಳಿ-ಸೆಕೆ, ಸುಖ- ದುಃಖಾದಿ ದ್ವಂದ್ವಗಳಲ್ಲಿ ಏಕರಸವಾಗಿರುತ್ತಾರೆ. ಯಾವ ಪ್ರಕಾರದ ಪ್ರತಿಗ್ರಹವನ್ನೂ ಇರಿಸಿಕೊಳ್ಳುವುದಿಲ್ಲ. ॥ ೨೬-೨೭ ॥

ತೇಷು ನಿತ್ಯಂ ಮಹಾಭಾಗ ಮಹಾಭಾಗೇಷು ಮತ್ಕಥಾಃ ।
ಸಂಭವಂತಿ ಹಿತಾ ನೃಣಾಂ ಜುಷತಾಂ ಪ್ರಪುನಂತ್ಯಘಮ್ ॥ ೨೮ ॥

ತಾ ಯೇ ಶೃಣ್ವಂತಿ ಗಾಯಂತಿ ಹ್ಯನುಮೋದಂತಿ ಚಾದೃತಾಃ ।
ಮತ್ಪರಾಃ ಶ್ರದ್ದಧಾನಾಶ್ಚ ಭಕ್ತಿಂ ವಿಂದಂತಿ ತೇ ಮಯಿ ॥ ೨೯ ॥

ಭಕ್ತಿಂ ಲಬ್ಧವತಃ ಸಾಧೋಃ ಕಿಮನ್ಯದವಶಿಷ್ಯತೇ ।
ಮಯ್ಯನಂತಗುಣೇ ಬ್ರಹ್ಮಣ್ಯಾನಂದಾನುಭವಾತ್ಮನಿ ॥ ೩೦ ॥

ಯಥೋಪಶ್ರಯಮಾಣಸ್ಯ ಭಗವಂತಂ ವಿಭಾವಸುಮ್ ।
ಶೀತಂ ಭಯಂ ತಮೋಽಪ್ಯೇತಿ ಸಾಧೂನ್ಸಂಸೇವತಸ್ತಥಾ ॥ ೩೧ ॥

ನಿಮಜ್ಜ್ಯೋನ್ಮಜ್ಜತಾಂ ಘೋರೇ ಭವಾಬ್ಧೌ ಪರಮಾಯನಮ್ ।
ಸಂತೋ ಬ್ರಹ್ಮವಿದಃ ಶಾಂತಾ ನೌರ್ದೃಢೇವಾಪ್ಸು ಮಜ್ಜತಾಮ್ ॥ ೩೨ ॥

ಅನ್ನಂ ಹಿ ಪ್ರಾಣಿನಾಂ ಪ್ರಾಣ ಆರ್ತಾನಾಂ ಶರಣಂ ತ್ವಹಮ್ ।
ಧರ್ಮೋ ವಿತ್ತಂ ನೃಣಾಂ ಪ್ರೇತ್ಯ ಸಂತೋಽರ್ವಾಗ್ ಬಿಭ್ಯತೋಽರಣಮ್ ॥ ೩೩ ॥

ಸಂತೋ ದಿಶಂತಿ ಚಕ್ಷೂಂಷಿ ಬಹಿರರ್ಕಃ ಸಮುತ್ಥಿತಃ ।
ದೇವತಾ ಬಾಂಧವಾಃ ಸಂತಃ ಸಂತ ಆತ್ಮಾಹಮೇವ ಚ ॥ ೩೪ ॥

ವೈತಸೇನಸ್ತತೋಽಪ್ಯೇವಮುರ್ವಶ್ಯಾ ಲೋಕನಿಸ್ಪೃಹಃ ।
ಮುಕ್ತಸಂಗೋ ಮಹೀಮೇತಾಮಾತ್ಮಾರಾಮಶ್ಚಚಾರ ಹ ॥ ೩೫ ॥

ಮಹಾ ಭಾಗ್ಯಶಾಲೀ ಉದ್ಧವನೇ! ಸಂತರ ಸೌಭಾಗ್ಯದ ಮಹಿಮೆಯನ್ನು ಯಾರು ಹೊಗಳಬಲ್ಲರು? ಅವರು ನಡೆಸುವ ನನ್ನ ಕಥೆಗಳು ಮನುಷ್ಯರಿಗಾಗಿ ಪರಮ ಹಿತಕರವಾಗಿವೆ. ಅವರನ್ನು ಸೇವಿಸುವವನ ಎಲ್ಲ ಪಾಪಗಳು ತೊಳೆದುಹೋಗುತ್ತವೆ. ॥ ೨೮ ॥ ಯಾರು ಆದರ, ಶ್ರದ್ಧೆಯಿಂದ ನನ್ನ ಲೀಲಾ-ಕಥೆಗಳನ್ನು ಶ್ರವಣಿಸುತ್ತಾ, ಕೀರ್ತಿಸುತ್ತಾ, ಅನುಮೋದಿಸುವರೋ ಅವರು ನನ್ನ ಪರಾಯಣರಾಗಿ ಹೋಗುತ್ತಾರೆ ಮತ್ತು ನನ್ನ ಅನನ್ಯ ಪ್ರೇಮಮಯ ಭಕ್ತಿಯನ್ನು ಪಡೆದುಕೊಳ್ಳುವರು. ॥ ೨೯ ॥ ಎಲೈ ಉದ್ಧವನೇ! ನಾನೇ ಅನಂತ, ಅಚಿಂತ್ಯ ಕಲ್ಯಾಣಮಯ ಗುಣಗಳ ಆಶ್ರಯನಾಗಿರುವೆನು. ನಾನು ಕೇವಲ ಆನಂದಾನುಭವಸ್ವರೂಪೀ ಎಲ್ಲರ ಆತ್ಮಾ ಸಾಕ್ಷಾತ್ ಪರಬ್ರಹ್ಮನಾಗಿರುವೆನು. ನನ್ನ ಭಕ್ತಿಯು ದೊರಕಿದವನೇ ಸಂತನಾಗಿಹೋದನು. ಈಗ ಅವನಿಗೆ ಪಡೆಯುವುದು ಯಾವುದೂ ಬಾಕಿ ಉಳಿಯಲಿಲ್ಲ. ॥ ೩೦ ॥ ಅಂತಹ ಸತ್ಪುರುಷರಲ್ಲಿ ಶರಣಾದವರ ಕರ್ಮಜಡತೆ, ಸಂಸಾರಭಯ, ಅಜ್ಞಾನ, ಮುಂತಾದವುಗಳು ಸರ್ವಥಾ ನಿವೃತ್ತವಾಗಿ ಹೋಗುತ್ತವೆ. ಅಗ್ನಿಯನ್ನು ಆಶ್ರಯಿಸಿದವನಿಗೆ ಛಳಿಯಾಗಲೀ, ಅಂಧಕಾರವಾಗಲಿ ಇವುಗಳ ದುಃಖವು ಆಗಬಲ್ಲುದೇ? ॥ ೩೧ ॥ ನೀರಿನಲ್ಲಿ ಮುಳುಗಿದವನಿಗೆ ದೃಢವಾದ ನೌಕೆಯು ಆಶ್ರಯವಿರುವಂತೆ ಈ ಘೋರ ಸಂಸಾರ ಸಾಗರದಲ್ಲಿ ಮುಳುಗಿದವರಿಗೆ ಬ್ರಹ್ಮವೇತ್ತರಾದ, ಶಾಂತ ಸಂತರೇ ಏಕಮಾತ್ರ ಪರಮಾಶ್ರಯರಾಗಿದ್ದಾರೆ. ॥ ೩೨ ॥ ಅನ್ನದಿಂದ ಪ್ರಾಣಿಗಳ ಪ್ರಾಣಗಳು ರಕ್ಷಿಸಲ್ಪಡುವಂತೆ, ದೀನ-ದುಃಖಿಗಳ ಪರಮ ರಕ್ಷಕನು ನಾನೇ ಆಗಿರುವಂತೆ, ಪರಲೋಕದಲ್ಲಿ ಮನುಷ್ಯರಿಗೆ ಏಕಮಾತ್ರ ಧರ್ಮವು ರಕ್ಷಕವಾಗಿರುವಂತೆ, ಸಂಸಾರದಲ್ಲಿ ಭಯಭೀತರಾದವರಿಗೆ ಸಂತರೇ ಪರಮ ಧನ, ಪ್ರಾಣ ಮತ್ತು ಪರಮಾಶ್ರಯರಾಗಿದ್ದಾರೆ. ॥ ೩೩ ॥ ಸೂರ್ಯನು ಉದಯಿಸಿ ಜನರ ಕಣ್ಣುಗಳಿಗೆ ಪ್ರಕಾಶ ಕೊಡುವಂತೆ, ಸಂತ ಪುರುಷರು ತನ್ನನ್ನು ಹಾಗೂ ಭಗವಂತನನ್ನು ನೋಡಲಿಕ್ಕಾಗಿ ಅಂತರ್ದೃಷ್ಟಿಯನ್ನು ಕೊಡುತ್ತಾರೆ. ಸಂತರು ಅನುಗ್ರಹಶೀಲ ದೇವತೆಗಳಾಗಿದ್ದಾರೆ. ಸಂತರು ನನ್ನ ಸುಹೃದ್, ಹಿತೈಷಿಗಳಾಗಿದ್ದಾರೆ. ಸಂತರೇ ನನ್ನ ಪ್ರಿಯತಮ ಆತ್ಮಾ ಆಗಿದ್ದಾರೆ. ಹೆಚ್ಚೇನು ಹೇಳಲಿ? ಸ್ವಯಂ ನಾನೇ ಸಂತರ ರೂಪದಲ್ಲಿ ವಿದ್ಯಮಾನನಾಗಿದ್ದೇನೆ. ॥ ೩೪ ॥ ಪ್ರಿಯ ಉದ್ಧವನೇ! ಆತ್ಮ ಸಾಕ್ಷಾತ್ಕಾರವಾಗುತ್ತಲೇ ಇಲಾನಂದನ ಪುರೂರವನಿಗೆ ಊರ್ವಶಿಯ ಕಡೆಗಿನ ಸ್ಪೃಹೆಯು ಉಳಿಯಲಿಲ್ಲ. ಅವನ ಎಲ್ಲ ಆಸಕ್ತಿಗಳು ಇಲ್ಲವಾದುವು. ಅವನು ಆತ್ಮಾರಾಮನಾಗಿ ಸ್ವಚ್ಛಂದವಾಗಿ ಈ ಪೃಥ್ವಿಯಲ್ಲಿ ಸಂಚರಿಸತೊಡಗಿದನು. ॥ ೩೫ ॥

ಇಪ್ಪತ್ತಾರನೆಯ ಅಧ್ಯಾಯವು ಮುಗಿಯಿತು. ॥ ೨೬ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಏಕಾದಶ ಸ್ಕಂಧೇ ಷಡ್ವಿಂಶೋಽಧ್ಯಾಯಃ ॥ ೨೬ ॥

# ಇಪ್ಪತ್ತೇಳನೆಯ ಅಧ್ಯಾಯ

## ಭಗವಂತನ ಪೂಜಾ ವಿಧಾನ ವರ್ಣನೆ

*ಉದ್ಧವ ಉವಾಚ*

ಕ್ರಿಯಾಯೋಗಂ ಸಮಾಚಕ್ಷ್ವ ಭವದಾರಾಧನಂ ಪ್ರಭೋ ।
ಯಸ್ಮಾತ್ತ್ವಾಂ ಯೇ ಯಥಾರ್ಚಂತಿ ಸಾತ್ವತಾಃ ಸಾತ್ವತರ್ಷಭ ॥ ೧ ॥

ಏತದ್ವದಂತಿ ಮುನಯೋ ಮುಹುರ್ನಿಃಶ್ರೇಯಸಂ ನೃಣಾಮ್ ।
ನಾರದೋ ಭಗವಾನ್ ವ್ಯಾಸ ಆಚಾರ್ಯೋಽಂಗಿರಸಃ ಸುತಃ ॥ ೨ ॥

ನಿಸ್ಸೃತಂ ತೇ ಮುಖಾಂಭೋಜಾದ್ಯದಾಹ ಭಗವಾನಜಃ ।
ಪುತ್ರೇಭ್ಯೋ ಭೃಗುಮುಖ್ಯೇಭ್ಯೋ ದೇವ್ಯೈ ಚ ಭಗವಾನ್ ಭವಃ ॥ ೩ ॥

ಏತದ್ವೈ ಸರ್ವವರ್ಣಾನಾಮಾಶ್ರಮಾಣಾಂ ಚ ಸಮ್ಮತಮ್ ।
ಶ್ರೇಯಸಾಮುತ್ತಮಂ ಮನ್ಯೇ ಸ್ತ್ರೀಶೂದ್ರಾಣಾಂ ಚ ಮಾನದ ॥ ೪ ॥

ಏತತ್ಕಮಲಪತ್ರಾಕ್ಷ ಕರ್ಮಬಂಧವಿಮೋಚನಮ್ ।
ಭಕ್ತಾಯ ಚಾನುರಕ್ತಾಯ ಬ್ರೂಹಿ ವಿಶ್ವೇಶ್ವರೇಶ್ವರ ॥ ೫ ॥

*ಶ್ರೀಭಗವಾನುವಾಚ*

ನ ಹ್ಯಂತೋಽನಂತಪಾರಸ್ಯ ಕರ್ಮಕಾಂಡಸ್ಯ ಚೋದ್ಧವ ।
ಸಂಕ್ಷಿಪ್ತಂ ವರ್ಣಯಿಷ್ಯಾಮಿ ಯಥಾವದನುಪೂರ್ವಶಃ ॥ ೬ ॥

ವೈದಿಕಸ್ತಾಂತ್ರಿಕೋ ಮಿಶ್ರ ಇತಿ ಮೇ ತ್ರಿವಿಧೋ ಮಖಃ ।
ತ್ರಯಾಣಾಮೀಪ್ಸಿತೇನೈವ ವಿಧಿನಾ ಮಾಂ ಸಮರ್ಚಯೇತ್ ॥ ೭ ॥

ಯದಾ ಸ್ವನಿಗಮೇನೋಕ್ತಂ ದ್ವಿಜತ್ವಂ ಪ್ರಾಪ್ಯ ಪೂರುಷಃ ।
ಯಥಾ ಯಜೇತ ಮಾಂ ಭಕ್ತ್ಯಾ ಶ್ರದ್ಧಯಾ ತನ್ನಿಬೋಧ ಮೇ ॥ ೮ ॥

ಅರ್ಚಾಯಾಂ ಸ್ಥಂಡಿಲೇಽಗ್ನೌ ವಾ ಸೂರ್ಯೇ ವಾಪ್ಸು ಹೃದಿ ದ್ವಿಜೇ ।
ದ್ರವ್ಯೇಣ ಭಕ್ತಿಯುಕ್ತೋಽರ್ಚೇತ್ ಸ್ವಗುರುಂ ಮಾಮಮಾಯಯಾ ॥ ೯ ॥

**ಉದ್ಧವನು ಕೇಳಿದನು** – ಭಕ್ತವತ್ಸಲ ಕೃಷ್ಣಾ! ಯಾವ ಕ್ರಿಯಾ ಯೋಗವನ್ನು ಆಶ್ರಯಿಸಿ ಭಕ್ತಜನರು ಯಾವ ಪ್ರಕಾರದಿಂದ, ಯಾವ ಉದ್ದೇಶಕ್ಕಾಗಿ, ನಿನ್ನನ್ನು ಆರಾಧಿಸುತ್ತಾರೆ? ನೀನು ನಿನ್ನ ಆರಾಧನಾರೂಪವಾದ ಆ ಕ್ರಿಯಾಯೋಗವನ್ನು ವರ್ಣಿಸುವ ಕೃಪೆಮಾಡು. ॥ ೧ ॥ ದೇವರ್ಷಿಗಳಾದ ನಾರದರು, ಭಗವಾನ್ ವೇದವ್ಯಾಸರು, ಆಚಾರ್ಯ ಬೃಹಸ್ಪತಿಯರು ಮುಂತಾದ ದೊಡ್ಡ ದೊಡ್ಡ ಋಷಿ-ಮುನಿಗಳು – 'ಕ್ರಿಯಾಯೋಗದ ಮೂಲಕ ನಿನ್ನ ಆರಾಧನೆಯು ಮನುಷ್ಯರ ಪರಮ ಶ್ರೇಯಸ್ಸಿನ ಸಾಧನೆಯಾಗಿದೆ' ಎಂದು ಪದೇ-ಪದೇ ಹೇಳುತ್ತಾರೆ. ॥ ೨ ॥ ಈ ಪೂಜಾವಿಧಾನವು ಮೊಟ್ಟಮೊದಲು ನಿನ್ನ ಮುಖಾರವಿಂದದಿಂದಲೇ ಹೊರಟಿತ್ತು. ಇದನ್ನು ಬ್ರಹ್ಮದೇವರು ನಿನ್ನಿಂದ ಗ್ರಹಿಸಿ, ತನ್ನ ಪುತ್ರ ಭೃಗು ಮುಂತಾದ ಮಹರ್ಷಿಗಳಿಗೆ ಹಾಗೂ ಭಗವಾನ್ ಶಂಕರನು ತನ್ನ ಅರ್ಧಾಂಗಿನೀ ಭಗವತೀ ಪಾರ್ವತಿಗೆ ಉಪದೇಶಿಸಿದ್ದರು. ॥ ೩ ॥ ಮರ್ಯಾದಾರಕ್ಷಕ ಪ್ರಭೋ! ಈ ಪೂಜಾಪದ್ಧತಿಯು ಬ್ರಾಹ್ಮಣ ಕ್ಷತ್ರಿಯ ಮುಂತಾದ ವರ್ಣಗಳಿಗೆ, ಬ್ರಹ್ಮಚಾರೀ-ಗೃಹಸ್ಥ ಮುಂತಾದ ಆಶ್ರಮಿಗಳಿಗೆ ಪರಮ ಶ್ರೇಯಸ್ಕರವಾಗಿದೆ. ಸ್ತ್ರೀ ಶೂದ್ರಾದಿಗಳಿಗಾಗಿಯೂ ಇದು ಎಲ್ಲಕ್ಕಿಂತ ಶ್ರೇಷ್ಠಸಾಧನ ಪದ್ಧತಿ ಯಾಗಿದೆ ಎಂದು ನಾನು ತಿಳಿಯುತ್ತೇನೆ. ॥ ೪ ॥ ಕಮಲನಯನ ಶ್ಯಾಮಸುಂದರಾ! ನೀನು ಶಂಕರಾದಿ ಜಗದೀಶ್ವರರಿಗೂ ಈಶ್ವರ ನಾಗಿರುವೆ. ನಾನು ನಿನ್ನ ಚರಣಗಳ ಪ್ರೇಮೀ ಭಕ್ತನಾಗಿದ್ದೇನೆ. ನೀನು ದಯಮಾಡಿ ನನಗೆ ಕರ್ಮಬಂಧನದಿಂದ ಬಿಡುಗಡೆಗೊಳಿಸುವ ಈ ವಿಧಿಯನ್ನು ತಿಳಿಸುವವನಾಗು. ॥ ೫ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** – ಎಲೈ ಉದ್ಧವನೇ! ಕರ್ಮಕಾಂಡವು ಸೀಮೆಯೇ ಇಲ್ಲದಷ್ಟು ವಿಸ್ತಾರವಾಗಿದೆ. ಅದಕ್ಕಾಗಿ ನಾನು ಸ್ವಲ್ಪದರಲ್ಲಿ ಪೂರ್ವಾಪರಕ್ರಮದಿಂದ ವರ್ಣಿಸು ವೆನು. ॥ ೬ ॥ ನನ್ನ ಪೂಜೆಯಲ್ಲಿ ವೈದಿಕ, ತಾಂತ್ರಿಕ ಮತ್ತು ಮಿಶ್ರಿತ ಎಂಬ ಮೂರು ವಿಧಿಗಳಿವೆ. ಈ ಮೂರರಲ್ಲಿನ ಯಾವ ವಿಧಿಯು ನನ್ನ ಭಕ್ತನಿಗೆ ಅನುಕೂಲವಾಗಿದೆಯೋ, ಅದೇ ವಿಧಿಯಿಂದ ನನ್ನನ್ನು ಆರಾಧಿಸಬೇಕು. ॥ ೭ ॥ ಮೊದಲಿಗೆ ತನ್ನ ಅಧಿಕಾರಾನುಸಾರವಾಗಿ ಶಾಸ್ತ್ರೋಕ್ತ ವಿಧಿಯಿಂದ ಸಮಯಕ್ಕೆ ಸರಿಯಾಗಿ ಉಪನಯನ ಸಂಸ್ಕಾರದ ಮೂಲಕ ದ್ವಿಜತ್ವವನ್ನು ಪಡೆದು, ಮತ್ತೆ ಶ್ರದ್ಧೆ, ಭಕ್ತಿಯಿಂದೊಡಗೂಡಿ ಅವನು ಯಾವ ವಿಧಿಯಿಂದ ನನ್ನನ್ನು ಪೂಜಿಸಬೇಕೆಂಬುದನ್ನು ನಿನಗೆ ತಿಳಿಸುತ್ತೇನೆ. ॥ ೮ ॥ ಭಕ್ತಿಪೂರ್ವಕ ನಿಷ್ಕಪಟ ಭಾವದಿಂದ ನನ್ನ ಪ್ರತೀಕದಲ್ಲಾಗಲೀ, ವೇದಿಯ ಲ್ಲಾಗಲೀ, ಅಗ್ನಿಯಲ್ಲಾಗಲೀ, ನೀರಿನಲ್ಲಾಗಲೀ, ಹೃದಯದ ಲ್ಲಾಗಲೀ, ಅಥವಾ ಜ್ಞಾನಿಯಾದ ಬ್ರಾಹ್ಮಣನಲ್ಲಾಗಲೀ ಆತ್ಮಗುರು ವಾದ ನನ್ನನ್ನು ಆವಾಹನೆಮಾಡಿ ಆರಾಧನೆಮಾಡಬೇಕು. ॥ ೯ ॥

ಪೂರ್ವಂ ಸ್ನಾನಂ ಪ್ರಕುರ್ವೀತ ಧೌತದಂತೋಽಂಗಶುದ್ಧಯೇ ।
ಉಭಯೈರಪಿ ಚ ಸ್ನಾನಂ ಮಂತ್ರೈರ್ಮೃದ್ ಗ್ರಹಣಾದಿನಾ ॥ ೧೦ ॥

ಸಂಧ್ಯೋಪಾಸ್ತ್ಯಾದಿಕರ್ಮಾಣಿ ವೇದೇನಾಽಚೋದಿತಾನಿ ಮೇ ।
ಪೂಜಾಂ ತೈಃ ಕಲ್ಪಯೇತ್ ಸಮ್ಯಕ್ ಸಂಕಲ್ಪಃ ಕರ್ಮಪಾವನೀಮ್ ॥ ೧೧ ॥

ಶೈಲೀ ದಾರುಮಯೀ ಲೌಹೀ ಲೇಪ್ಯಾ ಲೇಖ್ಯಾ ಚ ಸೈಕತೀ ।
ಮನೋಮಯೀ ಮಣಿಮಯೀ ಪ್ರತಿಮಾಷ್ಟವಿಧಾ ಸ್ಮೃತಾ ॥ ೧೨ ॥

ಚಲಾಚಲೇತಿ ದ್ವಿವಿಧಾ ಪ್ರತಿಷ್ಠಾ ಜೀವಮಂದಿರಮ್ ।
ಉದ್ವಾಸಾವಾಹನೇ ನ ಸ್ತಃ ಸ್ಥಿರಾಯಾಮುದ್ಧವಾರ್ಚನೇ ॥ ೧೩ ॥

ಅಸ್ಥಿರಾಯಾಂ ವಿಕಲ್ಪಃ ಸ್ಯಾತ್ಸ್ಥಂಡಿಲೇ ತು ಭವೇದ್ದ್ವಯಮ್ ।
ಸ್ನಪನಂ ತ್ವವಿಲೇಪ್ಯಾಯಾಮನ್ಯತ್ರ ಪರಿಮಾರ್ಜನಮ್ ॥ ೧೪ ॥

ದ್ರವ್ಯೈಃ ಪ್ರಸಿದ್ಧೈರ್ಮದ್ಯಾಗಃ ಪ್ರತಿಮಾದಿಷ್ವಮಾಯಿನಃ ।
ಭಕ್ತಸ್ಯ ಚ ಯಥಾಲಬ್ಧೈರ್ಹೃದಿ ಭಾವೇನ ಚೈವ ಹಿ ॥ ೧೫ ॥

ಸ್ನಾನಾಲಂಕರಣಂ ಪ್ರೇಷ್ಠಮರ್ಚಾಯಾಮೇವ ತೂದ್ಧವ ।
ಸ್ಥಂಡಿಲೇ ತತ್ತ್ವವಿನ್ಯಾಸೋ ವಹ್ನಾವಾಜ್ಯಪ್ಲುತಂ ಹವಿಃ ॥ ೧೬ ॥

ಸೂರ್ಯೇ ಚಾಭ್ಯರ್ಹಣಂ ಪ್ರೇಷ್ಠಂ ಸಲಿಲೇ ಸಲಿಲಾದಿಭಿಃ ।
ಶ್ರದ್ಧಯೋಪಾಹೃತಂ ಪ್ರೇಷ್ಠಂ ಭಕ್ತೇನ ಮಮ ವಾರ್ಯಪಿ ॥ ೧೭ ॥

ಉಪಾಸಕನಾದವನು ಪ್ರಾತಃಕಾಲದಲ್ಲಿ ಹಲ್ಲುಗಳನ್ನುಜ್ಜಿಕೊಂಡು, ಶರೀರ ಶುದ್ಧಿಗಾಗಿ ಸ್ನಾನ ಮಾಡಬೇಕು. ಮತ್ತೆ ವೈದಿಕ ಮತ್ತು ತಾಂತ್ರಿಕಗಳೆಂಬ ಎರಡೂ ಪ್ರಕಾರದ ಮಂತ್ರಗಳಿಂದ ಮೃತ್ತಿಕಾಸ್ನಾನ ಮಾಡಬೇಕು. ॥ ೧೦ ॥ ಇದಾದ ಬಳಿಕ ವೇದೋಕ್ತ ಸಂಧ್ಯಾವಂದನಾದಿ ನಿತ್ಯಕರ್ಮಗಳನ್ನು ಮಾಡಬೇಕು. ಅನಂತರ ನನ್ನ ಆರಾಧನೆಗಾಗಿಯೇ ದೃಢವಾದ ಸಂಕಲ್ಪವನ್ನು ಗೈದು, ವೈದಿಕ ಹಾಗೂ ತಾಂತ್ರಿಕವಿಧಿಗಳಿಂದ ಕರ್ಮಬಂಧನದಿಂದ ಬಿಡಿಸುವಂತಹ ನನ್ನ ಪೂಜೆಯನ್ನು ಮಾಡಬೇಕು. ॥ ೧೧ ॥ ನನ್ನ ಪ್ರತಿಮೆಗಳಲ್ಲಿ (೧) ಕಲ್ಲಿನದು, (೨) ಮರದ್ದು, (೩) ಧಾತುಗಳದ್ದು, (೪) ಮಣ್ಣು- ಅಥವಾ ಗಂಧದ್ದು, (೫) ಚಿತ್ರರೂಪದಲ್ಲಿ ಬರೆದುದು, (೬) ಮಳಲಿನದ್ದು, (೭) ಮನೋಮಯ ಮತ್ತು (೮) ಮಣಿಮಯ – ಹೀಗೆ ಎಂಟು ಪ್ರಕಾರಗಳಾಗಿವೆ. ॥ ೧೨ ॥ ಚಲ ಮತ್ತು ಅಚಲ ಭೇದದಿಂದ ಒಂದು ಮೂರ್ತಿಯು ಅಚಲವಾಗಿ ಮಂದಿರದಲ್ಲಿ ಪ್ರತಿಷ್ಠಿತವಾಗಿದ್ದು, ಇನ್ನೊಂದು ರಥೋತ್ಸವಾದಿಗಳಿಗೆ ಉತ್ಸವಮೂರ್ತಿಯಾಗಿರುತ್ತದೆ. ಇಂತಹ ಎರಡು ಪ್ರಕಾರದ ಪ್ರತಿಮೆಗಳಲ್ಲಿಯೂ ಭಗವಂತನಾದ ನನ್ನ ಸನ್ನಿಧಾನವಿರುತ್ತದೆ. ಉದ್ಧವನೇ ! ಅಚಲ ಪ್ರತಿಮೆಯ ಪೂಜೆಯಲ್ಲಿ ಪ್ರತಿದಿನ ಆವಾಹನೆ, ವಿಸರ್ಜನೆ ಇರುವುದಿಲ್ಲ. ॥ ೧೩ ॥ ಚಲ ಪ್ರತಿಮೆಯ ಸಂಬಂಧದಲ್ಲಿ ಆವಾಹನೆ ಮಾಡುವುದೂ, ಮಾಡದಿರುವುದೂ ವಿಕಲ್ಪವಿದೆ. (ಚರಮೂರ್ತಿಯಾದ ಸಾಲಿಗ್ರಾಮದಲ್ಲಿ ಆವಾಹನೆ-ವಿಸರ್ಜನೆಗಳಿಲ್ಲ.) ಆದರೆ ಮಳಲಮೂರ್ತಿಯಲ್ಲಾದರೋ ಪ್ರತಿದಿನ ಆಹಾವನೆ-ವಿಸರ್ಜನೆಮಾಡಬೇಕು. ಮಣ್ಣಿನ, ಗಂಧದ, ಚಿತ್ರಪಟ ಮುಂತಾದ ಪ್ರತಿಮೆಗಳಿಗೆ ಸ್ನಾನಮಾಡಿಸದೆ, ಕೇವಲ ಪ್ರೋಕ್ಷಣೆ ಮಾಡಬೇಕು. ಆದರೆ ಉಳಿದ ಎಲ್ಲ ಪ್ರತಿಮೆಗಳಿಗೆ ಸ್ನಾನ ಮಾಡಿಸಬೇಕು. ॥ ೧೪ ॥

ವಿಧಿಗನುಗುಣವಾಗಿ ವಿಶೇಷ ಪೂಜಾಸಾಮಗ್ರಿಗಳಿಂದ ಪ್ರತಿಮಾದಿಗಳಲ್ಲಿ ನನ್ನ ಪೂಜೆ ಮಾಡಬೇಕು. ಆದರೆ ನಿಷ್ಕಾಮಭಕ್ತನು ಸುಲಭವಾಗಿ ದೊರೆಯುವ (ಪತ್ರ, ಪುಷ್ಪ, ಜಲ, ಫಲ) ಸಾಮಗ್ರಿಗಳಿಂದಲೇ ನನ್ನ ಪೂಜೆ ಮಾಡಲಿ. ಅಥವಾ ಹೃದಯದಲ್ಲಿ ನನ್ನನ್ನು ಧ್ಯಾನಿಸುತ್ತಾ ಮಾನಸಿಕ ಪೂಜೆಯನ್ನೂ ಮಾಡಬಹುದು. ॥ ೧೫ ॥ ಎಲೈ ಉದ್ಧವನೇ! ಸ್ನಾನ, ವಸ್ತ್ರ, ಆಭೂಷಣಾದಿಗಳಾದರೋ ಕಲ್ಲಿನ ಅಥವಾ ಧಾತುವಿನ ಪ್ರತಿಮೆಯ ಪೂಜೆಯಲ್ಲಿ ವಿನಿಯೋಗಿಸಬೇಕು. ಮಳಲುಮಯ ಮೂರ್ತಿ ಅಥವಾ ಮಣ್ಣಿನ ವೇದಿಕೆಯಲ್ಲಿ ಪೂಜೆ ಮಾಡುವುದಿದ್ದರೆ, ಅವುಗಳಲ್ಲಿ ಮಂತ್ರಗಳ ಮೂಲಕ ತತ್ತ್ವನ್ಯಾಸಮಾಡಿ, ಪ್ರಧಾನ ದೇವತೆಗಳನ್ನು ಸ್ಥಾಪಿಸಿ ಪೂಜಿಸಬೇಕು. ಅಗ್ನಿಯಲ್ಲಿ ಘೃತಮಿಶ್ರಿತ ಹವನ ಸಾಮಗ್ರಿಗಳಿಂದ ಆಹುತಿಗಳನ್ನಿತ್ತು ಪೂಜಿಸಬೇಕು. ॥ ೧೬ ॥ ಸೂರ್ಯನನ್ನೇ ನನ್ನ ಪ್ರತೀಕವಾಗಿಸಿಕೊಂಡು ಮಾಡಲಾಗುವ ಪೂಜೆ-ಉಪಾಸನೆಯಲ್ಲಿ ಪ್ರಧಾನವಾಗಿ ಅರ್ಘ್ಯದಾನ ಮತ್ತು ಉಪಸ್ಥಾನ, ನಮಸ್ಕಾರವಿರಬೇಕು. ನೀರಿನಲ್ಲಿ ತರ್ಪಣಾದಿಗಳಿಂದ ನನ್ನ ಉಪಾಸನೆ ಮಾಡಬೇಕು. ಯಾರಾದರೂ ನನ್ನ ಭಕ್ತನು ಶ್ರದ್ಧೆಯಿಂದ, ಹೃತ್ಪೂರ್ವಕವಾಗಿ ನೀರನ್ನು ಅರ್ಪಿಸಿದರೂ ನಾನು ಅದನ್ನು ತುಂಬಾ ಪ್ರೇಮದಿಂದ ಸ್ವೀಕರಿಸುತ್ತೇನೆ. ॥೧೭॥

ಭೂರ್ಯಪ್ಯಭಕ್ತೋಪಹೃತಂ ನ ಮೇ ತೋಷಾಯ ಕಲ್ಪತೇ ।
ಗಂಧೋ ಧೂಪಃ ಸುಮನಸೋ ದೀಪೋಽನ್ನಾದ್ಯಂ ಚ ಕಿಂ ಪುನಃ ॥ ೧೮ ॥

ಭಕ್ತಿಯಿಲ್ಲದವನು ನನಗೆ ಅನೇಕ ಸಾಮಗ್ರಿಗಳನ್ನು ನಿವೇದನೆ ಮಾಡಿದರೂ ಅದರಿಂದ ನಾನು ಸಂತುಷ್ಟನಾಗುವುದಿಲ್ಲ. ಆದರೆ ನನ್ನ ಭಕ್ತನು ನನಗೆ ಶ್ರದ್ಧಾಭಕ್ತಿಪೂರ್ವಕವಾಗಿ ನೀರನ್ನೇ ನಿವೇದನೆಗೈದರೂ ಅದರಿಂದ ನಾನು ಸಂತುಷ್ಟನಾಗುತ್ತೇನೆ. ಮತ್ತೆ ಪುಷ್ಪ, ಧೂಪ, ದೀಪ, ನೈವೇದ್ಯ ಮುಂತಾದ ಸಾಮಗ್ರಿಗಳಿಂದ ನನ್ನನ್ನು ಪೂಜಿಸಿದರೆ ಅವನಿಗಾಗಿ ಹೇಳುವುದೇನಿದೆ ? ॥ ೧೮ ॥

ಶುಚಿಃ ಸಂಭೃತಸಂಭಾರಃ ಪ್ರಾಗ್ದರ್ಭೈಃ ಕಲ್ಪಿತಾಸನಃ ।
ಆಸೀನಃ ಪ್ರಾಗುದಗ್ವಾರ್ಚೇದರ್ಚಾಯಾಮಥ ಸಮ್ಮುಖಃ ॥ ೧೯ ॥

ಕೃತನ್ಯಾಸಃ ಕೃತನ್ಯಾಸಾಂ ಮದರ್ಚಾಂ ಪಾಣಿನಾಽಽಮೃಜೇತ್ ।
ಕಲಶಂ ಪ್ರೋಕ್ಷಣೀಯಂ ಚ ಯಥಾವದುಪಸಾಧಯೇತ್ ॥ ೨೦ ॥

ತದದ್ಭಿರ್ದೇವಯಜನಂ ದ್ರವ್ಯಾಣ್ಯಾತ್ಮಾನಮೇವ ಚ ।
ಪ್ರೋಕ್ಷ್ಯ ಪಾತ್ರಾಣಿ ತ್ರೀಣ್ಯದ್ಭಿಸ್ತೈಸ್ತೈರ್ದ್ರವ್ಯೈಶ್ಚಸಾಧಯೇತ್ ॥ ೨೧ ॥

ಪಾದ್ಯಾರ್ಘ್ಯಾಚಮನೀಯಾರ್ಥಂ ತ್ರೀಣಿ ಪಾತ್ರಾಣಿ ದೈಶಿಕಃ ।
ಹೃದಾ ಶೀರ್ಷ್ಣಾಥ ಶಿಖಯಾ ಗಾಯತ್ರ್ಯಾ ಚಾಭಿಮಂತ್ರಯೇತ್ ॥ ೨೨ ॥

ಉಪಾಸಕನು ಮೊದಲಿಗೆ ಪೂಜೆಯ ಸಾಮಗ್ರಿಗಳನ್ನು ಅಣಿಗೊಳಿಸಿಕೊಳ್ಳಬೇಕು. ಮತ್ತೆ ಪೂರ್ವಾಗ್ರವಾಗಿ ಆಸನಕ್ಕಾಗಿ ದರ್ಭೆಗಳನ್ನು ಹಾಸಿಕೊಂಡು, ಪೂರ್ವ ಅಥವಾ ಉತ್ತರದ ಕಡೆಗೆ ಮುಖ ಮಾಡಿ ಪವಿತ್ರತೆಯಿಂದ ಆ ದರ್ಭಾಸನದಲ್ಲಿ ಕುಳಿತುಕೊಳ್ಳಬೇಕು. ಪ್ರತಿಮೆ ಅಚಲವಾಗಿದ್ದರೆ ಅದರ ಎದುರಿನಲ್ಲೇ ಕುಳಿತುಕೊಂಡು ಪೂಜೆಯನ್ನು ಪ್ರಾರಂಭಿಸಬೇಕು. ॥ ೧೯ ॥ ಮೊದಲಿಗೆ ವಿಧಿಪೂರ್ವಕ ಅಂಗನ್ಯಾಸ ಮತ್ತು ಕರನ್ಯಾಸಗಳನ್ನು ಮಾಡಿಕೊಂಡು, ಬಳಿಕ ಮೂರ್ತಿಯಲ್ಲಿ ಮಂತ್ರನ್ಯಾಸ (ತತ್ತ್ವನ್ಯಾಸ) ಮಾಡಬೇಕು. ದೇವರ ಮೇಲೆ ಹಿಂದೆ ಸಮರ್ಪಿಸಿದ ನಿರ್ಮಾಲ್ಯವನ್ನು ಕೈಯಿಂದ ತೆಗೆದು, ಚೆನ್ನಾಗಿ ಒರೆಸಿಡಬೇಕು. ಮತ್ತೆ ತುಂಬಿದ ಕಲಶ, ಪ್ರೋಕ್ಷಣಪಾತ್ರೆ, ಶಂಖ, ಗಂಟೆ ಇವುಗಳನ್ನು ಗಂಧಾಕ್ಷತೆಗಳಿಂದ ಪೂಜೆ ಮಾಡಬೇಕು. ॥ ೨೦ ॥ ಅನಂತರ ಪ್ರೋಕ್ಷಣಪಾತ್ರೆಯ ನೀರಿನಿಂದ ಪೂಜಾದ್ರವ್ಯಗಳನ್ನು ಮತ್ತು ತನ್ನ ಶರೀರವನ್ನು ಪ್ರೋಕ್ಷಿಸಿಕೊಳ್ಳಬೇಕು. ಪಾದ್ಯ, ಅರ್ಘ್ಯ, ಆಚಮನಗಳಿಗಾಗಿ ಮೂರು ಸಣ್ಣ ಪಾತ್ರೆಗಳಲ್ಲಿ ಕಲಶೋದಕವನ್ನು ತುಂಬಿ, ಪೂಜಾ ಪದ್ಧತಿಯಂತೆ ಸಾಮಗ್ರಿಗಳನ್ನು ಹಾಕಿ ಸಂಸ್ಕರಿಸಬೇಕು. (ಪಾದ್ಯಪಾತ್ರೆದಲ್ಲಿ – ಶ್ಯಾಮಾಕ, ದೂರ್ವೆ, ಕಮಲ, ವಿಷ್ಣುಕ್ರಾಂತ, ಗಂಧ, ತುಲಸೀದಳ ಇವುಗಳನ್ನೂ; ಅರ್ಘ್ಯಪಾತ್ರೆಯಲ್ಲಿ – ಗಂಧ, ಪುಷ್ಪ, ಅಕ್ಷತೆ, ಯವ, ಕುಶ, ಎಳ್ಳು, ಬಿಳಿಸಾಸಿವೆ, ಗರಿಕೆ ಇವುಗಳನ್ನೂ; ಆಚಮನ ಪಾತ್ರೆಯಲ್ಲಿ – ಜಾಜಿಹೂವು, ಲವಂಗ, ಕಂಕೋಲ ಇವುಗಳನ್ನೂ ಹಾಕಬೇಕು.) ॥ ೨೧ ॥ ಇದಾದ ಬಳಿಕ ಪೂಜಕನು ಪಾತ್ರೆಗಳಲ್ಲಿ ಕ್ರಮವಾಗಿ ಹೃದಯಮಂತ್ರ, ಶಿರೋಮಂತ್ರ, ಶಿಖಾಮಂತ್ರ ಇವುಗಳಿಂದ ಅಭಿಮಂತ್ರಿಸಿ, ಕೊನೆಗೆ ಈ ಮೂರೂ ಪಾತ್ರೆಗಳನ್ನು ಗಾಯತ್ರೀಮಂತ್ರದಿಂದ ಅಭಿಮಂತ್ರಿಸಬೇಕು. ॥ ೨೨ ॥ ಮತ್ತೆ ಪ್ರಾಣಾಯಾಮದಿಂದ ಪ್ರಾಣವಾಯುವನ್ನು ಮತ್ತು ಭಾವನೆಯ ಮೂಲಕ ಶರೀರಸ್ಥ ಅಗ್ನಿಯನ್ನು ಶುದ್ಧಗೊಳಿಸಿ, ಹೃದಯಕಮಲದಲ್ಲಿ ಪರಮಸೂಕ್ಷ್ಮ ಮತ್ತು ಶ್ರೇಷ್ಠವಾದ ದೀಪಶಿಖೆಯಂತಿರುವ ನನ್ನ ಜೀವಕಲೆಯನ್ನು ಧ್ಯಾನಿಸಬೇಕು. ದೊಡ್ಡ-ದೊಡ್ಡ ಸಿದ್ಧ-ಋಷಿ ಮುನಿಗಳು ಓಂಕಾರದ ಅಕಾರ, ಉಕಾರ, ಮಕಾರ, ಬಿಂದು, ನಾದ – ಈ ಐದು ಕಲೆಗಳ ಕೊನೆಯಲ್ಲಿ ಆ ಜೀವಕಲೆಯನ್ನು ಧ್ಯಾನಿಸುತ್ತಾರೆ. ॥ ೨೩ ॥ ಭಗವಂತನ ತೇಜೋಮಯ ಅಂಶವು ನನ್ನ ಹೃದಯದಲ್ಲಿದೆ, ಆ ಜೀವಕಲೆಯು ಆತ್ಮಸ್ವರೂಪವಾಗಿದೆ ಎಂದು ಪೂಜಕನು ಭಾವಿಸಬೇಕು. ಅವನ ತೇಜದಿಂದ ಇಡೀ ಅಂತಃಕರಣ ಮತ್ತು ಶರೀರ ತುಂಬಿಹೋದಾಗ ಮಾನಸಿಕ ಉಪಚಾರಗಳಿಂದ ಮನಸ್ಸಿನಲ್ಲೇ ಅವನನ್ನು ಪೂಜಿಸಬೇಕು. ತದನಂತರ ತನ್ಮಯನಾಗಿ ನನ್ನನ್ನು ಆವಾಹಿಸಿ ಪ್ರತಿಮಾದಿಗಳಲ್ಲಿ ಸ್ಥಾಪಿಸಬೇಕು. ಮತ್ತೆ ಅಂಗನ್ಯಾಸಮಾಡಿ ಮಂತ್ರಗಳ ಮೂಲಕ ನನ್ನ ಪೂಜೆ ಮಾಡಬೇಕು. ॥ ೨೪ ॥

ಪಿಂಡೇ ವಾಯ್ವಗ್ನಿಸಂಶುದ್ಧೇ ಹೃತ್ಪದ್ಮಸ್ಥಾಂ ಪರಾಂ ಮಮ ।
ಅಣ್ವೀಂ ಜೀವಕಲಾಂ ಧ್ಯಾಯೇನ್ನಾದಾಂತೇ ಸಿದ್ಧಭಾವಿತಾಮ್ ॥ ೨೩ ॥

ತಯಾಽಽತ್ಮಭೂತಯಾ ಪಿಂಡೇ ವ್ಯಾಪ್ತೇ ಸಂಪೂಜ್ಯ ತನ್ಮಯಃ ।
ಆವಾಹ್ಯಾರ್ಚಾದಿಷು ಸ್ಥಾಪ್ಯನ್ಯಸ್ತಾಂಗಂ ಮಾಂ ಪ್ರಪೂಜಯೇತ್ ॥ ೨೪ ॥

ಪಾದ್ಯೋಪಸ್ಪರ್ಶಾರ್ಹಣಾದೀನ್ ಉಪಚಾರಾನ್ ಪ್ರಕಲ್ಪಯೇತ್ ।
ಧರ್ಮಾದಿಭಿಶ್ಚ ನವಭಿಃ ಕಲ್ಪಯಿತ್ವಾऽऽಸನಂ ಮಮ ॥ ೨೫ ॥

ಪದ್ಮಮಷ್ಟದಲಂ ತತ್ರ ಕರ್ಣಿಕಾಕೇಸರೋಜ್ಜ್ವಲಮ್ ।
ಉಭಾಭ್ಯಾಂ ವೇದತಂತ್ರಾಭ್ಯಾಂ ಮಹ್ಯಂ ತೂಭಯಸಿದ್ಧಯೇ ॥ ೨೬ ॥

ಸುದರ್ಶನಂ ಪಾಂಚಜನ್ಯಂ ಗದಾಸೀಷುಧನುರ್ಹಲಾನ್ ।
ಮುಸಲಂ ಕೌಸ್ತುಭಂ ಮಾಲಾಂ ಶ್ರೀವತ್ಸಂ ಚಾನುಪೂಜಯೇತ್ ॥ ೨೭ ॥

ನಂದಂ ಸುನಂದಂ ಗರುಡಂ ಪ್ರಚಂಡಂ ಚಂಡಮೇವ ಚ ।
ಮಹಾಬಲಂ ಬಲಂ ಚೈವ ಕುಮುದಂ ಕುಮುದೇಕ್ಷಣಮ್ ॥ ೨೮ ॥

ದುರ್ಗಾಂ ವಿನಾಯಕಂ ವ್ಯಾಸಂ ವಿಷ್ವಕ್ಸೇನಂ ಗುರೂನ್ಸುರಾನ್ ।
ಸ್ವೇ ಸ್ವೇ ಸ್ಥಾನೇ ತ್ವಭಿಮುಖಾನ್ ಪೂಜಯೇತ್ ಪ್ರೋಕ್ಷಣಾದಿಭಿಃ ॥ ೨೯ ॥

ಚಂದನೋಶೀರಕರ್ಪೂರಕುಂಕುಮಾಗುರುವಾಸಿತೈಃ ।
ಸಲಿಲೈಃ ಸ್ನಾಪಯೇನ್ಮಂತ್ರೈರ್ನಿತ್ಯದಾ ವಿಭವೇ ಸತಿ ॥ ೩೦ ॥

ಸ್ವರ್ಣಘರ್ಮಾನುವಾಕೇನ ಮಹಾಪುರುಷವಿದ್ಯಯಾ ।
ಪೌರುಷೇಣಾಪಿ ಸೂಕ್ತೇನ ಸಾಮಭೀ ರಾಜನಾದಿಭಿಃ ॥ ೩೧ ॥

ವಸ್ತ್ರೋಪವೀತಾಭರಣಪತ್ರಸ್ರಗ್ಗಂಧಲೇಪನೈಃ ।
ಅಲಂಕುರ್ವೀತ ಸಪ್ರೇಮ ಮದ್ಭಕ್ತೋ ಮಾಂ ಯಥೋಚಿತಮ್ ॥ ೩೨ ॥

ಎಲೈ ಉದ್ಧವನೇ! ನನ್ನ ಸಿಂಹಾಸನ (ಪೀಠ) ದಲ್ಲಿ ಧರ್ಮವೇ ಆದಿ ಗುಣಗಳನ್ನು ಮತ್ತು ವಿಮಲಾ ಮೊದಲಾದ ನವಶಕ್ತಿಗಳನ್ನು ಕಲ್ಪಿಸಿ ಆವಾಹಿಸಬೇಕು. ಅಂದರೆ ಪೀಠದ ನಾಲ್ಕೂ ಮೂಲೆಗಳಲ್ಲಿ ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯ ಈ ನಾಲ್ಕು ಕಾಲುಗಳಿವೆ. ಅಧರ್ಮ, ಅಜ್ಞಾನ, ಅವೈರಾಗ್ಯ, ಅನೈಶ್ವರ್ಯ ಎಂಬ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ದಂಡಗಳಿವೆ. ಸತ್ತ್ವ, ರಜ, ತಮ ಎಂಬ ಮೂರು ಮೆಟ್ಟಲುಗಳಿಂದ ಕೂಡಿದ ಪೀಠವಿದೆ. ಅದರ ಮೇಲೆ ವಿಮಲಾ, ಉತ್ಕರ್ಷಿಣೀ, ಜ್ಞಾನಾ, ಕ್ರಿಯಾ, ಯೋಗಾ, ಪ್ರಹ್ವೀ, ಸತ್ಯಾ, ಈಶಾನಾ, ಅನುಗ್ರಹಾ ಎಂಬ ನವಶಕ್ತಿಗಳು ವಿರಾಜಮಾನ ವಾಗಿವೆ. ಆ ಪೀಠದಲ್ಲಿ ಒಂದು ಅಷ್ಟದಳ ಕಮಲವಿದೆ. ಅದರ ಕರ್ಣಿಕಾ ಅತ್ಯಂತ ಪ್ರಕಾಶಮಾನವಾಗಿದೆ ಮತ್ತು ಹಳದಿ ಬಣ್ಣದ ಕೇಸರಗಳ ಪ್ರಭೆ ಅಲೌಕಿಕವಾಗಿದೆ. ಆಸನದ ಸಂಬಂಧವಾಗಿ ಹೀಗೆ ಭಾವನೆ ಮಾಡಿ, ಪಾದ್ಯ, ಅರ್ಘ್ಯ, ಆಚಮನ ಮುಂತಾದ ಉಪ ಚಾರಗಳನ್ನು ಅರ್ಪಿಸಬೇಕು. ಬಳಿಕ ಭೋಗ ಮತ್ತು ಮೋಕ್ಷದ ಸಿದ್ಧಿಗಾಗಿ ವೈದಿಕ ಹಾಗೂ ತಾಂತ್ರಿಕ ವಿಧಿಯಿಂದ ನನ್ನನ್ನು ಪೂಜಿಸ ಬೇಕು. ॥ ೨೫-೨೬ ॥

ಸುದರ್ಶನ ಚಕ್ರ, ಪಾಂಚಜನ್ಯ ಶಂಖ ಕೌಮೋದಕೀ ಗದೆ, ಖಡ್ಗ ಬಾಣ, ಧನುಸ್ಸು ಹಲ, ಮುಸಲ ಎಂಬ ಎಂಟು ಆಯುಧ ಗಳನ್ನು ಎಂಟು ದಿಕ್ಕುಗಳಲ್ಲಿಯೂ ಪೂಜಿಸಬೇಕು. ಕೌಸ್ತುಭಮಣಿ, ವೈಜಯಂತೀಮಾಲೆ, ಶ್ರೀವತ್ಸಲಾಂಛನ ವಕ್ಷಸ್ಥಳದ ಯಥಾಸ್ಥಾನ ದಲ್ಲಿ ಪೂಜಿಸಬೇಕು. ॥ ೨೭ ॥ ನಂದ, ಸುನಂದ, ಪ್ರಚಂಡ, ಚಂಡ, ಮಹಾಬಲ, ಬಲ, ಕುಮುದ, ಕುಮುದೇಕ್ಷಣ – ಈ ಎಂಟು ಮಂದಿ ನನ್ನ ಪಾರ್ಷದರನ್ನು ಎಂಟುದಿಕ್ಕುಗಳಲ್ಲಿ ಸ್ಥಾಪಿಸಿ ಪೂಜಿಸಬೇಕು. ಗರುಡನನ್ನು ಇದಿರುಗಡೆಯಲ್ಲಿ ಸ್ಥಾಪಿಸಿ ಪೂಜಿಸ ಬೇಕು. ಬಳಿಕ ದುರ್ಗೆ, ವಿನಾಯಕ, ವ್ಯಾಸ, ವಿಷ್ವಕ್ಸೇನರನ್ನು ನಾಲ್ಕೂ ಮೂಲೆಗಳಲ್ಲಿ ಸ್ಥಾಪಿಸಿ ಪೂಜಿಸಬೇಕು. ಬಲಭಾಗದಲ್ಲಿ ಗುರು ವನ್ನು, ಪೂರ್ವಾದಿ ಎಂಟು ದಿಕ್ಕುಗಳಲ್ಲಿ ಇಂದ್ರಾದಿ ಅಷ್ಟ-ದಿಕ್ಪಾಲ ಕರನ್ನು ಸ್ಥಾಪಿಸಿ, ಪ್ರೋಕ್ಷಣ, ಪಾದ್ಯ, ಅರ್ಘ್ಯಪ್ರದಾನಾದಿ ಕ್ರಮಗ ಳಿಂದ ಪೂಜೆ ಮಾಡಬೇಕು. ॥ ೨೮-೨೯ ॥

ಪ್ರಿಯ ಉದ್ಧವನೇ! ಸಾಮರ್ಥ್ಯ, ವೈಭವಗಳಿದ್ದರೆ ಪ್ರತಿ ದಿನವೂ ಚಂದನ, ಲಾವಂಚ, ಪಚ್ಚಕರ್ಪೂರ, ಕುಂಕುಕೇಸರಿ, ಅಗರು ಮುಂತಾದ ಸುಗಂಧ ದ್ರವ್ಯಗಳಿಂದ ಸುವಾಸಿತ ಜಲದಿಂದ ನನಗೆ ಅಭಿಷೇಕ ಮಾಡಬೇಕು. **'ಸುವರ್ಣಂ ಘರ್ಮಂ ಪರಿವೇದ ವೇನಮ್'** ಸ್ವರ್ಣ ಘರ್ಮಾನುವಾಕದಿಂದಲೂ, **'ಜಿತಂತೇ ಪುಂಡರೀಕಾಕ್ಷ'** ಎಂಬ ಮಹಾಪುರುಷವಿದ್ಯೆಯಿಂದಲೂ, ಪುರುಷ ಸೂಕ್ತದಿಂದಲೂ, **'ಇಂದ್ರಂ ನ ರೋನೇ ಮಥಿತಾ ಹವಂತ'** ಮುಂತಾದ ರಾಜನಾದಿ ಸಾಮಗಾನದಿಂದಲೂ ನನಗೆ ಅಭಿಷೇಕ ಮಾಡಬೇಕು. ॥ ೩೦-೩೧ ॥ ನನ್ನ ಭಕ್ತನು – ವಸ್ತ್ರ, ಯಜ್ಞೋಪವೀತ, ಆಭೂಷಣ, ಪತ್ರ, ಪುಷ್ಪಮಾಲೆ, ಗಂಧ, ಚಂದನಾದಿಗಳಿಂದ ಪ್ರೇಮಪೂರ್ವಕ ಯಥಾವತ್ ನನ್ನನ್ನು ಶೃಂಗರಿಸಲಿ. ॥ ೩೨ ॥

ಪಾದ್ಯಮಾಚಮನೀಯಂ ಚ ಗಂಧಂ ಸುಮನಸೋಽಕ್ಷತಾನ್ ।
ಧೂಪದೀಪೋಪಹಾರ್ಯಾಣಿ ದದ್ಯಾನ್ಮೇ ಶ್ರದ್ಧಯಾರ್ಚಕಃ ॥ ೩೩ ॥

ಗುಡಪಾಯಸಸರ್ಪೀಂಷಿ ಶಷ್ಕುಲ್ಯಾಪೂಪಮೋದಕಾನ್ ।
ಸಂಯಾವದಧಿಸೂಪಾಂಶ್ಚ ನೈವೇದ್ಯಂ ಸತಿ ಕಲ್ಪಯೇತ್ ॥ ೩೪ ॥

ಅಭ್ಯಂಗೋನ್ಮರ್ದನಾದರ್ಶದಂತಧಾವಾಭಿಷೇಚನಮ್ ।
ಅನ್ನಾದ್ಯಗೀತನೃತ್ಯಾದಿ ಪರ್ವಣಿ ಸ್ಯುರುತಾನ್ವಹಮ್ ॥ ೩೫ ॥

ವಿಧಿನಾ ವಿಹಿತೇ ಕುಂಡೇ ಮೇಖಲಾಗರ್ತವೇದಿಭಿಃ ।
ಅಗ್ನಿಮಾಧಾಯ ಪರಿತಃ ಸಮೂಹೇತ್ಪಾಣಿನೋದಿತಮ್ ॥ ೩೬ ॥

ಪರಿಸ್ತೀರ್ಯಾಥ ಪರ್ಯುಕ್ಷೇದನ್ವಾಧಾಯ ಯಥಾವಿಧಿ ।
ಪ್ರೋಕ್ಷಣ್ಯಾಽಽಸಾದ್ಯ ದ್ರವ್ಯಾಣಿ ಪ್ರೋಕ್ಷ್ಯಾಗ್ನೌ ಭಾವಯೇತ ಮಾಮ್ ॥ ೩೭ ॥

ತಪ್ತಜಾಂಬೂನದಪ್ರಖ್ಯಂ ಶಂಖಚಕ್ರಗದಾಂಬುಜೈಃ ।
ಲಸಚ್ಚತುರ್ಭುಜಂ ಶಾಂತಂ ಪದ್ಮಕಿಂಜಲ್ಕವಾಸಸಮ್ ॥ ೩೮ ॥

ಸ್ಫುರತ್ಕಿರೀಟಕಟಕಕಟಿಸೂತ್ರವರಾಂಗದಮ್ ।
ಶ್ರೀವತ್ಸವಕ್ಷಸಂ ಭ್ರಾಜತ್ಕೌಸ್ತುಭಂ ವನಮಾಲಿನಮ್ ॥ ೩೯ ॥

ಧ್ಯಾಯನ್ನಭ್ಯರ್ಚ್ಯ ದಾರೂಣಿ ಹವಿಷಾಭಿಘೃತಾನಿ ಚ ।
ಪ್ರಾಸ್ಯಾಜ್ಯಭಾಗಾವಾಘಾರೌ ದತ್ತ್ವಾ ಚಾಜ್ಯಪ್ಲುತಂ ಹವಿಃ ॥ ೪೦ ॥

ಜುಹುಯಾನ್ಮೂಲಮಂತ್ರೇಣ ಷೋಡಶರ್ಚಾವದಾನತಃ ।
ಧರ್ಮಾದಿಭ್ಯೋ ಯಥಾನ್ಯಾಯಂ ಮಂತ್ರೈಃ ಸ್ವಿಷ್ಟಕೃತಂ ಬುಧಃ ॥ ೪೧ ॥

ಪೂಜಕನು ಶ್ರದ್ಧೆಯಿಂದ ನನಗೆ ಪಾದ್ಯ, ಆಚಮನ, ಚಂದನ, ಪುಷ್ಪ, ಅಕ್ಷತೆ, ಧೂಪ, ದೀಪ, ಮುಂತಾದ ಉಪಚಾರಗಳನ್ನು ಸಮರ್ಪಿಸಲಿ. ॥ ೩೩ ॥ ಅನುಕೂಲಕ್ಕೆ ತಕ್ಕಂತೆ ಬೆಲ್ಲ-ಪಾಯಸ, ತುಪ್ಪ, ಚಕ್ಕುಲಿ, ಅಪೂಪ (ವಡೆ), ಎರೆಯಪ್ಪ, ಅತಿರಸ, ಸಿಹಿಕಡಬು, ಲಾಡು, ಮೊಸರು, ತೊವ್ವೆ ಮೊದಲಾದ ನಾನಾ ವ್ಯಂಜನಗಳನ್ನು ನೈವೇದ್ಯಮಾಡಲಿ. ॥ ೩೪ ॥ ನನ್ನ ಶ್ರೀವಿಗ್ರಹಕ್ಕೆ ದಂತಧಾವನ, ಎಣ್ಣೆಮಜ್ಜನ, ಅಂಗಗಳನ್ನು ಒತ್ತುವಿಕೆ, ಪಂಚಾಮೃತಾಭಿಷೇಕ, ಸುಗಂಧದ್ರವ್ಯಗಳ ಲೇಪನಮಾಡಿ, ಅಲಂಕಾರ, ಕನ್ನಡಿಸೇವೆ, ಅನ್ನಭಕ್ಷ್ಯಗಳ ನೈವೇದ್ಯ ಇತ್ಯಾದಿಗಳನ್ನು ಪ್ರತಿನಿತ್ಯವೂ ಮಾಡಬೇಕು. ನೃತ್ಯ-ಗೀತಾದಿ ಸೇವೆಯನ್ನು ನಿತ್ಯವೂ ಮಾಡಬಹುದು, ಸೌಕರ್ಯವಿಲ್ಲದಿದ್ದರೆ ಪರ್ವದಿವಸಗಳಲ್ಲಾದರೂ ಮಾಡಬೇಕು. ಜೊತೆಗೆ ಭಗವನ್ನಾಮ ಸಂಕೀರ್ತನೆ, ಹರಿಕಥೆಗಳನ್ನೂ ಏರ್ಪಡಿಸಬೇಕು. ॥ ೩೫ ॥

ಉದ್ಧವನೇ ! ಪೂಜಕನು ತನ್ನ ಗೃಹ್ಯೋಕ್ತವಿಧಿಯಿಂದ ನಿರ್ಮಿತವಾದ ಮೇಖಲೇ, ಗರ್ತ, ವೇದಿ ಇವುಗಳಿಂದ ಕೂಡಿದ ಕುಂಡದಲ್ಲಿ ಅಗ್ನಿಯನ್ನು ಪ್ರತಿಷ್ಠಾಪಿಸಿ, ಪ್ರಜ್ವಲನಗೊಳಿಸಬೇಕು. ಸುತ್ತಲೂ ಕೈಯಿಂದ ನೀರನ್ನು ಪ್ರೋಕ್ಷಿಸಿ ಅದನ್ನು ಪರಿಸಮೂಹನ ಮಾಡಬೇಕು. ॥ ೩೬ ॥ ಬಳಿಕ ಹೋಮಕುಂಡದ ನಾಲ್ಕೂ ಕಡೆಗಳಲ್ಲಿಯೂ ಪರಿಸ್ತರಣವನ್ನು ಹಾಸಿ, ಪ್ರೋಕ್ಷಣಪಾತ್ರೆಯಲ್ಲಿರುವ ಜಲದಿಂದ ಸುತ್ತಲೂ ಪ್ರೋಕ್ಷಿಸಿ, ಸ್ವಗೃಹ್ಯೋಕ್ತವಿಧಿಯಿಂದ, ಸಮಿತ್ ಪ್ರಕ್ಷೇಪಾದಿ ವಿಧಿಯಿಂದ ಅನ್ವಾಧಾನ ಕರ್ಮವನ್ನು ಮಾಡಿ, ಅಗ್ನಿಗೆ ಉತ್ತರದಲ್ಲಿ ಹೋಮಕ್ಕೆ ಉಪಯುಕ್ತವಾದ ದ್ರವ್ಯಗಳನ್ನಿಟ್ಟು ಪ್ರೋಕ್ಷಣೀಪಾತ್ರೆಯ ಜಲದಿಂದ ಪ್ರೋಕ್ಷಿಸಬೇಕು. ಅನಂತರ ಆ ಅಗ್ನಿಯಲ್ಲಿ ನನ್ನನ್ನು ಧ್ಯಾನಿಸಬೇಕು. ॥ ೩೭ ॥ ಪುಟಕ್ಕೆ ಹಾಕಿದ ಭಂಗಾರದ ಹೊಂಬಣ್ಣದಿಂದ ಬೆಳಗುವ ಶರೀರದಿಂದ ಕೂಡಿರುವ, ಶಂಖ, ಚಕ್ರ, ಗದೆ, ಪದ್ಮ ಇವುಗಳಿಂದ ಸಮಲಂಕೃತವಾದ ನಾಲ್ಕು ಭುಜಗಳಿಂದ ಶೋಭಾಯಮಾನವಾದ, ಶಾಂತವಾದ ಮುಖಭಾವದಿಂದಿರುವ, ಕಮಲದ ಕೇಸರದಂತೆ ನವುರಾಗಿರುವ ಪೀತಾಂಬರವನ್ನು ಉಟ್ಟಿರುವ, ಕಿರೀಟ, ಕಂಕಣ, ಕಟಿಸೂತ್ರ, ಭುಜಕೀರ್ತಿಗಳಿಂದ ಕಂಗೊಳಿಸುತ್ತಿರುವ, ವಕ್ಷಃಸ್ಥಳದಲ್ಲಿ ಶ್ರೀವತ್ಸ ಲಾಂಛನವನ್ನೂ, ಕೌಸ್ತುಭಮಣಿಯನ್ನೂ, ವನಮಾಲೆಯನ್ನೂ ಧರಿಸಿರುವ, ನನ್ನ ದಿವ್ಯ ಮಂಗಳ ವಿಗ್ರಹವನ್ನು ಧ್ಯಾನಿಸಬೇಕು. ॥ ೩೮-೩೯ ॥ ಅಗ್ನಿಯಲ್ಲಿ ನನ್ನ ಈ ಮೂರ್ತಿಯನ್ನು ಧ್ಯಾನಿಸಿ ಪೂಜಿಸಬೇಕು. ಬಳಿಕ ಒಣಗಿದ ಸಮಿಧೆಗಳನ್ನು ತುಪ್ಪದಲ್ಲಿ ಅದ್ದಿ ಆಹುತಿಯನ್ನು ಕೊಡಬೇಕು. ಆಜ್ಯ ಭಾಗ ಮತ್ತು ಆಘಾರವೆಂಬ ಎರಡು ಆಹುತಿಗಳಿಂದ ಹವನ ಮಾಡಬೇಕು. ಬಳಿಕ ತುಪ್ಪದಲ್ಲಿ ಅದ್ದಿ ಬೇರೆ ಹವನ ದ್ರವ್ಯದಿಂದ ಆಹುತಿಗಳನ್ನು ಕೊಡಬೇಕು. ॥ ೪೦ ॥ ಇದಾದ ಬಳಿಕ ತನ್ನ ಇಷ್ಟಮಂತ್ರದಿಂದ ಅಥವಾ **'ಓಂ ನಮೋ ನಾರಾಯಣಾಯ'** ಈ ಅಷ್ಟಾಕ್ಷರ ಮಂತ್ರದಿಂದ, ಮತ್ತು ಪುರುಷಸೂಕ್ತದ ಹದಿನಾರು ಮಂತ್ರಗಳಿಂದ ಹವನ ಮಾಡಬೇಕು. ಬುದ್ಧಿವಂತನಾದವನು ಧರ್ಮಾದಿ ದೇವತೆಗಳಿಗೂ ವಿಧಿಪೂರ್ವಕ ಮಂತ್ರಗಳಿಂದ ಆಹುತಿಯನ್ನು ನೀಡಿ ಕೊನೆಯಲ್ಲಿ ಸ್ವಿಷ್ಟಕೃತ್ ಆಹುತಿಯನ್ನು ಕೊಡಬೇಕು. ॥ ೪೧ ॥

ಅಭ್ಯರ್ಚ್ಯಾಥ ನಮಸ್ಕೃತ್ಯ ಪಾರ್ಷದೇಭ್ಯೋ ಬಲಿಂ ಹರೇತ್ ।
ಮೂಲಮಂತ್ರಂ ಜಪೇದ್ಬ್ರಹ್ಮ ಸ್ಮರನ್ನಾರಾಯಣಾತ್ಮಕಮ್ ॥ ೪೨ ॥

ದತ್ತ್ವಾಽಽಚಮನಮುಚ್ಛೇಷಂ ವಿಷ್ವಕ್ಸೇನಾಯ ಕಲ್ಪಯೇತ್ ।
ಮುಖವಾಸಂ ಸುರಭಿಮತ್ತಾಂಬೂಲಾದ್ಯಮಥಾರ್ಹಯೇತ್ ॥ ೪೩ ॥

ಉಪಗಾಯನ್ಗೃಣನ್ ನೃತ್ಯನ್ ಕರ್ಮಾಣ್ಯಭಿನಯನ್ ಮಮ ।
ಮತ್ಕಥಾಃ ಶ್ರಾವಯನ್ ಶೃಣ್ವನ್ ಮುಹೂರ್ತಂ ಕ್ಷಣಿಕೋ ಭವೇತ್ ॥ ೪೪ ॥

ಸ್ತವೈರುಚ್ಚಾವಚೈಃ ಸ್ತೋತ್ರೈಃ ಪೌರಾಣೈಃ ಪ್ರಾಕೃತೈರಪಿ ।
ಸ್ತುತ್ವಾ ಪ್ರಸೀದ ಭಗವನ್ನಿತಿ ವಂದೇತ ದಂಡವತ್ ॥ ೪೫ ॥

ಶಿರೋ ಮತ್ಪಾದಯೋಃ ಕೃತ್ವಾ ಬಾಹುಭ್ಯಾಂ ಚ ಪರಸ್ಪರಮ್ ।
ಪ್ರಪನ್ನಂ ಪಾಹಿ ಮಾಮೀಶ ಭೀತಂ ಮೃತ್ಯುಗ್ರಹಾರ್ಣವಾತ್ ॥ ೪೬ ॥

ಇತಿ ಶೇಷಾಂ ಮಯಾ ದತ್ತಾಂ ಶಿರಸ್ಯಾಧಾಯ ಸಾದರಮ್ ।
ಉದ್ವಾಸಯೇಚ್ಚೇದುದ್ವಾಸ್ಯಂ ಜ್ಯೋತಿರ್ಜ್ಯೋತಿಷಿ ತತ್ಪುನಃ ॥ ೪೭ ॥

ಅರ್ಚಾದಿಷು ಯದಾ ಯತ್ರ ಶ್ರದ್ಧಾ ಮಾಂ ತತ್ರ ಚಾರ್ಚಯೇತ್ ।
ಸರ್ವಭೂತೇಷ್ವಾತ್ಮನಿ ಚ ಸರ್ವಾತ್ಮಾಹಮವಸ್ಥಿತಃ ॥ ೪೮ ॥

ಹೀಗೆ ಅಗ್ನಿಯಲ್ಲಿ ಅಂತರ್ಯಾಮಿಯಾಗಿ ಸ್ಥಿತನಾದ ಭಗವಂತನ ಪೂಜೆಮಾಡಿ, ಅವನಿಗೆ ನಮಸ್ಕರಿಸಬೇಕು. ನಂದ, ಸುನಂದ ಮುಂತಾದ ಪಾರ್ಷದರಿಗೆ ಎಂಟೂದಿಕ್ಕುಗಳಲ್ಲಿ ಹವನಾಂಗ ಪಾಯಸಬಲಿಯನ್ನು ಅರ್ಪಿಸಬೇಕು. ಬಳಿಕ ಪ್ರತಿಮೆಯ ಮುಂದೆ ಕುಳಿತು ಪರಬ್ರಹ್ಮಸ್ವರೂಪೀ ಭಗವಾನ್ ನಾರಾಯಣನನ್ನು ಸ್ಮರಿಸಬೇಕು ಮತ್ತು ಭಗವತ್ಸ್ವರೂಪ ಮೂಲಮಂತ್ರ **'ಓಂ ನಮೋ ನಾರಾಯಣಾಯ'** ಇದರ ಜಪಮಾಡಬೇಕು. ॥ ೪೨ ॥ ಇದಾದ ನಂತರ ಭಗವಂತನಿಗೆ ಹಸ್ತಪ್ರಕ್ಷಾಳನ, ಮುಖಪ್ರಕ್ಷಾಳನ, ಆಚಮನವನ್ನು ನೀಡಿ, ಅವನ ಪ್ರಸಾದವನ್ನು ವಿಷ್ವಕ್ಸೇನನಿಗೆ ಅರ್ಪಿಸಬೇಕು. ಬಳಿಕ ತನ್ನ ಇಷ್ಟದೇವರಿಗೆ ಮುಖವಾಸಕ್ಕಾಗಿ ಸುಗಂಧಿತ ತಾಂಬೂಲವನ್ನು ಅರ್ಪಿಸಿ, ಮಂತ್ರಪುಷ್ಪವನ್ನು ಸಮರ್ಪಿಸಬೇಕು. ॥ ೪೩ ॥ ನನ್ನ ಲೀಲೆಗಳನ್ನು ಹಾಡುತ್ತಾ, ಅವನ್ನು ವರ್ಣಿಸಬೇಕು. ನನ್ನ ಲೀಲೆಗಳನ್ನು ಅಭಿನಯದ ಮೂಲಕ ತೋರಿಸಬೇಕು. ಪ್ರೇಮೋನ್ಮತ್ತನಾಗಿ ನರ್ತಿಸಬೇಕು. ನನ್ನ ಲೀಲಾ-ಕಥೆಗಳನ್ನು ಸ್ವತಃ ಕೇಳುತ್ತಾ , ಇತರರಿಗೂ ಹೇಳಬೇಕು. ಆನಂದಪರವಶನಾಗಿ ಹೀಗೆ ನನ್ನ ಶ್ರೀವಿಗ್ರಹದಲ್ಲೇ ತನ್ಮಯನಾಗಿ ಮುಹೂರ್ತಕಾಲವನ್ನು ಕ್ಷಣದಂತೆ ಕಳೆಯಬೇಕು. ॥ ೪೪ ॥ ಪ್ರಾಚೀನ ಋಷಿ-ಮುನಿಗಳಿಂದ ರಚಿಸಲ್ಪಟ್ಟ ಮತ್ತು ಪ್ರಾಕೃತ ಭಕ್ತರಿಂದ ಹಾಡಲ್ಪಟ್ಟ ಚಿಕ್ಕ-ದೊಡ್ಡ ಸ್ತೋತ್ರಗಳಿಂದ ನನ್ನನ್ನು ಸ್ತುತಿಸಿ, 'ಭಗವಂತಾ ! ನನ್ನ ಮೇಲೆ ಪ್ರಸನ್ನನಾಗು, ನನಗೆ ನಿನ್ನ ಕೃಪಾಪ್ರಸಾದವನ್ನು ಕರುಣಿಸು' ಎಂದು ಪ್ರಾರ್ಥಿಸಬೇಕು. ಬಳಿಕ ದಂಡವತ್ ಸಾಷ್ಟಾಂಗ ಪ್ರಣಾಮ ಮಾಡಬೇಕು. ॥ ೪೫ ॥ ಅರ್ಚಕನು ತನ್ನ ಶಿರಸ್ಸನ್ನು ನನ್ನ ಪಾದಗಳ ಮೇಲಿರಿಸಿಕೊಂಡು, ಬಲಗೈಯಿಂದ ನನ್ನ ಬಲಕಾಲನ್ನು, ಎಡಕೈಯಿಂದ ಎಡಕಾಲನ್ನು ಭದ್ರವಾಗಿ ಹಿಡಿದುಕೊಂಡು – 'ಭಗವಂತಾ ! ಈ ಸಂಸಾರಸಾಗರದಲ್ಲಿ ನಾನು ಮುಳುಗುತ್ತಿದ್ದೇನೆ. ಮೃತ್ಯುರೂಪೀ ಗ್ರಹವು ನನ್ನ ಬೆನ್ನುಬಿದ್ದಿದೆ, ನಾನು ಭಯಗೊಂಡು ನಿನ್ನಲ್ಲಿ ಶರಣಾಗಿದ್ದೇನೆ. ಓ ಪ್ರಭುವೇ ! ನೀನು ನನ್ನನ್ನು ಕಾಪಾಡು' ಎಂದು ಪ್ರಾರ್ಥಿಸಿಕೊಳ್ಳಬೇಕು. ॥ ೪೬ ॥ ಹೀಗೆ ದೈನ್ಯದಿಂದ ಪ್ರಾರ್ಥನೆಯನ್ನು ಸಲ್ಲಿಸಿ, ನನಗೆ ಸಮರ್ಪಿತವಾದ ಪುಷ್ಪಮಾಲಿಕೆಯನ್ನು ನಾನೇ ಕೈಯಾರೆ ಕೊಟ್ಟ ಪ್ರಸಾದವೆಂದು ತಿಳಿದು ಕಣ್ಣಿಗೊತ್ತಿಗೊಂಡು, ತಲೆಯಮೇಲೆ ಹೊತ್ತುಕೊಳ್ಳಬೇಕು. ವಿಸರ್ಜನೆ ಮಾಡಬೇಕಿದ್ದರೆ, ಶ್ರೀವಿಗ್ರಹದಲ್ಲಿರುವ ದಿವ್ಯಜ್ಯೋತಿಯು ಹೊರ ಬರುತ್ತಿರುವುದೆಂದೂ ತನ್ನ (ಭಕ್ತನ) ಹೃತ್ಕಮಲದಲ್ಲಿರುವ ಜ್ಯೋತಿಯೊಡನೆ ಲೀನವಾಗುತ್ತಿರುವುದೆಂದೂ ಭಾವಿಸಿಕೊಂಡು, ವಿಸರ್ಜನ ಮಂತ್ರವನ್ನು ಹೇಳಬೇಕು. ॥ ೪೭ ॥ ಉದ್ಧವನೇ ! ನನ್ನ ಅರ್ಚನೆಗೆ ಹೇಳಿರುವ ಹಲವಾರು ಪ್ರತಿಮೆಗಳಲ್ಲಿ ಯಾವ ಪ್ರತಿಮೆಯಲ್ಲಿ ಯಾವಾಗ ಪೂಜೆಮಾಡಲು ಶ್ರದ್ಧೆ ಉಂಟಾಗುವುದೋ ಆಗಲೇ ಆ ಪ್ರತಿಮೆಯಲ್ಲಿ ನನ್ನನ್ನು ಅರ್ಚಿಸಬೇಕು. ಪ್ರತಿಮೆಗಳಲ್ಲಿ ಯಾವುದೇ ತಾರತಮ್ಯವಿಲ್ಲ, ಸರ್ವಾತ್ಮನಾದ ನಾನು ಸಕಲ ಪ್ರಾಣಿಗಳಲ್ಲಿಯೂ, ಸಕಲ ಪ್ರಾಣಿಗಳ ಹೃದಯದಲ್ಲಿಯೂ ಸರ್ವದಾ ನೆಲೆಸಿರುತ್ತೇನೆ. ॥ ೪೮ ॥

ಏವಂ ಕ್ರಿಯಾಯೋಗಪಥೈಃ ಪುಮಾನ್ ವೈದಿಕತಾಂತ್ರಿಕೈಃ ।
ಅರ್ಚನ್ನುಭಯತಃ ಸಿದ್ಧಿಂ ಮತ್ತೋ ವಿಂದತ್ಯಭೀಪ್ಸಿತಾಮ್ ॥ ೪೯ ॥

ಎಲೈ ಉದ್ಧವಾ! ಈ ಪ್ರಕಾರ ವೈದಿಕ, ತಾಂತ್ರಿಕ ಕ್ರಿಯಾ ಯೋಗದ ಮೂಲಕ ನನ್ನನ್ನು ಪೂಜಿಸುವ ಮನುಷ್ಯನು ಈ ಲೋಕ ಮತ್ತು ಪರಲೋಕದಲ್ಲಿ ನನ್ನಿಂದ ಅಭೀಷ್ಟವನ್ನು ಪಡೆದು ಕೊಳ್ಳುತ್ತಾನೆ. ॥ ೪೯ ॥

ಮದರ್ಚಾಂ ಸಂಪ್ರತಿಷ್ಠಾಪ್ಯ ಮಂದಿರಂ ಕಾರಯೇದ್ದೃಢಮ್ ।
ಪುಷ್ಪೋದ್ಯಾನಾನಿ ರಮ್ಯಾಣಿ ಪೂಜಾಯಾತ್ರೋತ್ಸವಾಶ್ರಿತಾನ್ ॥ ೫೦ ॥

ಉಪಾಸಕನು ಸಮರ್ಥನಾಗಿದ್ದರೆ ನನ್ನ ಸುಂದರ, ಸುದೃಢವಾದ ಮಂದಿರವನ್ನು ಕಟ್ಟಿ ಅದರಲ್ಲಿ ನನ್ನ ಪ್ರತಿಮೆಯನ್ನು ಪ್ರತಿಷ್ಠಾಪಿಸಲಿ. ಸುತ್ತಲೂ ರಮ್ಯವಾದ ಉದ್ಯಾನ ವನಗಳನ್ನು ನಿರ್ಮಿಸಲಿ. ನಿತ್ಯಪೂಜೆ, ನಿತ್ಯೋತ್ಸವ, ರಥೋತ್ಸವಗಳಿಗೆ ಬೇಕಾದ ವ್ಯವಸ್ಥೆಮಾಡಲಿ. ॥ ೫೦ ॥

ಪೂಜಾದೀನಾಂ ಪ್ರವಾಹಾರ್ಥಂ ಮಹಾಪರ್ವಸ್ವಥಾನ್ವಹಮ್ ।
ಕ್ಷೇತ್ರಾಪಣಪುರಗ್ರಾಮಾನ್ ದತ್ತ್ವಾ ಮತ್ಸಾರ್ಷ್ಟಿತಾಮಿಯಾತ್ ॥ ೫೧ ॥

ನನ್ನ ನಿತ್ಯಪೂಜೆ, ಪರ್ವ ದಿವಸಗಳಲ್ಲಿ ವಿಶೇಷಪೂಜೆ, ನಿತ್ಯೋತ್ಸವ-ರಥೋತ್ಸವಗಳು ಅವಿಚ್ಛಿನ್ನವಾಗಿ ನಡೆದುಕೊಂಡು ಹೋಗಲು ಶ್ರೀಮಂತರಾದ ಭಕ್ತರು ಹೊಲ-ಗದ್ದೆಗಳನ್ನೂ, ಅಂಗಡಿಗಳನ್ನು, ಗ್ರಾಮ-ಪಟ್ಟಣಗಳನ್ನು ಉಂಬಳಿಯಾಗಿ ಕೊಡಬೇಕು. ಇದರಿಂದ ಅವರಿಗೆ ನನ್ನ ಸಮಾನ ವಾದ ಐಶ್ವರ್ಯವು ನನ್ನ ಅನುಗ್ರಹದಿಂದ ದೊರೆಯುತ್ತದೆ. ॥ ೫೧ ॥

ಪ್ರತಿಷ್ಠಯಾ ಸಾರ್ವಭೌಮಂ ಸದ್ಮನಾ ಭುವನತ್ರಯಮ್ ।
ಪೂಜಾದಿನಾ ಬ್ರಹ್ಮಲೋಕಂ ತ್ರಿಭಿರ್ಮತ್ಸಾಮ್ಯತಾಮಿಯಾತ್ ॥ ೫೨ ॥

ನನ್ನ ವಿಗ್ರಹ ಪ್ರತಿಷ್ಠಾಪನೆಯಿಂದ ಪೃಥ್ವಿಯ ಏಕಚ್ಛತ್ರ ರಾಜ್ಯ, ಮಂದಿರ, ನಿರ್ಮಾಣದಿಂದ ತ್ರೈಲೋಕ್ಯದ ರಾಜ್ಯ, ಪೂಜಾದಿಗಳ ವ್ಯವಸ್ಥೆ ಮಾಡಿದವರಿಗೆ ಬ್ರಹ್ಮಲೋಕ ಮತ್ತು ಮೂರನ್ನೂ ಮಾಡಿದಾಗ ನನ್ನ ಸಾರೂಪ್ಯವನ್ನು ಪಡೆದು ಕೊಳ್ಳುವನು. ॥ ೫೨ ॥

ಮಾಮೇವ ನೈರಪೇಕ್ಷ್ಯೇಣ ಭಕ್ತಿಯೋಗೇನ ವಿಂದತಿ ।
ಭಕ್ತಿಯೋಗಂ ಸ ಲಭತೇ ಏವಂ ಯಃ ಪೂಜಯೇತ ಮಾಮ್ ॥ ೫೩ ॥

ನಿಷ್ಕಾಮಭಾವದಿಂದ ನನ್ನ ಪೂಜೆ ಮಾಡುವವನಿಗೆ ನನ್ನ ಭಕ್ತಿಯೋಗವು ಪ್ರಾಪ್ತವಾಗುತ್ತದೆ. ಆ ನಿರಪೇಕ್ಷ ಭಕ್ತಿಯೋಗದ ಮೂಲಕ ಅವನು ಸ್ವಯಂ ನನ್ನನ್ನು ಪಡೆದುಕೊಳ್ಳುತ್ತಾನೆ. ॥ ೫೩ ॥

ಯಃ ಸ್ವದತ್ತಾಂ ಪರೈರ್ದತ್ತಾಂ ಹರೇತ ಸುರವಿಪ್ರಯೋಃ ।
ವೃತ್ತಿಂ ಸ ಜಾಯತೇ ವಿಡ್ಭುಗ್ವರ್ಷಾಣಾಮಯುತಾಯುತಮ್ ॥ ೫೪ ॥

ದೇವ-ಬ್ರಾಹ್ಮಣರಿಗೆ ತಾನು ಕೊಟ್ಟ ಉಂಬಳಿಯನ್ನಾಗಲೀ, ಇತರರು ಕೊಟ್ಟ ಉಂಬಳಿಯನ್ನಾಗಲೀ ಅಪಹರಿಸುವವನು ಕೋಟ್ಯಂತರ ವರ್ಷಗಳವರೆಗೆ ಅಮೇಧ್ಯ ದಲ್ಲಿನ ಕ್ರಿಮಿಯಾಗುತ್ತಾನೆ. ॥ ೫೪ ॥

ಕರ್ತುಶ್ಚ ಸಾರಥೇರ್ಹೇತೋರನುಮೋದಿತುರೇವ ಚ ।
ಕರ್ಮಣಾಂ ಭಾಗಿನಃ ಪ್ರೇತ್ಯ ಭೂಯೋ ಭೂಯಸಿ ತತ್ಫಲಮ್ ॥ ೫೫ ॥

ಇಂತಹ ಪಾಪಿಷ್ಠವಾದ, ಹೇಯವಾದ ಕೆಲಸಕ್ಕೆ ಸಹಾಯ ಮಾಡುವವರು, ಪ್ರೇರಕರೂ, ಅನುಮೋದಕರೂ ಇವರಿಗೂ ಇದೇ ವಿಧವಾದ ದುಷ್ಫಲವು ದೊರೆಯುತ್ತದೆ. ಇವರ ಕೈವಾಡ ಹೆಚ್ಚಿದ್ದರೆ ಅವರಿಗೆ ಫಲವೂ ಹೆಚ್ಚೇ ಸಿಗುತ್ತದೆ. ॥ ೫೫ ॥

ಇಪ್ಪತ್ತೇಳನೆಯ ಅಧ್ಯಾಯವು ಮುಗಿಯಿತು. ॥ ೨೭ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಏಕಾದಶ ಸ್ಕಂಧೇ ಸಪ್ತವಿಂಶೋಽಧ್ಯಾಯಃ ॥ ೨೭ ॥

# ಇಪ್ಪತ್ತೆಂಟನೆಯ ಅಧ್ಯಾಯ

## ಪರಮಾರ್ಥ ನಿರೂಪಣೆ

ಶ್ರೀಭಗವಾನುವಾಚ

ಪರಸ್ವಭಾವಕರ್ಮಾಣಿ ನ ಪ್ರಶಂಸೇನ್ನ ಗರ್ಹಯೇತ್ ।
ವಿಶ್ವಮೇಕಾತ್ಮಕಂ ಪಶ್ಯನ್ ಪ್ರಕೃತ್ಯಾ ಪುರುಷೇಣ ಚ ॥ ೧ ॥

**ಭಗವಾನ್ ಶ್ರೀಕೃಷ್ಣನು ಹೇಳುತ್ತಾನೆ** – ಉದ್ಧವನೇ! ಬೇರೆ ಯವರ ಸ್ವಭಾವದ ಅಥವಾ ಅವರ ಕರ್ಮಗಳ ಬಗ್ಗೆ ಚರ್ಚೆ ಎಂದೂ ಮಾಡಬಾರದು. ಅವರನ್ನು ಹೊಗಳುವುದಾಗಲೀ, ತೆಗಳು ವುದಾಗಲೀ ಮಾಡಬಾರದು. ಸಮಸ್ತ ವಿಶ್ವದಲ್ಲಿ ಒಂದೇ ಆತ್ಮನು ಒಳಗೆ-ಹೊರಗೆ ವ್ಯಾಪ್ತನಾಗಿದ್ದಾನೆ. ಪ್ರಕೃತಿ-ಪುರುಷರಿಂದ ಉಂಟಾದ ಈ ವಿಶ್ವದಲ್ಲಿ ಒಂದೇ ಆತ್ಮನಸತ್ತೆಯನ್ನು ನೋಡಬೇಕು. ॥ ೧ ॥

ಪರಸ್ವಭಾವಕರ್ಮಾಣಿ ಯಃ ಪ್ರಶಂಸತಿ ನಿಂದತಿ ।
ಸ ಆಶು ಭ್ರಶ್ಯತೇ ಸ್ವಾರ್ಥಾದಸತ್ಯಭಿನಿವೇಶತಃ ॥ ೨ ॥

ತೈಜಸೇ ನಿದ್ರಯಾಽಽಪನ್ನೇ ಪಿಂಡಸ್ಥೋ ನಷ್ಟಚೇತನಃ ।
ಮಾಯಾಂ ಪ್ರಾಪ್ನೋತಿ ಮೃತ್ಯುಂ ವಾ ತದ್ವನ್ನಾನಾರ್ಥದೃಕ್ ಪುಮಾನ್ ॥ ೩ ॥

ಕಿಂ ಭದ್ರಂ ಕಿಮಭದ್ರಂ ವಾ ದ್ವೈತಸ್ಯಾವಸ್ತುನಃ ಕಿಯತ್ ।
ವಾಚೋದಿತಂ ತದನೃತಂ ಮನಸಾ ಧ್ಯಾತಮೇವ ಚ ॥ ೪ ॥

ಛಾಯಾಪ್ರತ್ಯಾಹ್ವಯಾಭಾಸಾ ಹ್ಯಸಂತೋಽಪ್ಯರ್ಥಕಾರಿಣಃ ।
ಏವಂ ದೇಹಾದಯೋ ಭಾವಾ ಯಚ್ಛಂತ್ಯಾಮೃತ್ಯುತೋ ಭಯಮ್ ॥ ೫ ॥

ಆತ್ಮೈವ ತದಿದಂ ವಿಶ್ವಂ ಸೃಜ್ಯತೇ ಸೃಜತಿ ಪ್ರಭುಃ ।
ತ್ರಾಯತೇ ತ್ರಾತಿ ವಿಶ್ವಾತ್ಮಾ ಹ್ರಿಯತೇ ಹರತೀಶ್ವರಃ ॥ ೬ ॥

ತಸ್ಮಾನ್ನಹ್ಯಾತ್ಮನೋಽನ್ಯಸ್ಮಾದನ್ಯೋ ಭಾವೋ ನಿರೂಪಿತಃ ।
ನಿರೂಪಿತೇಯಂ ತ್ರಿವಿಧಾ ನಿರ್ಮೂಲಾ ಭಾತಿರಾತ್ಮನಿ ।
ಇದಂ ಗುಣಮಯಂ ವಿದ್ಧಿ ತ್ರಿವಿಧಂ ಮಾಯಯಾ ಕೃತಮ್ ॥ ೭ ॥

ಏತದ್ವಿದ್ವಾನ್ ಮದುದಿತಂ ಜ್ಞಾನವಿಜ್ಞಾನನೈಪುಣಮ್ ।
ನ ನಿಂದತಿ ನ ಚ ಸ್ತೌತಿ ಲೋಕೇ ಚರತಿ ಸೂರ್ಯವತ್ ॥ ೮ ॥

ಬೇರೆಯವರ ಸ್ವಭಾವ ಮತ್ತು ಕರ್ಮದ ನಿಂದೆ-ಸ್ತುತಿ ಮಾಡುವ ವ್ಯಕ್ತಿಯು ಬೇಗನೇ ಅಸತ್ತಿನಲ್ಲಿ ಆಗ್ರಹವಿರಿಸಿ, ತನ್ನ ಉನ್ನತಿಯ ಮಾರ್ಗದಿಂದ ಭ್ರಷ್ಟನಾಗಿ ಪತಿತನಾಗುತ್ತಾನೆ. ॥ ೨ ॥ ನಿದ್ರಾವಸ್ಥೆಯಲ್ಲಿ ಇಂದ್ರಿಯಗಳು ಮಲಗಿಬಿಡುತ್ತವೆ. ದೇಹದಲ್ಲಿರುವ ಜೀವಿಯು ಆಗ ಜ್ಞಾನಶೂನ್ಯನಾಗುತ್ತಾನೆ. ಹೀಗೆ ನಿದ್ರಾವಸ್ಥೆಯಲ್ಲಿ ಎಂದಾದರೂ ಈ ಮನುಷ್ಯನು ಮಾಯೆ (ಸ್ವಪ್ನ)ಯನ್ನು ನೋಡುತ್ತಾನೆ. ಅಥವಾ ಸುಷುಪ್ತಿ ಅವಸ್ಥೆಯಲ್ಲಿ ಗಾಢನಿದ್ದೆಯಲ್ಲಿ ಪೂರ್ಣ ಜ್ಞಾನಶೂನ್ಯನಾಗುತ್ತಾನೆ. ಹಾಗೆಯೇ ಜಾಗ್ರತ್ ಅವಸ್ಥೆಯಲ್ಲಿಯೂ ಅನೇಕ ಪ್ರಕಾರದ ಪದಾರ್ಥಗಳನ್ನು ಚಿಂತಿಸುತ್ತಾನೆ ಮತ್ತು ನೋಡುತ್ತಾ ಇರುತ್ತಾನೆ. ಆದರೆ ಇದೆಲ್ಲವೂ ಮಿಥ್ಯೆಯೇ ಆಗಿದೆ. ಸತ್ಯ ವಸ್ತು ಏಕಮಾತ್ರ ಪರಮಾತ್ಮತತ್ತ್ವವೇ ಆಗಿದೆ. ॥ ೩ ॥ ಯಥಾರ್ಥದಲ್ಲಿ ಇಲ್ಲವೇ ಇಲ್ಲದ ವಸ್ತುವಿನ ಬಗ್ಗೆ ಏನು ಒಳ್ಳೆಯದು ಹೇಳಬಹುದು, ಏನು ಕೆಟ್ಟದೆಂದು ಹೇಳಬಹುದು ? ಇದೆಲ್ಲವೂ ಕೇವಲ ವಾಣಿಯ ವಿಲಾಸಮಾತ್ರವಾಗಿದೆ, ಆದ್ದರಿಂದ ಮಿಥ್ಯೆಯಾಗಿದೆ. ಹೀಗೆಯೇ ಮನಸ್ಸಿನಿಂದ ಈ ಅಸತ್ ಪದಾರ್ಥಗಳನ್ನು ಚಿಂತಿಸುವುದೂ ವ್ಯರ್ಥವೇ ಆಗಿದೆ. ॥ ೪ ॥ ಛಾಯೆ, ಪ್ರತಿಧ್ವನಿ ಮತ್ತು ಆಭಾಸ ಇವು ಮೂರೂ ನಿಜವಲ್ಲದಿದ್ದರೂ ತಮ್ಮ-ತಮ್ಮ ಕಾರ್ಯಗಳನ್ನಾದರೋ ಮಾಡಿಯೇ ಮಾಡುತ್ತವೆ. (ಛಾಯೆ (ನೆರಳು)ಯಲ್ಲಿ ಕುಳಿತಿರುತ್ತಾರೆ ಮತ್ತು ಅದನ್ನು ಒಪ್ಪಿಕೊಂಡು ಕಾರ್ಯವನ್ನೂ ಮಾಡುತ್ತಾರೆ. ಪ್ರತಿಧ್ವನಿಯಾದರೆ 'ಇದೇನಾಯಿತು ?' ಎಂದು ಗಾಬರಿಗೊಳ್ಳುವನು. ಹಗ್ಗದಲ್ಲಿ ಸರ್ಪದ ಭ್ರಮೆಯಿಂದ ಭಯವಾಗುತ್ತದೆ. ಇವೆಲ್ಲವೂ ತಮ್ಮ-ತಮ್ಮ ಕಾರ್ಯ ಮಾಡುತ್ತಿದ್ದರೂ ಇವು ಮೂರೂ ಮಿಥ್ಯೆಯಾಗಿದೆ.) ಹೀಗೆಯೇ ದೇಹಾದಿ ಪದಾರ್ಥಗಳೆಲ್ಲವೂ ಮಿಥ್ಯೆಯೇ ಆಗಿವೆ. ಆದರೂ ಪ್ರಾಣಿಗಳಿಗೆ ಸಾಯುವವರೆಗೆ ಭಯ, ದುಃಖಗಳಾದರೋ ಕೊಡುತ್ತಲೇ ಇರುತ್ತವೆ. ॥ ೫ ॥ ಸಮಸ್ತ ವಿಶ್ವದ ಆತ್ಮನಾದರೋ ಒಬ್ಬನೇ ಆಗಿದ್ದಾನೆ. ಆ ಆತ್ಮನೇ ಬ್ರಹ್ಮಾ ಆಗಿ ತನ್ನಿಂದಲೇ ತನ್ನನ್ನು (ವಿಶ್ವವಾಗಿ) ನಿರ್ಮಿಸಿಕೊಳ್ಳುವನು. ಆ ಸ್ವಯಂ ವಿಷ್ಣುರೂಪದಿಂದ ತನ್ನನ್ನೇ ರಕ್ಷಿಸಿಕೊಳ್ಳುವನು. ಪ್ರಳಯಕಾಲದಲ್ಲಿ ರುದ್ರರೂಪದಿಂದ ತನ್ನಿಂದ ಸೃಷ್ಟಿಸಲ್ಪಟ್ಟ ವಿಶ್ವವನ್ನು ಸಂಹಾರ ಮಾಡುತ್ತಾನೆ. ॥ ೬ ॥ ಈ ಪ್ರಕಾರ ಆತ್ಮನಲ್ಲದೆ ಬೇರೆ ಯಾವ ವಸ್ತುವೂ ಕೂಡ ಇರುವುದು ಸಿದ್ಧವಾಗುವುದಿಲ್ಲ, ಆತ್ಮನಿಂದ ಭಿನ್ನವಾದ ಇನ್ನೊಂದು ಭಾವ ಕಂಡುಬರುವುದರ ಯಾವ ಕಾರಣವೂ ಇಲ್ಲ, ಆದರೆ ಇಲ್ಲದೆಯೇ ಯಾವುದು ಆತ್ಮನಲ್ಲಿ ಮೂರು ಪ್ರಕಾರದಿಂದ ಭಾಸಮಾನವಾಗುತ್ತದೋ ಅದನ್ನು ನೀನು ತ್ರಿಗುಣಾತ್ಮಿಕಾ ಮಾಯೆಯ ಕಾರ್ಯವೆಂದೇ ತಿಳಿ. ॥ ೭ ॥ ಉದ್ಧವನೇ ! ಜ್ಞಾನ-ವಿಜ್ಞಾನದಿಂದ ಕೂಡಿದ ಈ ಉಪದೇಶವನ್ನು ನಾನು ನಿನಗೆ ಹೇಳಿರುವೆನು. ಇದನ್ನು ತಿಳಿದುಕೊಂಡು ವಿದ್ವಾಂಸನು ಯಾರನ್ನೂ ನಿಂದಿಸುವುದಿಲ್ಲ, ಸ್ತುತಿಸುವುದಿಲ್ಲ, ಇಂತಹ ಮಹಾಪುರುಷರು ಸೂರ್ಯನಂತೆ ಎಲ್ಲೆಡೆ ಜ್ಞಾನದ ಪ್ರಕಾಶವನ್ನು ಹರಡುತ್ತಾ ವಿಚರಿಸುತ್ತಿರುತ್ತಾರೆ. ॥ ೮ ॥ ಪ್ರತ್ಯಕ್ಷ ಪ್ರಮಾಣದಿಂದ, ಅನುಮಾನ

ಪ್ರತ್ಯಕ್ಷೇಣಾನುಮಾನೇನ ನಿಗಮೇನಾತ್ಮ ಸಂವಿದಾ ।
ಆದ್ಯಂತವದಸಜ್ಜ್ಞಾತ್ವಾ ನಿಸ್ಸಂಗೋ ವಿಚರೇದಿಹ ॥ ೯ ॥

ಪ್ರಮಾಣದಿಂದ, ಶಾಸ್ತ್ರ ಮತ್ತು ಮಹಾಪುರುಷರ ವಚನಗಳಿಂದ ಹಾಗೂ ಆತ್ಮಾನುಭೂತಿಯಿಂದ – 'ಕಂಡುಬರುವ ಅಸತ್ ಪದಾರ್ಥಗಳೆಲ್ಲವೂ ಆದಿ-ಅಂತ್ಯಗಳಿಂದ ಕೂಡಿದೆ ಅರ್ಥಾತ್ ನಾಶವುಳ್ಳದ್ದಾಗಿದೆ' ಎಂದು ಸ್ಪಷ್ಟವಾಗಿ ತಿಳಿದುಕೋ. ಅದರಿಂದ ಅನಾಸಕ್ತನಾಗಿ ಪ್ರಪಂಚದಲ್ಲಿ ವಿಚರಿಸುತ್ತಿರು. ॥ ೯ ॥

ಉದ್ಧವ ಉವಾಚ

ನೈವಾತ್ಮನೋ ನ ದೇಹಸ್ಯ ಸಂಸೃತಿರ್ದ್ರಷ್ಟೃದೃಶ್ಯಯೋಃ ।
ಅನಾತ್ಮಸ್ವದೃಶೋರೀಶ ಕಸ್ಯ ಸ್ಯಾದುಪಲಭ್ಯತೇ ॥ ೧೦ ॥

**ಉದ್ಧವನು ಕೇಳಿದನು** – ಭಗವಂತಾ! ಆತ್ಮನು ದ್ರಷ್ಟಾ ಸಾಕ್ಷಿಯಾಗಿದ್ದು, ಸ್ವಯಂಪ್ರಕಾಶವಾಗಿದ್ದಾನೆ. ಅವನು ಏನನ್ನೂ ಮಾಡುವುದಿಲ್ಲ. ದೇಹವೂ ಕೂಡ ದೃಶ್ಯವಾಗಿದ್ದು, ಜಡವಾದ್ದರಿಂದ ಅದೂ ಕೂಡ ಪ್ರಪಂಚವನ್ನು ಮಾಡಲಾರದು. ಇಂತಹ ಸ್ಥಿತಿಯಲ್ಲಿ ಈ ಸಂಸೃತಿ (ಹುಟ್ಟು-ಸಾವು) ಯಾರಿಗಾಗುತ್ತದೆ? ॥ ೧೦ ॥

ಆತ್ಮಾವ್ಯಯೋಽಗುಣಃ ಶುದ್ಧಃ ಸ್ವಯಂಜ್ಯೋತಿರನಾವೃತಃ ।
ಅಗ್ನಿವದ್ದಾರುವದಚಿದ್ದೇಹಃ ಕಸ್ಯೇಹ ಸಂಸೃತಿಃ ॥ ೧೧ ॥

ಆತ್ಮನು ಅವಿನಾಶೀ, ನಿರ್ಗುಣ, ಶುದ್ಧ, ಸ್ವಯಂಜ್ಯೋತಿ ಮತ್ತು ಒಳ-ಹೊರಗೆ ಎಲ್ಲೆಡೆ ಪರಿಪೂರ್ಣನಾಗಿದ್ದು, ಅಗ್ನಿಯಂತೆ ಜ್ಯೋತಿರ್ಮಯವಾಗಿದ್ದಾನೆ. ಆದರೆ ಶರೀರವು ಕಾಷ್ಠದಂತೆ ಅಚೇತನವಾಗಿದೆ. ಇಂತಹ ಸ್ಥಿತಿಯಲ್ಲಿ ಜನ್ಮ-ಮೃತ್ಯುವಿನಲ್ಲಿ ಅಲೆಯುವವನು ಯಾರು? ॥ ೧೧ ॥

ಶ್ರೀಭಗವಾನುವಾಚ

ಯಾವದ್ದೇಹೇಂದ್ರಿಯ ಪ್ರಾಣೈರಾತ್ಮನಃ ಸಂನಿಕರ್ಷಣಮ್ ।
ಸಂಸಾರಃ ಫಲವಾಂಸ್ತಾವದಪಾರ್ಥೋಽಪ್ಯವಿವೇಕಿನಃ ॥ ೧೨ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** – ಪ್ರಿಯ ಉದ್ಧವನೇ! ದೇಹ, ಇಂದ್ರಿಯ, ಪ್ರಾಣಗಳೊಂದಿಗೆ ಆತ್ಮನ ಸಂಬಂಧವಿರುವ ತನಕ ಅಜ್ಞಾನಿಗೆ ಈ ಪ್ರಪಂಚವು ಅಸತ್ಯವಾಗಿದ್ದರೂ ಸತ್ಯದಂತೆ ಕಾಣುತ್ತದೆ. ॥ ೧೨ ॥ ಸ್ವಪ್ನದಲ್ಲಿ ನಾನಾ ಪ್ರಕಾರದ ಅನರ್ಥಗಳು ಆಗದಿದ್ದರೂ ಕಂಡುಬರುತ್ತವೆ. ಅದರಿಂದ ಅವನು ದುಃಖಿಯೂ ಆಗುತ್ತಾನೆ. ಆದರೆ ಎಚ್ಚರಗೊಂಡಾಗ ಅವೆಲ್ಲ ಅನರ್ಥಗಳು ದೂರವಾಗುತ್ತವೆ. ಹಾಗೆಯೇ ಜಾಗ್ರತದಲ್ಲಿಯೂ ವಿಷಯಗಳು ಮಿಥ್ಯೆಯೇ ಆಗಿದ್ದರೂ ಆ ವಿಷಯಗಳ ನಿರಂತರ ಚಿಂತನೆ ಮಾಡುತ್ತಿರುವುದರಿಂದ ಪ್ರಪಂಚದಲ್ಲಿ ಅಲೆಯುವುದು ನಿಲ್ಲುವುದಿಲ್ಲ. ॥ ೧೩ ॥

ಅರ್ಥೇ ಹ್ಯವಿದ್ಯಮಾನೇಽಪಿ ಸಂಸೃತಿರ್ನ ನಿವರ್ತತೇ ।
ಧ್ಯಾಯತೋ ವಿಷಯಾನಸ್ಯ ಸ್ವಪ್ನೇಽನರ್ಥಾಗಮೋ ಯಥಾ ॥ ೧೩ ॥

ಮನುಷ್ಯನು ಸ್ವಪ್ನವನ್ನು ನೋಡುತ್ತಾ ಇರುವಾಗ, ನಿದ್ದೆಯಿಂದ ಎಚ್ಚರವಾಗುವ ಮೊದಲು ದೊಡ್ಡ-ದೊಡ್ಡ ವಿಪತ್ತುಗಳನ್ನು ಎದುರಿಸಬೇಕಾಗುತ್ತದೆ. ಆದರೆ ನಿದ್ದೆಯಿಂದ ಎಚ್ಚರಗೊಂಡಾಗ ಸ್ವಪ್ನದ ವಿಪತ್ತುಗಳಾಗಲೀ, ಅವುಗಳ ಕಾರಣದಿಂದ ಉಂಟಾಗುವ ಮೋಹವೇ ಮುಂತಾದ ವಿಕಾರಗಳಾಗಲೀ, ಇರುವುದಿಲ್ಲ. ॥ ೧೪ ॥

ಯಥಾ ಹ್ಯಪ್ರತಿಬುದ್ಧಸ್ಯ ಪ್ರಸ್ವಾಪೋ ಬಹ್ವನರ್ಥಭೃತ್ ।
ಸ ಏವ ಪ್ರತಿಬುದ್ಧಸ್ಯ ನ ವೈ ಮೋಹಾಯ ಕಲ್ಪತೇ ॥ ೧೪ ॥

ಉದ್ಧವನೇ! ಇದೇ ರೀತಿ ನಾನು ನನ್ನದು ಎಂಬ ಭಾವನೆ ಇರುವವರೆಗೆ ಶೋಕ, ಹರ್ಷ, ಭಯ, ಕ್ರೋಧ, ಲೋಭ, ಮೋಹ, ಸ್ಪೃಹೆ ಮುಂತಾದ ಭಾವಗಳು ಹಾಗೂ ಜನ್ಮ-ಮೃತ್ಯುವಿನ ದುಃಖ ಜೀವನಿಗೆ ಭೋಗಿಸಬೇಕಾಗುತ್ತದೆ. ಇವೆಲ್ಲವೂ ದೇಹಾಭಿಮಾನದಿಂದಲೇ ಇವೆಯೇ ಹೊರತು ಆತ್ಮನಿಗೆ ಇದರೊಂದಿಗೆ ಯಾವ ಸಂಬಂಧವೂ ಇಲ್ಲ. ॥ ೧೫ ॥

ಶೋಕಹರ್ಷಭಯಕ್ರೋಧಲೋಭಮೋಹಸ್ಪೃಹಾದಯಃ ।
ಅಹಂಕಾರಸ್ಯ ದೃಶ್ಯಂತೇ ಜನ್ಮಮೃತ್ಯುಶ್ಚ ನಾತ್ಮನಃ ॥ ೧೫ ॥

ಎಲೈ ಉದ್ಧವನೇ! ದೇಹ, ಇಂದ್ರಿಯಗಳು, ಪ್ರಾಣ ಮತ್ತು ಮನಸ್ಸಿನಲ್ಲಿ ಸ್ಥಿತನಾದ ಆತ್ಮನೇ ಗುಣ ಹಾಗೂ ಕರ್ಮಗಳಿಂದ ಉಂಟಾದ ಲಿಂಗಶರೀರದಲ್ಲಿ ಅಹಂಭಾವವಪಟ್ಟಾಗ ಅವನೇ ಜೀವನೆಂದು ಹೇಳಲ್ಪಡುತ್ತಾನೆ. ಆಗ ಅವನು ತನ್ನ ಸ್ವರೂಪದಿಂದ ವಿಮುಖನಾಗಿ, ಜಡ ಪದಾರ್ಥಗಳಲ್ಲಿ ಅಹಂತೆ, ಮಮತೆಗೈದು ಬದ್ಧನಾಗುತ್ತಾನೆ. ಮತ್ತೆ ಕಾಲದ ಮೂಲಕ ಪ್ರೇರಿತನಾಗಿ ಸಂಸಾರದಲ್ಲಿ ಅಲೆಯುತ್ತಾ ಇರುತ್ತಾನೆ. ವಾಸ್ತವದಲ್ಲಾದರೋ ಈ ಜೀವಿಯು ಸೂಕ್ಷ್ಮಾತಿಸೂಕ್ಷ್ಮ ಆತ್ಮನದೇ ಮೂರ್ತಿಯಾಗಿದೆ. ಈ ಪ್ರಕಾರ ಈ ಆತ್ಮವನ್ನು ಸೂತ್ರಾತ್ಮಾ, ಮಹತ್ತತ್ತ್ವ ಹಾಗೂ ಇನ್ನೂ ಅನೇಕ ಹೆಸರುಗಳಿಂದ ಹೇಳಲಾಗಿದೆ. ॥ ೧೬ ॥ ಈ ಅಹಂಕಾರವೇ

ದೇಹೇಂದ್ರಿಯಪ್ರಾಣಮನೋಽಭಿಮಾನೋ
ಜೀವೋಽಂತರಾತ್ಮಾ ಗುಣಕರ್ಮಮೂರ್ತಿಃ ।
ಸೂತ್ರಂ ಮಹಾನಿತ್ಯುರುಧೇವ ಗೀತಃ
ಸಂಸಾರ ಆಧಾವತಿ ಕಾಲತಂತ್ರಃ ॥ ೧೬ ॥

ಅಮೂಲಮೇತದ್ಬಹುರೂಪರೂಪಿತಂ
ಮನೋ ವಚಃ ಪ್ರಾಣಶರೀರಕರ್ಮ ।

ಜ್ಞಾನಾಸಿನೋಪಾಸನಯಾ ಶಿತೇನ-
ಚ್ಛಿತ್ವಾ ಮುನಿರ್ಗಾಂ ವಿಚರತ್ಯತೃಷ್ಣಃ ॥ ೧೭ ॥

ಜ್ಞಾನಂ ವಿವೇಕೋ ನಿಗಮಸ್ತಪಶ್ಚ
ಪ್ರತ್ಯಕ್ಷಮೈತಿಹ್ಯಮಥಾನುಮಾನಮ್ ।

ಆದ್ಯಂತಯೋರಸ್ಯ ಯದೇವ ಕೇವಲಂ
ಕಾಲಶ್ಚ ಹೇತುಶ್ಚ ತದೇವ ಮಧ್ಯೇ ॥ ೧೮ ॥

ಯಥಾ ಹಿರಣ್ಯಂ ಸ್ವಕೃತಂ ಪುರಸ್ತಾತ್
ಪಶ್ಚಾಚ್ಚ ಸರ್ವಸ್ಯ ಹಿರಣ್ಮಯಸ್ಯ ।

ತದೇವ ಮಧ್ಯೇ ವ್ಯವಹಾರ್ಯಮಾಣಂ
ನಾನಾಪದೇಶೈರಹಮಸ್ಯ ತದ್ವತ್ ॥ ೧೯ ॥

ವಿಜ್ಞಾನಮೇತತ್ತ್ರಿಯವಸ್ಥಮಂಗ
ಗುಣತ್ರಯಂ ಕಾರಣಕಾರ್ಯಕರ್ತೃ ।

ಸಮನ್ವಯೇನ ವ್ಯತಿರೇಕತಶ್ಚ
ಯೇನೈವ ತುರ್ಯೇಣ ತದೇವ ಸತ್ಯಮ್ ॥ ೨೦ ॥

ಮನ, ವಾಣೀ, ಪ್ರಾಣ, ಶರೀರ ಮತ್ತು ಕರ್ಮ ಮುಂತಾದ ಅನೇಕ ರೂಪಗಳಲ್ಲಿ ಕಂಡುಬರುತ್ತದೆ. ಇದಕ್ಕೆ ಯಾವುದೇ ಮೂಲವು ಇಲ್ಲದ್ದರಿಂದ ಮಿಥ್ಯೆಯೇ ಆಗಿದೆ. ಜೀವಿಯು ಸ್ವಯಂ ಇವುಗಳಲ್ಲಿ ಅಹಂಭಾವ ಮಾಡಿದಕಾರಣ ಬದ್ಧನಾಗಿದ್ದಾನೆ. ಇದರಿಂದ ಮುಕ್ತನಾಗಲು ಎಲ್ಲ ರೀತಿಯಿಂದ ತೃಷ್ಣಾರಹಿತನಾಗಿ, ಉಪಾಸನೆಯ ಮೂಲಕ ಜ್ಞಾನರೂಪೀ ತೀಕ್ಷ್ಣಖಡ್ಗದಿಂದ ಆತ್ಮನನ್ನು ಬಂಧಿಸುವ ಅಹಂಕಾರವನ್ನು ಸಮೂಲವಾಗಿ ಕತ್ತರಿಸಿ, ಭಗವತ್ಸ್ವರೂಪವನ್ನು ಮನನಮಾಡುತ್ತಾ, ಸ್ವಚ್ಛಂದವಾಗಿ ವಿಚರಿಸುವುದೇ ಉಪಾಯವಾಗಿದೆ. ॥ ೧೭ ॥ ಆತ್ಮಾ-ಅನಾತ್ಮದ ಸ್ವರೂಪವನ್ನು ಚೆನ್ನಾಗಿ ತಿಳಿದುಕೊಳ್ಳುವುದೇ ಜ್ಞಾನವಾಗಿದೆ. ಈ ವಿವೇಕವು ಉಂಟಾದಾಗ ದ್ವೈತದ ಅಸ್ತಿತ್ವವು ಇರುವುದಿಲ್ಲ, ಆದ್ದರಿಂದ ಆತ್ಮಚಿಂತನೆಯಿಂದ ಹೃದಯವನ್ನು ಶುದ್ಧಗೊಳಿಸಬೇಕು. ಪ್ರತ್ಯಕ್ಷಪ್ರಮಾಣದಿಂದ, ಮಹಾಪುರುಷರ ವಚನಗಳಿಂದ, ಶಾಸ್ತ್ರಪ್ರಮಾಣದಿಂದ ಮತ್ತು ಅನುಮಾನ ಪ್ರಮಾಣದಿಂದ ಒಂದೇ ಆತ್ಮತತ್ತ್ವವನ್ನು ಎಲ್ಲೆಡೆಗಳಲ್ಲಿ ನೋಡಬೇಕು. ಅವನೇ ಈ ಜಗತ್ತಿನ ಆದಿ ಮತ್ತು ಅಂತ್ಯದಲ್ಲಿರುವನು. ನಡುವಿನಲ್ಲಿಯೂ ಅವನೇ ಇದ್ದಾನೆ ಎಂದು ನಿಶ್ಚಯಿಸಬೇಕು. ಅವನನ್ನೇ ಕಾಲನೆಂದೂ ಹೇತು ಎಂದೂ ಹೇಳುತ್ತಾರೆ. ಈ ಪ್ರಕಾರ ಚಿಂತನೆಯಿಂದ ಓರ್ವ ಪರಮಾತ್ಮನನ್ನೇ ಸರ್ವತ್ರ ನೋಡಬೇಕು. ॥ ೧೮ ॥

ಉದ್ಧವನೇ! ಚಿನ್ನದಿಂದ ಕಂಕಣ, ಕುಂಡಲಾದಿ ಅನೇಕ ಆಭರಣಗಳು ಆಗುತ್ತವೆ. ಆದರೆ ಒಡವೆಗಳು ಆಗದಿದ್ದಾಗಲೂ ಅದು ಚಿನ್ನವೇ ಇತ್ತು. ಒಡವೆಗಳು ಕರಗಿ ಇಲ್ಲವಾದಾಗಲೂ ಚಿನ್ನವೇ ಆಗಿ ಉಳಿಯುವುದು. ನಡುವಿನಲ್ಲಿ ಅದಕ್ಕೆ ಕಂಕಣ-ಕುಂಡಲಾದಿ ಅನೇಕ ಹೆಸರುಗಳನ್ನಿಟ್ಟು ವ್ಯವಹರಿಸುತ್ತಾರೆ. ಆಗಲೂ ಅದು ಚಿನ್ನವೇ ಆಗಿದೆ. ಸರಿಯಾಗಿ ಹಾಗೆಯೇ ಜಗತ್ತಿನ ಆದಿ, ಅಂತ್ಯ ಮತ್ತು ಮಧ್ಯದಲ್ಲಿಯೂ ನಾನೇ ಇದ್ದೇನೆ. ವಾಸ್ತವವಾಗಿ ನಾನೇ ಸತ್ಯ ತತ್ತ್ವನಾಗಿದ್ದೇನೆ. ॥ ೧೯ ॥ ಪ್ರಿಯ ಉದ್ಧವನೇ! ಈ ವಿಶ್ವವು ಜಾಗ್ರತ್, ಸ್ವಪ್ನ, ಸುಷುಪ್ತಿ ಎಂಬ ಮೂರು ಅವಸ್ಥೆಗಳಿಂದ ಕೂಡಿದೆ. ಸತ್ತ್ವ, ರಜ, ತಮ ಹೀಗೆ ಮೂರುಗುಣಗಳಿಂದ ಉಂಟಾಗಿದೆ. ಅಧ್ಯಾತ್ಮ (ಇಂದ್ರಿಯಗಳು – ಕರಣ), ಅಧಿಭೂತ (ಪೃಥ್ವಿ ಆದಿಕಾರ್ಯ), ಅಧಿದೈವ (ಕರ್ತಾ) ಈ ರೀತಿಯ ಮೂರು ಭೇದಗಳಿಂದ ಯುಕ್ತವಾಗಿದೆ. ಈ ತ್ರಿವಿಧತೆಯಿಂದ ಯುಕ್ತವಾದ ಈ ಜಗತ್ತು ಅಧಿಷ್ಠಾನದಲ್ಲಿ ಪರಮಾತ್ಮನ ಸತ್ತೆ ಇರುವ ಕಾರಣವೇ ಸತ್ಯದಂತೆ ಕಂಡುಬರುತ್ತದೆ. ಅನ್ವಯರೂಪದಿಂದ ಎಲ್ಲದರಲ್ಲಿ ಪರಮಾತ್ಮನೇ ಅನುಸ್ಯೂತನಾಗಿದ್ದಾನೆ ಮತ್ತು ವ್ಯತಿರೇಕ ರೂಪದಿಂದ ಅರ್ಥಾತ್ ನೇತಿ-ನೇತಿಯ ಮೂಲಕ ಇವೆಲ್ಲದನ್ನು ನಿರಾಕರಣೆ ಮಾಡಿದಾಗ ಏಕಮಾತ್ರ ಪರಮಾತ್ಮನೇ ಶೇಷವಾಗಿ ಉಳಿಯುತ್ತಾನೆ. ನಾಲ್ಕನೆಯವನಿಂದಲೇ ಇದೆಲ್ಲವೂ ಇದೆ, ಅದೇ ಸತ್ಯತತ್ತ್ವವಾಗಿದೆ. ಆ ತುರೀಯ ತತ್ತ್ವದ ಜ್ಞಾನ ಉಂಟಾದಮೇಲೆ ಎಲ್ಲ ತ್ರಿವಿಧತೆ ಮುಗಿದುಹೋಗುತ್ತದೆ. ॥ ೨೦ ॥ ಮೊದಲೂ

ನ ಯತ್ ಪುರಸ್ತಾದುತ ಯನ್ನ ಪಶ್ಚಾ-
ನ್ಮಧ್ಯೇ ಚ ತನ್ನ ವ್ಯಪದೇಶಮಾತ್ರಮ್ ।
ಭೂತಂ ಪ್ರಸಿದ್ಧಂ ಚ ಪರೇಣ ಯದ್ಯತ್
ತದೇವ ತತ್ಸ್ಯಾದಿತಿ ಮೇ ಮನೀಷಾ ॥ ೨೦ ॥

ಅವಿದ್ಯಮಾನೋಽಪ್ಯವಭಾಸತೇ ಯೋ
ವೈಕಾರಿಕೋ ರಾಜಸಸರ್ಗ ಏಷಃ ।
ಬ್ರಹ್ಮ ಸ್ವಯಂಜ್ಯೋತಿರತೋ ವಿಭಾತಿ
ಬ್ರಹ್ಮೇಂದ್ರಿಯಾರ್ಥಾತ್ಮವಿಕಾರಚಿತ್ರಮ್ ॥ ೨೧ ॥

ಏವಂ ಸ್ಫುಟಂ ಬ್ರಹ್ಮವಿವೇಕಹೇತುಭಿಃ
ಪರಾಪವಾದೇನ ವಿಶಾರದೇನ ।
ಛಿತ್ತ್ವಾಽಽತ್ಮಸಂದೇಹಮುಪಾರಮೇತ
ಸ್ವಾನಂದತುಷ್ಟೋಽಖಿಲಕಾಮುಕೇಭ್ಯಃ ॥ ೨೨ ॥

ನಾತ್ಮಾ ವಪುಃ ಪಾರ್ಥಿವಮಿಂದ್ರಿಯಾಣಿ
ದೇವಾ ಹ್ಯಸುರ್ವಾಯುರ್ಜಲಂ ಹುತಾಶಃ ।
ಮನೋಽನ್ನಮಾತ್ರಂ ಧಿಷಣಾ ಚ ಸತ್ತ್ವ-
ಮಹಂಕೃತಿಃ ಖಂ ಕ್ಷಿತಿರರ್ಥಸಾಮ್ಯಮ್ ॥ ೨೩ ॥

ಸಮಾಹಿತೈಃ ಕಃ ಕರಣೈರ್ಗುಣಾತ್ಮಭಿ-
ರ್ಗುಣೋ ಭವೇನ್ಮತ್ಸುವಿವಿಕ್ತಧಾಮ್ನಃ ।
ವಿಕ್ಷಿಪ್ಯಮಾಣೈರುತ ಕಿಂ ನು ದೂಷಣಂ
ಘನೈರುಪೇತೈರ್ವಿಗತೈ ರವೇಃ ಕಿಮ್ ॥ ೨೪ ॥

ಯಥಾ ನಭೋ ವಾಯ್ವನಲಾಂಬುಭೂಗುಣೈ-
ರ್ಗತಾಗತೈರ್ವರ್ತುಗುಣೈರ್ನ ಸಜ್ಜತೇ ।
ತಥಾಕ್ಷರಂ ಸತ್ತ್ವರಜಸ್ತಮೋಮಲೈ-
ರಹಂಮತೇಃ ಸಂಸೃತಿಹೇತುಭಿಃ ಪರಮ್ ॥ ೨೫ ॥

ಇಲ್ಲದುದು, ನಂತರವೂ ಇಲ್ಲವಾಗುವ ಈ ಜಗತ್ತು ನಡು ವಿನಲ್ಲಿಯೂ ಇಲ್ಲ; ಇದು ಕೇವಲ ವಾಣಿಯ ವಿಲಾಸವಾಗಿದೆ. ಇದರಲ್ಲಿ ವಾಸ್ತವವಾದರೋ ಪರಮಾತ್ಮನೇ ಒಳ-ಹೊರಗೆ ಓತ ಪ್ರೋತವಾಗಿದ್ದಾನೆ. ಅವನಿಂದಲೇ ಭೂತಕಾಲದಲ್ಲಿ ಇದರ ಉತ್ಪತ್ತಿ ಯಾಗಿತ್ತು. ಇದರ ವ್ಯವಹಾರವೂ ಅವನಿಂದಲೇ ನಡೆಯುತ್ತಿದೆ. ಈ ಪ್ರಕಾರ ಸಮಸ್ತ ವ್ಯವಹಾರವೂ ಅವನ ಮೂಲಕವೇ ಅವನಲ್ಲೇ ಆಗುತ್ತಿವೆ. ಅದೇ ಪರಮಾರ್ಥ ಸತ್ತೆಯಾಗಿದೆ ಎಂಬುದೇ ನನ್ನ ದೃಢನಿಶ್ಚಯವಾಗಿದೆ. ॥ ೨೦ ॥ ಈ ವಿಕಾರಮಯ ರಾಜಸ ಸೃಷ್ಟಿಯು ಇಲ್ಲದೆಯೂ ಕಂಡುಬರುತ್ತದೆ. ಇದು ಸ್ವಯಂಪ್ರಕಾಶ ಬ್ರಹ್ಮವೇ ಆಗಿದೆ. ಅದಕ್ಕಾಗಿ ಇಂದ್ರಿಯಗಳು, ವಿಷಯ, ಮನಸ್ಸು ಪಂಚಭೂತಾದಿ ಚಿತ್ರ-ವಿಚಿತ್ರ ಎಷ್ಟು ನಾಮರೂಪಗಳಿವೆಯೋ, ಅವುಗಳ ರೂಪದಲ್ಲಿ ಬ್ರಹ್ಮವೇ ಕಂಡುಬರುತ್ತಿದ್ದಾನೆ. ॥ ೨೧ ॥ ಹೀಗೆ ಬ್ರಹ್ಮವಿಚಾರ ಮಾಡುವವರು ಎಲ್ಲ ಶ್ರವಣ, ಮನನ, ನಿಧಿ ಧ್ಯಾಸನ ಮತ್ತು ಸ್ವಾನುಭೂತಿ ಸಾಧನೆಗಳ ಮೂಲಕ ಕೌಶಲ್ಯದಿಂದ ಬೇರೆ ವಸ್ತುವನ್ನು ಪೂರ್ಣವಾಗಿ ನಿರಾಕರಣಮಾಡಿ, ಬ್ರಹ್ಮಜ್ಞಾನಿ ಗುರುದೇವರ ಉಪದೇಶದ ಮೂಲಕ ಆತ್ಮನ ವಿಷಯದಲ್ಲಿ ದೃಢನಿಶ್ಚಯಮಾಡಿಕೊಂಡು ಎಲ್ಲ ರೀತಿಯ ಕಾಮನೆಗಳನ್ನು ತ್ಯಜಿಸಿ, ಉಪರಾಮನಾಗಬೇಕು, ಆತ್ಮಾನಂದದಲ್ಲಿ ಮಗ್ನನಾಗ ಬೇಕು. ॥ ೨೨ ॥ ಈ ಪಾರ್ಥಿವ ಶರೀರವು ಆತ್ಮನಲ್ಲ, ಹೀಗೆಯೇ ಇಂದ್ರಿಯಗಳ ದೇವತೆಗಳು, ಪ್ರಾಣ, ವಾಯು, ಜಲ, ಅಗ್ನಿ, ಮನ ಇವು ಯಾವುವೂ ಆತ್ಮನಲ್ಲ, ಏಕೆಂದರೆ ಇವುಗಳ ಧಾರಣೆ ಪೋಷಣೆಯು ಶರೀರದಂತೆ ಅನ್ನದಿಂದಲೇ ಆಗುತ್ತದೆ. ಬುದ್ಧಿ, ಚಿತ್ತ , ಅಹಂಕಾರ, ಆಕಾಶ, ಪೃಥ್ವಿ, ಶಬ್ದಾದಿ ವಿಷಯಗಳು ಮತ್ತು ಗುಣಗಳ ಸಾಮ್ಯಾವಸ್ಥೆಯಾದ ಈ ಪ್ರಕೃತಿ ಇವೆಲ್ಲವೂ ಆತ್ಮನಲ್ಲ (ಹೀಗೆ ಅನಾತ್ಮವಸ್ತುಗಳನ್ನು ನೇತಿ-ನೇತಿ ವಚನಗಳಿಂದ ನಿರಾಕರಣ ಮಾಡಬೇಕು) ॥ ೨೩ ॥ ಪ್ರಿಯ ಉದ್ಧವನೇ! ಆಕಾಶದಲ್ಲಿ ಮೋಡಗಳು ಬರುತ್ತವೆ, ಹೋಗುತ್ತವೆ, ಆದರಿಂದ ಸೂರ್ಯನಿಗೆ ಏನು ಹಾನಿಯಿದೆ ? ಹಾಗೆಯೇ ನನ್ನ ಸ್ವರೂಪದ ಜ್ಞಾನ ಚೆನ್ನಾಗಿ ಉಂಟಾದವನ ಮುಂದೆ ಮೂರೂ ಗುಣಗಳ ವೇಗ ಬರಲಿ, ಹೋಗಲಿ, ಅವನಿಗೆ ಆದರಿಂದ ಯಾವುದೇ ಹಾನಿ-ಲಾಭವಿಲ್ಲ, ಅವು ಅವನ ಮೇಲೆ ಯಾವುದೇ ಪ್ರಭಾವ ಬೀರಲಾರವು. ಏಕೆಂದರೆ ಅವನಾದರೋ ತನ್ನ ಜ್ಞಾನದಲ್ಲಿ ದೃಢನಿಶ್ಚಯಪೂರ್ವಕ ಅಚಲಸ್ಥಿತನಾಗಿರುತ್ತಾನೆ. ॥ ೨೪ ॥ ಆಕಾಶವನ್ನು ಗಾಳಿಯು ಒಣಗಿಸಲಾರದು, ಬೆಂಕಿ ಸುಡಲಾರದು, ನೀರು ತೋಯಿಸ ಲಾರದು, ಧೂಳು-ಹೊಗೆ ಮಲಿನವಾಗಿಸದು, ಋತುಗಳ ಗುಣ ಸೆಕೆ-ಚಳಿ ಮುಂತಾದವುಗಳಿಂದ ಪ್ರಭಾವಿತವಾಗಿಸಲಾರದು. ಏಕೆಂದರೆ ಇವೆಲ್ಲವು ಬಂದುಹೋಗುವ ಕ್ಷಣಿಕ ಭಾವಗಳಾಗಿವೆ. ಆಕಾಶವು ಇವೆಲ್ಲದರ ಅಧಿಷ್ಠಾನವಾಗಿದೆ. ಹಾಗೆಯೇ ಸತ್ತ್ವಗುಣ, ರಜೋಗುಣ, ತಮೋಗುಣಗಳ ವೃತ್ತಿಗಳೆಲ್ಲವೂ ಹಾಗೂ ಕರ್ಮ ಗಳೆಲ್ಲವೂ ಅವಿನಾಶೀ ಆತ್ಮನನ್ನು ಸ್ಪರ್ಶಿಸಲಾರವು. ಅವನಾದರೋ ಇವುಗಳಿಂದ ಸರ್ವಥಾ ಅತೀತನಾಗಿದ್ದಾನೆ. ಇವುಗಳಲ್ಲಿ ಅಹಂಕಾರ ಪಡುವ ಜೀವಿಯೇ ಪ್ರಪಂಚದಲ್ಲಿ ಅಲೆಯುತ್ತಿರುತ್ತಾನೆ. ॥ ೨೫ ॥

ತಥಾಪಿ ಸಂಗಃ ಪರಿವರ್ಜನೀಯೋ
ಗುಣೇಷು ಮಾಯಾರಚಿತೇಷು ತಾವತ್ ।
ಮದ್ಭಕ್ತಿಯೋಗೇನ ದೃಢೇನ ಯಾವದ್
ರಜೋ ನಿರಸ್ಯೇತ ಮನಃ ಕಷಾಯಃ ॥ ೨೭ ॥

ಉದ್ಧವನೇ! ಹೀಗಾದರೂ ಕೂಡ ನನ್ನ ಸುದೃಢ ಭಕ್ತಿಯೋಗದ ಮೂಲಕ ಮನಸ್ಸಿನ ರಜೋಗುಣರೂಪೀ ಮಲವು ಪೂರ್ಣವಾಗಿ ಹೊರಟುಹೋಗುವವರೆಗೆ, ಈ ಮಾಯಾನಿರ್ಮಿತಗುಣಗಳು ಮತ್ತು ಅವುಗಳ ಕಾರ್ಯಗಳ ಸಂಗವನ್ನು ಪೂರ್ಣವಾಗಿ ತ್ಯಜಿಸಿ ಬಿಡಬೇಕು. ॥ ೨೭ ॥ ಉದ್ಧವನೇ! ಚೆನ್ನಾಗಿ ಚಿಕಿತ್ಸೆ ಮಾಡದಿದ್ದಾಗ ರೋಗವು ಸಮೂಲವಾಗಿ ನಾಶವಾಗದೆ, ಅದು ಮೇಲಿಂದ ಮೇಲೆ ಉದ್ರೇಕಗೊಂಡು ಮನುಷ್ಯನನ್ನು ಸತಾಯಿಸುತ್ತಾ ಇರುತ್ತದೆ. ಹಾಗೆಯೇ ಮನಸ್ಸಿನ ವಾಸನೆಗಳು ಮತ್ತು ಕರ್ಮಗಳ ಸಂಸ್ಕಾರಗಳು ಅಳಿದುಹೋಗುವುದಿಲ್ಲವೋ, ಅದು ಪತ್ನೀ-ಪುತ್ರಾದಿಗಳಲ್ಲಿ ಆಸಕ್ತವಾಗಿದೆಯೋ, ಇಂತಹ ಅರ್ಧಂಬರ್ಧ ಯೋಗಿಗೆ ಈ ಕರ್ಮ-ವಾಸನೆಗಳು ಪೀಡಿಸುತ್ತಾ ಇರುತ್ತವೆ. ॥ ೨೮ ॥ ದೇವತೆಗಳ ಮೂಲಕ ಪ್ರೇರಿತನಾಗಿ ಅಥವಾ ಯಾರೇ ಮನುಷ್ಯನು ಒಡ್ಡಿದ ವಿಘ್ನಗಳಿಂದ ಕದಾಚಿತ್ ಯೋಗಿಯು ಯೋಗಭ್ರಷ್ಟನಾಗಿ ಹೋದರೆ, ಅವನು ಪೂರ್ವಾಭ್ಯಾಸದ ಕಾರಣ ಪುನಃ ಯೋಗಾಭ್ಯಾಸದಲ್ಲೇ ತೊಡಗುತ್ತಾನೆ. ಕರ್ಮಾದಿಗಳಲ್ಲಿ ಅವನ ಪ್ರವೃತ್ತಿ ಇರುವುದಿಲ್ಲ. ॥ ೨೯ ॥ ಉದ್ಧವನೇ! ಜೀವಿಯು ಸಂಸ್ಕಾರಾದಿಗಳಿಂದ ಪ್ರೇರಿತನಾಗಿ ಹುಟ್ಟಿನಿಂದ ಸಾಯುವವರೆಗೆ ಕರ್ಮದಲ್ಲೇ ತೊಡಗಿರುತ್ತಾನೆ. ಅವುಗಳಲ್ಲಿ ಇಷ್ಟ-ಅನಿಷ್ಟ ಬುದ್ಧಿಯನ್ನಿರಿಸಿ ಹರ್ಷ-ವಿಷಾದ ಮುಂತಾದ ವಿಕಾರಗಳನ್ನು ಪಡೆಯುತ್ತಾನೆ. ಆದರೆ ತತ್ತ್ವದ ಸಾಕ್ಷಾತ್ಕಾರಮಾಡಿಕೊಂಡವನು ಪ್ರಕೃತಿಯಲ್ಲಿ ಸ್ಥಿತನಾಗಿದ್ದರೂ, ಪೂರ್ವ ಸಂಸ್ಕಾರಾನುಸಾರ ಅವನಿಂದ ಕರ್ಮಗಳು ಆಗುತ್ತಿದ್ದರೂ ಕೂಡ ಹರ್ಷ-ಶೋಕಾದಿ ವಿಕಾರಗಳಿಂದ ಕೂಡಿರುವುದಿಲ್ಲ. ಏಕೆಂದರೆ, ಆನಂದಸ್ವರೂಪೀ ಆತ್ಮನ ಸಾಕ್ಷಾತ್ಕಾರದಿಂದ ಅವನ ಸಂಸಾರಸಂಬಂಧೀ ಎಲ್ಲ ಆಸೆ-ತೃಷ್ಣೆಗಳು ಮೊದಲೇ ನಾಶವಾಗಿ ಹೋಗಿದ್ದವು. ॥ ೩೦ ॥ ತನ್ನ ಸ್ವರೂಪದಲ್ಲಿ ಸ್ಥಿತನಾದವನಿಗೆ – ತನ್ನ ಶರೀರ ನಿಂತಿದೆಯೋ, ಕುಳಿತಿದೆಯೋ, ನಡೆಯುತ್ತಿದೆಯೋ, ಮಲಗಿದೆಯೋ, ಮಲ-ಮೂತ್ರ ವಿಸರ್ಜಿಸುತ್ತಿದೆಯೋ, ಊಟ ಮಾಡುತ್ತಿದೆಯೋ, ಅಥವಾ ಯಾವುದಾದರೂ ಸ್ವಾಭಾವಿಕ ಕರ್ಮಮಾಡುತ್ತಿದೆಯೋ ಎಂಬುದರ ಅರಿವು ಕೂಡ ಇರುವುದಿಲ್ಲ. ಏಕೆಂದರೆ, ಅವನ ವೃತ್ತಿಗಳಾದರೋ ಆತ್ಮಸ್ವರೂಪದಲ್ಲಿ ಸ್ಥಿತವಾಗಿ ಬ್ರಹ್ಮಾಕಾರವಾಗಿರುತ್ತವೆ. ॥ ೩೧ ॥ ಜ್ಞಾನೀ ಪುರುಷನ ದೃಷ್ಟಿಯಲ್ಲಿ ಅಸತ್ತಾದ ಇಂದ್ರಿಯಗಳ ವಿವಿಧ ಬಾಹ್ಯವಿಷಯಗಳು ಬಂದರೂ ಕೂಡ ಅವನು ಅದನ್ನು ತನ್ನ ಆತ್ಮನಿಂದ ಭಿನ್ನವಾಗಿ ತಿಳಿಯುವುದಿಲ್ಲ. ಮತ್ತು ಆತ್ಮನಿಗಿಂತ ಬೇರೆ ಸತ್ತೆಯನ್ನು ಸ್ವೀಕರಿಸುವುದೇ ಇಲ್ಲ. ಏಕೆಂದರೆ ಯುಕ್ತಿಗಳಿಂದ, ಪ್ರಮಾಣಗಳಿಂದ, ಸ್ವಾನುಭೂತಿಯಿಂದ ಅವುಗಳ ಸ್ವತಂತ್ರ ಸತ್ತೆ ಸಿದ್ಧವಾಗುವುದಿಲ್ಲ. ನಿದ್ದೆಯಿಂದ ಎದ್ದಮೇಲೆ ಸ್ವಪ್ನದಲ್ಲಿ ಕಂಡ ಮತ್ತು ಎಚ್ಚರವಾದಾಗ ತಿರೋಹಿತವಾದ ಪದಾರ್ಥಗಳನ್ನು ಯಾರೂ ಸತ್ಯವೆಂದು ತಿಳಿಯುವುದಿಲ್ಲ. ಹಾಗೆಯೇ ಜ್ಞಾನೀ ಪುರುಷನೂ ಕೂಡ ತನ್ನಿಂದ ಭಿನ್ನವಾಗಿ ಕಂಡುಬರುವ ಪದಾರ್ಥಗಳನ್ನು ಸತ್ಯವೆಂದು ತಿಳಿಯುವುದಿಲ್ಲ. ॥ ೩೨ ॥

ಯಥಾಽಽಮಯೋಽಸಾಧುಚಿಕಿತ್ಸಿತೋ ನೃಣಾಂ
ಪುನಃ ಪುನಃ ಸಂತುದತಿ ಪ್ರರೋಹನ್ ।
ಏವಂ ಮನೋಽಪಕ್ವಕಷಾಯಕರ್ಮ
ಕುಯೋಗಿನಂ ವಿಧ್ಯತಿ ಸರ್ವಸಂಗಮ್ ॥ ೨೮ ॥

ಕುಯೋಗಿನೋ ಯೇ ವಿಹಿತಾಂತರಾಯೈ-
ರ್ಮನುಷ್ಯಭೂತೈಸ್ತ್ರಿದಶೋಪಸೃಷ್ಟೈಃ ।
ತೇ ಪ್ರಾಕ್ತನಾಭ್ಯಾಸಬಲೇನ ಭೂಯೋ
ಯುಂಜಂತಿ ಯೋಗಂ ನ ತು ಕರ್ಮತಂತ್ರಮ್ ॥ ೨೯ ॥

ಕರೋತಿ ಕರ್ಮ ಕ್ರಿಯತೇ ಚ ಜಂತುಃ
ಕೇನಾಪ್ಯಸೌ ಚೋದಿತ ಆನಿಪಾತಾತ್ ।
ನ ತತ್ರ ವಿದ್ವಾನ್ಪ್ರಕೃತೌ ಸ್ಥಿತೋಽಪಿ
ನಿವೃತ್ತತೃಷ್ಣಃ ಸ್ವಸುಖಾನುಭೂತ್ಯಾ ॥ ೩೦ ॥

ತಿಷ್ಠಂತಮಾಸೀನಮುತ ವ್ರಜಂತಂ
ಶಯಾನಮುಕ್ಷಂತಮದಂತಮನ್ನಮ್ ।
ಸ್ವಭಾವಮನ್ಯತ್ಕಿಮಪೀಹಮಾನ-
ಮಾತ್ಮಾನಮಾತ್ಮಸ್ಥಮತಿರ್ನ ವೇದ ॥ ೩೧ ॥

ಯದಿ ಸ್ಮ ಪಶ್ಯತ್ಯಸದಿಂದ್ರಿಯಾರ್ಥಂ
ನಾನಾನುಮಾನೇನ ವಿರುದ್ಧಮನ್ಯತ್ ।
ನ ಮನ್ಯತೇ ವಸ್ತುತಯಾ ಮನೀಷೀ
ಸ್ವಾಪ್ನಂ ಯಥೋತ್ಥಾಯ ತಿರೋದಧಾನಮ್ ॥ ೩೨ ॥

ಪೂರ್ವಂ ಗೃಹೀತಂ ಗುಣಕರ್ಮಚಿತ್ರ-
ಮಜ್ಞಾನಮಾತ್ಮನ್ಯವಿವಿಕ್ತಮಂಗ ।
ನಿವರ್ತತೇ ತತ್ಪುನರೀಕ್ಷಯೈವ
ನ ಗೃಹ್ಯತೇ . ನಾಪಿ ವಿಸೃಜ್ಯ ಆತ್ಮಾ ॥ ೩೩॥

ಯಥಾ ಹಿ ಭಾನೋರುದಯೋ ನೃಚಕ್ಷುಷಾಂ
ತಮೋ ನಿಹನ್ಯಾನ್ನ ತು ಸದ್ವಿಧತ್ತೇ ।
ಏವಂ ಸಮೀಕ್ಷಾ ನಿಪುಣಾ ಸತೀ ಮೇ
ಹನ್ಯಾತ್ತಮಿಸ್ರಂ ಪುರುಷಸ್ಯ ಬುದ್ಧೇಃ ॥ ೩೪ ॥

ಏಷ ಸ್ವಯಂಜ್ಯೋತಿರಜೋಽಪ್ರಮೇಯೋ
ಮಹಾನುಭೂತಿಃ ಸಕಲಾನುಭೂತಿಃ ।
ಏಕೋಽದ್ವಿತೀಯೋ ವಚಸಾಂ ವಿರಾಮೇ
ಯೇನೇಷಿತಾ ವಾಗಸವಶ್ಚರಂತಿ ॥ ೩೫ ॥

ಏತಾವಾನಾತ್ಮಸಂಮೋಹೋ ಯದ್ವಿಕಲ್ಪಸ್ತು ಕೇವಲೇ ।
ಆತ್ಮನ್ನೃತೇ ಸ್ವಮಾತ್ಮಾನಮವಲಂಬೋ ನ ಯಸ್ಯ ಹಿ
॥ ೩೬ ॥

ಯನ್ನಾಮಾಕೃತಿಭಿರ್ಗ್ರಾಹ್ಯಂ ಪಂಚವರ್ಣಮಬಾಧಿತಮ್ ।
ವ್ಯರ್ಥೇನಾಪ್ಯರ್ಥವಾದೋಽಯಂ ದ್ವಯಂ ಪಂಡಿತಮಾನಿನಾಮ್
॥ ೩೭ ॥

ಯೋಗಿನೋಽಪಕ್ವಯೋಗಸ್ಯ ಯುಂಜತಃ ಕಾಯ ಉತ್ಥಿತೈಃ ।
ಉಪಸರ್ಗೈರ್ವಿಹನ್ಯೇತ ತತ್ರಾಯಂ ವಿಹಿತೋ ವಿಧಿಃ
॥ ೩೮ ॥

ಯೋಗಧಾರಣಯಾ ಕಾಂಶ್ಚಿದಾಸನೈರ್ಧಾರಣಾನ್ವಿತೈಃ ।
ತಪೋಮಂತ್ರೌಷಧೈಃ ಕಾಂಶ್ಚಿದುಪಸರ್ಗಾನ್ವಿನಿರ್ದಹೇತ್
॥ ೩೯ ॥

ಕಾಂಶ್ಚಿನ್ಮಮಾನುಧ್ಯಾನೇನ ನಾಮಸಂಕೀರ್ತನಾದಿಭಿಃ ।
ಯೋಗೇಶ್ವರಾನುವೃತ್ತ್ಯಾ ವಾ ಹನ್ಯಾದಶುಭದಾನ್ಶನೈಃ
॥ ೪೦ ॥

ಪ್ರಿಯ ಉದ್ಧವನೇ ! ಅನೇಕ ಪ್ರಕಾರದ ಗುಣ, ಕರ್ಮಗಳಿಂದ ಕೂಡಿದ ಈ ದೇಹ, ಇಂದ್ರಿಯಗಳು, ಪದಾರ್ಥ ಮುಂತಾದವುಗಳಲ್ಲಿ ಮೊದಲು ಅಜ್ಞಾನದ ಕಾರಣ ಇವೆಲ್ಲವೂ ಆತ್ಮನಿಂದ ಬೇರೆಯಲ್ಲವೆಂದು ಕಂಡುಬರುತ್ತಿತ್ತು. ಆದರೆ ಜ್ಞಾನದಿಂದ ಅವುಗಳ ನಶ್ವರತೆಯ ಅರಿವು ಉಂಟಾದಾಗ, ಹಾಗೂ ಆ ಭ್ರಮೆಯು ಸಂಪೂರ್ಣ ನಿವೃತ್ತಿ ಆಗಿಹೋದಾಗ, ಅವನ ಜ್ಞಾನದಲ್ಲಿ ಏಕಮಾತ್ರ ಆತ್ಮತತ್ತ್ವವೇ ಇರುತ್ತದೆ. ಅವನು ಸ್ವತಃ ಆತ್ಮಸ್ವರೂಪವೇ ಆಗಿ ಹೋಗುತ್ತಾನೆ. ಈ ಸ್ಥಿತಿಯಲ್ಲಿ ಗ್ರಹಿಸುವುದು, ತ್ಯಜಿಸುವುದು ಏನು ಉಳಿಯುವುದಿಲ್ಲ. ॥ ೩೩ ॥ ಸೂರ್ಯನು ಉದಿಸಿದಾಗ ಮನುಷ್ಯರ ಅಂಧಕಾರವನ್ನು ದೂರಮಾಡುತ್ತಾನೆ. ಅವನು ಯಾವುದೇ ಹೊಸತನ್ನು ನಿರ್ಮಿಸುವುದಿಲ್ಲ, ಅದೇ ರೀತಿ ನನ್ನ ಪೂರ್ಣಜ್ಞಾನವಾದ ಮನುಷ್ಯನ ಬುದ್ಧಿಯ ಅಜ್ಞಾನ ದೂರವಾಗುತ್ತದೆ. ॥ ೩೪ ॥ ಈ ಆತ್ಮನು ಸ್ವಯಂಜ್ಯೋತಿ, ಅಜನ್ಮಾ, ಅಪ್ರಮೇಯಸ್ವರೂಪೀ, ಮಹಾನುಭೂತಿ ಸ್ವರೂಪವಾಗಿದೆ. ಎಲ್ಲ ಅನುಭೂತಿಗಳು ಅದರಲ್ಲೇ ಆಗುತ್ತವೆ. ಈ ಆತ್ಮನು ಏಕನಾಗಿದ್ದು, ಅದ್ವಿತೀಯನಾಗಿದ್ದಾನೆ. ವಾಣಿಯ ವಿರಾಮವಾದಮೇಲೆ ಏಕಮಾತ್ರ ಅವನೇ ಉಳಿಯುತ್ತಾನೆ. ಅವನ ಇಚ್ಛೆಯಿಂದಲೇ ವಾಣೀ ಮತ್ತು ಪ್ರಾಣಗಳು ತಮ್ಮ-ತಮ್ಮ ಕಾರ್ಯಮಾಡುತ್ತವೆ. ॥ ೩೫ ॥

ಉದ್ಧವನೇ ! ಅದ್ವಿತೀಯ ಅಖಂಡ ಆತ್ಮತತ್ತ್ವದಲ್ಲಿ ಭೇದ ಭ್ರಮೆಯ ಕಲ್ಪನೆಯೇ ಅಜ್ಞಾನವಾಗಿದೆ. ಜೀವಿಯು ಪ್ರಕೃತಿಯೊಂದಿಗೆ ಅಹಂಭಾವವಿರಿಸಿಯೇ ಭೇದವನ್ನು ಕಲ್ಪಿಸುತ್ತಾನೆ. ಈ ಭ್ರಮೆಯ ಮತ್ತು ಅಜ್ಞಾನದ ಸ್ವತಂತ್ರ ಸತ್ತೆಯೇ ಇಲ್ಲ. ಆದರೆ ಇವು ಕಂಡುಬಂದರೆ ಆತ್ಮನ ಅಧಿಷ್ಠಾನದಿಂದಲೇ ಕಾಣುತ್ತವೆ. ಆದ್ದರಿಂದ ಎಲ್ಲವೂ ಆತ್ಮನೇ ಆಗಿದ್ದಾನೆ. ॥ ೩೬ ॥ ಅನೇಕರು ತಮ್ಮನ್ನು ಪಂಡಿತರೆಂದು ತಿಳಿಯುತ್ತಾರೆ. ಆದರೆ ವಾಸ್ತವವಾಗಿ ಪಂಡಿತರಲ್ಲ, ಇಂತಹ ಜನರು ನಾಮ-ರೂಪ ಮತ್ತು ಇಂದ್ರಿಯಗಳಿಂದ ಗ್ರಹಿಸಲಾಗುವ ಈ ಪಂಚಭೂತಾತ್ಮಕ ದ್ವೈತ ಜಗತ್ತು ಸತ್ಯವಾಗಿದೆ ಎಂದು ಸ್ವೀಕರಿಸುತ್ತಾರೆ. ಆದರೆ ಹೀಗೆ ಹೇಳುವುದು ಅವರ ಶಬ್ದಾಡಂಬರಮಾತ್ರವಾಗಿದೆ. ॥ ೩೭ ॥

ಉದ್ಧವನೇ ! ಯೋಗಸಾಧನೆಯು ಪೂರ್ಣವಾಗುವ ಮೊದಲೇ ಯಾರಾದರೂ ಸಾಧಕನ ಶರೀರವು ರೋಗಾದಿ ಉಪದ್ರವಗಳಿಂದ ಪೀಡಿತವಾದರೆ ಅವನು ಈ ಉಪಾಯಗಳನ್ನು ಆಶ್ರಯಿಸಬೇಕು. ॥ ೩೮ ॥ ಸೆಕೆ-ಚಳಿ ಮುಂತಾದುವನ್ನು ಚಂದ್ರ-ಸೂರ್ಯರನ್ನು ಧಾರಣೆಯ ಮೂಲಕ, ವಾತಾದಿ ರೋಗಗಳನ್ನು ಪ್ರಾಣಾಯಾಮ ಆದಿಯೋಗ ಧಾರಣಾಯುಕ್ತ ಆಸನಗಳ ಮೂಲಕ, ಗ್ರಹ-ಸರ್ಪಾದಿಕೃತ ವಿಘ್ನಗಳನ್ನು ತಪಸ್ಸು, ತಂತ್ರ ಹಾಗೂ ಔಷಧಿಗಳ ಮೂಲಕ ನಾಶಮಾಡಿಬಿಡಬೇಕು. ॥ ೩೯ ॥ ಕಾಮ ಕ್ರೋಧಾದಿ ವಿಘ್ನಗಳನ್ನು ನನ್ನ ಚಿಂತನೆ, ನಾಮಸಂಕೀರ್ತನೆ ಮೊದಲಾದುವುಗಳಿಂದ ನಾಶಮಾಡಬೇಕು. ಪತನದತ್ತ ಕೊಂಡು ಹೋಗುವ ದಂಭ-ಮದ ಮುಂತಾದ ವಿಘ್ನಗಳನ್ನು ನಿಧಾನವಾಗಿ ಮಹಾಪುರುಷರ ಸೇವೆಯಿಂದ ದೂರಗೊಳಿಸ ಬೇಕು. ॥ ೪೦ ॥

ಕೇಚಿದ್ದೇಹಮಿಮಂ ಧೀರಾಃ ಸುಕಲ್ಪಂ ವಯಸಿ ಸ್ಥಿರಮ್ ।
ವಿಧಾಯ ವಿವಿಧೋಪಾಯೈರಥ ಯುಂಜಂತಿ ಸಿದ್ಧಯೇ ॥ ೪೧ ॥

ನಹಿ ತತ್ಕುಶಲಾದೃತ್ಯಂ ತದಾಯಾಸೋ ಹ್ಯಪಾರ್ಥಕಃ ।
ಅಂತವತ್ತ್ವಾಚ್ಛರೀರಸ್ಯ ಫಲಸ್ಯೇವ ವನಸ್ಪತೇಃ ॥ ೪೨ ॥

ಯೋಗಂ ನಿಷೇವತೋ ನಿತ್ಯಂ ಕಾಯಶ್ಚೇತ್ಕಲ್ಪತಾಮಿಯಾತ್ ।
ತಚ್ಛ್ರದ್ದಧ್ಯಾನ್ನ ಮತಿಮಾನ್ ಯೋಗಮುತ್ಸೃಜ್ಯ ಮತ್ಪರಃ ॥ ೪೩ ॥

ಯೋಗಚರ್ಯಾಮಿಮಾಂ ಯೋಗೀ ವಿಚರನ್ಮದಪಾಶ್ರಯಃ ।
ನಾಂತರಾಯೈರ್ವಿಹನ್ಯೇತ ನಿಃಸ್ಪೃಹಃ ಸ್ವಸುಖಾನುಭೂಃ ॥ ೪೪ ॥

ಕೆಲ-ಕೆಲವು ಮನಸ್ವೀ ಯೋಗಿಗಳು ವಿವಿಧ ಉಪಾಯಗಳಿಂದ ಈ ಶರೀರವನ್ನು ಸುದೃಢ ಮತ್ತು ತರುಣವಾಗಿಯೇ ಸ್ಥಿರಗೊಳಿಸಿ ಮತ್ತೆ ಅಣಿಮಾದಿ ಸಿದ್ಧಿಗಳಿಗಾಗಿ ಯೋಗಸಾಧನೆಮಾಡುತ್ತಾರೆ. ಆದರೆ ಬುದ್ಧಿವಂತರಾದವರು ಇಂತಹ ವಿಚಾರವನ್ನು ಸಮರ್ಥಿಸುವುದಿಲ್ಲ, ಏಕೆಂದರೆ ಇದಾದರೋ ಒಂದು ವ್ಯರ್ಥ ಪ್ರಯಾಸವೇ ಆಗಿದೆ. ವೃಕ್ಷಗಳಲ್ಲಿ ಬಿಟ್ಟ ಫಲದಂತೆಯೇ ಈ ಶರೀರದ ನಾಶವು ಅವಶ್ಯಂಭಾವಿಯಾಗಿದೆ. ॥ ೪೧-೪೨ ॥ ಒಂದೊಮ್ಮೆ ಬಹಳ ದಿನಗಳವರೆಗೆ ನಿರಂತರ, ಆದರಪೂರ್ವಕವಾಗಿ ಯೋಗಸಾಧನೆ ಮಾಡುತ್ತಿರುವಾಗ ಶರೀರವು ಸುದೃಢವೂ ಆಗಬಹುದು. ಆಗಲೂ ಬುದ್ಧಿವಂತರಾದವರು ತಮ್ಮ ಸಾಧನೆಯನ್ನು ಬಿಟ್ಟು ಅದರಲ್ಲೇ ಸಂತೋಷಪಡಬಾರದು. ಅವರಾದರೋ ಸದಾಕಾಲವೂ ನನ್ನ ಪ್ರಾಪ್ತಿಗಾಗಿಯೇ ತೊಡಗಿರಬೇಕು. ॥ ೪೩ ॥ ನನ್ನನ್ನು ಆಶ್ರಯಿಸಿ, ನನ್ನಿಂದ ಹೇಳಲ್ಪಟ್ಟ ಯೋಗಸಾಧನೆಯಲ್ಲಿ ತೊಡಗಿರುವ ಸಾಧಕನಿಗೆ ಯಾವುದೇ ವಿಘ್ನಗಳು ಕದಲಿಸಲಾರವು. ಅವನ ಕಾಮನೆಗಳೆಲ್ಲ ನಾಶವಾಗಿ ಹೋಗುತ್ತವೆ ಮತ್ತು ಅವನು ಆತ್ಮಾನಂದದ ಅನುಭೂತಿಯಲ್ಲಿ ಮುಳುಗಿಹೋಗುತ್ತಾನೆ. ॥ ೪೪ ॥

ಇಪ್ಪತ್ತೆಂಟನೆಯ ಅಧ್ಯಾಯವು ಮುಗಿಯಿತು. ॥ ೨೮ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಏಕಾದಶ ಸ್ಕಂಧೇ ಅಷ್ಟಾವಿಂಶೋಽಧ್ಯಾಯಃ ॥ ೨೮ ॥

# ಇಪ್ಪತ್ತೊಂಭತ್ತನೆಯ ಅಧ್ಯಾಯ

## ಭಾಗವತಧರ್ಮಗಳ ನಿರೂಪಣೆ ಮತ್ತು ಉದ್ಧವನು ಬದರಿಕಾಶ್ರಮಕ್ಕೆ ಹೋದುದು

*ಉದ್ಧವ ಉವಾಚ*

ಸುದುಶ್ಚರಾಮಿಮಾಂ ಮನ್ಯೇ ಯೋಗಚರ್ಯಾಮನಾತ್ಮನಃ ।
ಯಥಾಂಜಸಾ ಪುಮಾನ್ ಸಿದ್ಧ್ಯೇತ್ ತನ್ಮೇ ಬ್ರೂಹ್ಯಂಜಸಾಚ್ಯುತ ॥ ೧ ॥

ಪ್ರಾಯಶಃ ಪುಂಡರೀಕಾಕ್ಷ ಯುಂಜಂತೋ ಯೋಗಿನೋ ಮನಃ ।
ವಿಷೀದಂತ್ಯಸಮಾಧಾನಾನ್ ಮನೋನಿಗ್ರಹಕರ್ಶಿತಾಃ ॥ ೨ ॥

ಉದ್ಧವನು ಕೇಳಿದನು – ಅಚ್ಯುತಾ ! ತನ್ನ ಮನಸ್ಸನ್ನು ವಶಪಡಿಸಿಕೊಳ್ಳಲಾರದವನಿಗೆ ನೀನು ಅರುಹಿದ ಈ ಯೋಗಸಾಧನೆಯು ಬಹಳ ಕಠಿಣವೆಂದೇ ನಾನು ತಿಳಿಯುತ್ತೇನೆ. ಆದ್ದರಿಂದ ಈಗ ನೀನು – ಮನುಷ್ಯನು ಆಯಾಸವಿಲ್ಲದೆ ಪರಮಪದವನ್ನು ಪಡೆಯುವಂತಹ ಸರಳ-ಸುಲಭ ಸಾಧನೆಯನ್ನು ತಿಳಿಸುವವನಾಗು. ॥ ೧ ॥ ಕಮಲನಯನಾ ! ನಿನ್ನನ್ನು ಪಡೆಯುವುದಕ್ಕಾಗಿ ಹೆಚ್ಚಿನ ಯೋಗಿಗಳು ತಮ್ಮ ಮನಸ್ಸನ್ನು ಏಕಾಗ್ರಮಾಡಲು ತೊಡಗಿದಾಗ, ಅವರು ಪದೇ-ಪದೇ ಪ್ರಯತ್ನಮಾಡಿದರೂ ಮನಸ್ಸನ್ನು ವಶಪಡಿಸಲು ಸಫಲರಾಗುವುದಿಲ್ಲ, ಕೊನೆಗೆ ಸೋತುಹೋಗುತ್ತಾರೆ. ಈ ಪ್ರಕಾರ ನಿನ್ನ ಪ್ರಾಪ್ತಿಯನ್ನು ಮಾಡಿಕೊಳ್ಳದ ಕಾರಣ ದುಃಖವನ್ನು ಭೋಗಿಸುತ್ತಾ ಇರುತ್ತಾರೆ. ಇದು ನಿನಗೆ ತಿಳಿದೇ ಇದೆ. ಇಂತಹ ದುಃಖಗಳಿಂದ ಮುಕ್ತವಾಗಲು ಯಾವ ಉಪಾಯವಿದೆ ? ಎಂಬುದನ್ನು ತಿಳಿಸುವ ಕೃಪೆ ಮಾಡಬೇಕು. ॥ ೨ ॥ ಓ ಕಮಲನಯನಾ ! ಓ ವಿಶ್ವೇಶ್ವರಾ ! ನಿನ್ನ ಚರಣ

ಅಥಾತ ಆನಂದದುಘಂ ಪದಾಂಬುಜಂ
ಹಂಸಾಃ ಶ್ರಯೇರನ್ನರವಿಂದಲೋಚನ ।
ಸುಖಂ ನು ವಿಶ್ವೇಶ್ವರ ಯೋಗಕರ್ಮಭಿ-
ಸ್ತ್ವನ್ಮಾಯಯಾಮೀ ವಿಹತಾ ನ ಮಾನಿನಃ ॥ ೩ ॥

ಕಿಂ ಚಿತ್ರಮಚ್ಯುತ ತವೈತದಶೇಷಬಂಧೋ
ದಾಸೇಷ್ವನನ್ಯಶರಣೇಷು ಯದಾತ್ಮಸಾತ್ತ್ವಮ್ ।
ಯೋಽರೋಚಯತ್ಸಹ ಮೃಗೈಃ ಸ್ವಯಮೀಶ್ವರಾಣಾಂ
ಶ್ರೀಮತ್ಕಿರೀಟತಟಪೀಡಿತಪಾದಪೀಠಃ ॥ ೪ ॥

ತಂ ತ್ವಾಖಿಲಾತ್ಮದಯಿತೇಶ್ವರಮಾಶ್ರಿತಾನಾಂ
ಸರ್ವಾರ್ಥದಂ ಸ್ವಕೃತವಿದ್ವಿಸೃಜೇತ ಕೋ ನು ।
ಕೋ ವಾ ಭಜೇತ್ಕಿಮಪಿ ವಿಸ್ಮೃತಯೇಽನು ಭೂತ್ಯೈ
ಕಿಂ ವಾ ಭವೇನ್ನ ತವ ಪಾದರಜೋಜುಷಾಂ ನಃ ॥ ೫ ॥

ನೈವೋಪಯಂತ್ಯಪಚಿತಿಂ ಕವಯಸ್ತವೇಶ
ಬ್ರಹ್ಮಾಯುಷಾಪಿ ಕೃತಮೃದ್ಧಮುದಃ ಸ್ಮರಂತಃ ।
ಯೋಽಂತರ್ಬಹಿಸ್ತನುಭೃತಾಮಶುಭಂ ವಿಧುನ್ವ-
ನ್ನಾಚಾರ್ಯಚೈತ್ಯವಪುಷಾ ಸ್ವಗತಿಂ ವ್ಯನಕ್ತಿ ॥ ೬ ॥

*ಶ್ರೀಶುಕ ಉವಾಚ*

ಇತ್ಯುದ್ಧವೇನಾತ್ಯನುರಕ್ತಚೇತಸಾ
ಪೃಷ್ಟೋ ಜಗತ್ಕ್ರೀಡನಕಃ ಸ್ವಶಕ್ತಿಭಿಃ ।
ಗೃಹೀತಮೂರ್ತಿತ್ರಯ ಈಶ್ವರೇಶ್ವರೋ
ಜಗಾದ ಸಪ್ರೇಮ ಮನೋಹರಸ್ಮಿತಃ ॥ ೭ ॥

ಕಮಲಗಳು ಆನಂದವನ್ನು ವರ್ಷಿಸುವಂತಹವುಗಳು. ನಿನ್ನ ಅನನ್ಯ ಪ್ರೇಮೀ ಭಕ್ತರು ಆನಂದದಿಂದ ಈ ಚರಣಕಮಲಗಳಲ್ಲಿ ಶರಣಾಗುತ್ತಾರೆ. ಆದರೆ ನಿನ್ನ ಮಾಯೆಯಿಂದ ಮಣ್ಣುಗೂಡಿದ ಬುದ್ಧಿಯುಳ್ಳ ಜನರು ಯೋಗ ಮತ್ತು ಕರ್ಮಗಳಿಂದ ತಮ್ಮನ್ನು ಶ್ರೇಷ್ಠರೆಂದು ತಿಳಿದುಕೊಂಡು ಇವನ್ನು ಆಶ್ರಯಿಸುವುದಿಲ್ಲ. ॥ ೩ ॥ ಓ ಅಚ್ಯುತಾ ! ನೀನು ಸರ್ವಜಗತ್ತಿನ ಹಿತೈಷಿ, ಸುಹೃದನಾಗಿರುವೆ. ನೀನು ನಿನ್ನ ಅನನ್ಯ ಶರಣಾಗತ ಭಕ್ತರನ್ನು ಆತ್ಮಸಾತ್ ಮಾಡಿಕೊಳ್ಳುವೆ. ಅವರಿಗೆ ನಿನ್ನ ಸ್ವರೂಪವನ್ನೇ ಕೊಟ್ಟುಬಿಡುವೆ. ಎಲ್ಲಿಯವರೆಗೆಂದರೆ – ತೊಂಡರಿಗೆ ತೊಂಡನಾಗುವೆ. (ಬಲಿಯ ಭಕ್ತಿಗೊಲಿದು ಅವನ ದ್ವಾರಪಾಲನಾದೆ, ನರಸಿಂಹ ಮೆಹತಾಗೆ ನೀನು ಏನೇನು ಮಾಡಲಿಲ್ಲ? ಇತ್ಯಾದಿ) ನೀನು ಎಲ್ಲ ಲೋಕಪಾಲರ ಅಧೀಶ್ವರನಾಗಿರುವೆ. ಬ್ರಹ್ಮಾದಿ ಲೋಕೇಶ್ವರರು ಸದಾಕಾಲ ನಿನಗೆ ಭಕ್ತಿಪೂರ್ವಕ ನಮಸ್ಕರಿಸುತ್ತಿರುತ್ತಾರೆ. ಅವರು ನಿನ್ನ ಚರಣಕಮಲಗಳನ್ನಿಡುವ ಪೀಠಕ್ಕೆ ತಮ್ಮ ಕಿರೀಟಾಗ್ರದಿಂದ ಶ್ರದ್ಧಾ ಪ್ರೇಮಸಹಿತ ಸಾಷ್ಟಾಂಗ ನಮಸ್ಕಾರ ಸಲ್ಲಿಸುತ್ತಾರೆ. ಇಷ್ಟು ಮಹಿಮಾಯುಕ್ತನಾಗಿದ್ದರೂ ನೀನು ರಾಮಾವತಾರದಲ್ಲಿ ಪ್ರೇಮಕ್ಕೆ ಪರವಶನಾಗಿ ವಾನರರೊಂದಿಗೆ ಮಿತ್ರತೆಯಿಂದ ವ್ಯವಹರಿಸಿದೆ. ಇದೇನೋ ನಿನಗಾಗಿ ಆಶ್ಚರ್ಯದ ಮಾತಲ್ಲ, ಏಕೆಂದರೆ ನಿನಗಾದರೋ ಭಕ್ತಿಯೇ ಪ್ರಿಯವಾಗಿದೆ. ॥ ೪ ॥ ಓ ಸ್ವಾಮಿ ! ನೀನು ಎಲ್ಲರ ಪ್ರಿಯತಮ ಪ್ರಭು ಮತ್ತು ಆತ್ಮಾ ಆಗಿರುವೆ. ನೀನು ನಿನ್ನ ಅನನ್ಯ ಶರಣಾಗತರಿಗೆ ಎಲ್ಲವನ್ನೂ ಕೊಟ್ಟುಬಿಡುವೆ. ನೀನು ನಿನ್ನ ಭಕ್ತರಿಗಾಗಿ ಏನೇನು ಅದ್ಭುತಕಾರ್ಯ ಮಾಡಿರುವೆಯೋ, ಅವನ್ನು ತಿಳಿದಿರುವವರು ಯಾವುದೇ ಭೌತಿಕ ಸುಖಕ್ಕಾಗಿ ಯಾರು ನಿನ್ನ ಉಪಾಸನೆ ಮಾಡುವರು ? ಏಕೆಂದರೆ, ಈ ಭೌತಿಕ ಸುಖಗಳಾದರೋ ನಿನ್ನ ವಿಸ್ಮೃತಿಯಲ್ಲಿ ಕೆಡಹುವಂತಹವುಗಳು. ನಾವಾದರೋ ನಿನ್ನ ಚರಣಕಮಲ ರಜದ ಅನನ್ಯ ಉಪಾಸಕರಾಗಿದ್ದೇವೆ. ಆದ್ದರಿಂದ ನಮಗಾಗಿ ದುರ್ಲಭವೇನಿದೆ ? ॥ ೫ ॥ ಓ ಜಗದೀಶಾ ! ನೀನು ಮಾಡಿರುವ ಉಪಕಾರಗಳೂ ಪದೇ-ಪದೇ ನಮ್ಮ ಮನಸ್ಸಿನಲ್ಲಿ ಸ್ಮರಣೆಗೆ ಬರುತ್ತವೆ. ಈ ದೇವದುರ್ಲಭವಾದ ಮನುಷ್ಯಶರೀರವು ಕೇವಲ ನಿನ್ನ ಕೃಪೆಯಿಂದಲೇ ದೊರೆತಿದೆ. ನಿನ್ನ ಈ ಅಪಾರ ಅನುಕಂಪವನ್ನು ಮೇಲಿಂದಮೇಲೆ ನೆನೆಯುತ್ತಿರುವಾಗ ನಮ್ಮ ಹೃದಯದಲ್ಲಿ ಪರಮಾನಂದದ ನೆರೆಯೇ ಬರುತ್ತದೆ. ನಿನ್ನ ಕೃಪೆಯು ಊಹಿಸಲೂ ಸಾಧ್ಯವಾಗದಷ್ಟು ಅಪಾರವಾಗಿದೆ. ಒಂದೊಮ್ಮೆ ಬ್ರಹ್ಮನ ಆಯುಸ್ಸೇ ಸಿಕ್ಕಿದರೂ ನಾವು ನಿನ್ನ ಉಪಕಾರದ ಋಣವನ್ನು ತೀರಿಸಲಾರೆವು. ಮನುಷ್ಯನ ಹೊರಗೆ-ಒಳಗೆ ಇರುವ ಅಶುಭಗಳನ್ನು ನಿರ್ಮೂಲನಗೊಳಿಸಲು ಹೊರಗಿನಿಂದ ಸದ್ಗುರುರೂಪದಿಂದ ನೀನೇ ಜ್ಞಾನೋಪದೇಶವನ್ನು ಕೊಡುತ್ತಿರುವೆ. ಅಂತರ್ಯಾಮಿಯಾಗಿ ಅಂತರಾತ್ಮರೂಪದಿಂದ ಪ್ರಕಟನಾಗಿ ಅಜ್ಞಾನವನ್ನೂ ನೀನೇ ಕಳೆಯುವೆ. ॥ ೬ ॥

**ಶ್ರೀಶುಕಯೋಗಿಗಳು ಹೇಳುತ್ತಾರೆ** – ಪರೀಕ್ಷಿತನೇ ! ಭಗವಾನ್ ಶ್ರೀಕೃಷ್ಣನು ಬ್ರಹ್ಮಾದಿದೇವತೆಗಳಿಗೂ ಒಡೆಯನಾಗಿದ್ದಾನೆ. ಅವನೇ ತನ್ನ ಶಕ್ತಿಯಾದ ತ್ರಿಗುಣಗಳಿಂದ ಬ್ರಹ್ಮಾ, ವಿಷ್ಣು, ಮಹೇಶ್ವರ

*ಶ್ರೀಭಗವಾನುವಾಚ*

ಹಂತ ತೇ ಕಥಯಿಷ್ಯಾಮಿ ಮಮ ಧರ್ಮಾನ್ ಸುಮಂಗಲಾನ್ ।
ಯಾನ್ ಶ್ರದ್ಧಯಾಽಽಚರನ್ಮರ್ತ್ಯೋ ಮೃತ್ಯುಂ ಜಯತಿ ದುರ್ಜಯಮ್
॥ ೮ ॥

ಕುರ್ಯಾತ್ ಸರ್ವಾಣಿ ಕರ್ಮಾಣಿ ಮದರ್ಥಂ ಶನಕೈಃ ಸ್ಮರನ್ ।
ಮಯ್ಯರ್ಪಿತಮನಶ್ಚಿತ್ತೋ ಮದ್ಧರ್ಮಾತ್ಮಮನೋರತಿಃ
॥ ೯ ॥

ದೇಶಾನ್ಪುಣ್ಯಾನಾಶ್ರಯೇತ ಮದ್ಭಕ್ತೈಃ ಸಾಧುಭಿಃ ಶ್ರಿತಾನ್ ।
ದೇವಾಸುರಮನುಷ್ಯೇಷು ಮದ್ಭಕ್ತಾಚರಿತಾನಿ ಚ
॥ ೧೦ ॥

ಪೃಥಕ್ ಸತ್ರೇಣ ವಾ ಮಹ್ಯಂ ಪರ್ವಯಾತ್ರಾಮಹೋತ್ಸವಾನ್ ।
ಕಾರಯೇದ್ಗೀತನೃತ್ಯಾದ್ಯೈರ್ಮಹಾರಾಜವಿಭೂತಿಭಿಃ
॥ ೧೧ ॥

ಮಾಮೇವ ಸರ್ವಭೂತೇಷು ಬಹಿರಂತರಪಾವೃತಮ್ ।
ಈಕ್ಷೇತಾತ್ಮನಿ ಚಾತ್ಮಾನಂ ಯಥಾ ಖಮಮಲಾಶಯಃ
॥ ೧೨ ॥

ಇತಿ ಸರ್ವಾಣಿ ಭೂತಾನಿ ಮದ್ಭಾವೇನ ಮಹಾದ್ಯುತೇ ।
ಸಭಾಜಯನ್ಮನ್ಯಮಾನೋ ಜ್ಞಾನಂ ಕೇವಲಮಾಶ್ರಿತಃ
॥ ೧೩ ॥

ಬ್ರಾಹ್ಮಣೇ ಪುಲ್ಕಸೇ ಸ್ತೇನೇ ಬ್ರಹ್ಮಣ್ಯೇಽರ್ಕೇ ಸ್ಫುಲಿಂಗಕೇ ।
ಅಕ್ರೂರೇ ಕ್ರೂರಕೇ ಚೈವ ಸಮದೃಕ್ ಪಂಡಿತೋ ಮತಃ
॥ ೧೪ ॥

ನರೇಷ್ವಭೀಕ್ಷ್ಣಂ ಮದ್ಭಾವಂ ಪುಂಸೋ ಭಾವಯತೋಽಚಿರಾತ್ ।
ಸ್ಪರ್ಧಾಸೂಯಾತಿರಸ್ಕಾರಾಃ ಸಾಹಂಕಾರಾ ವಿಯಂತಿ ಹಿ
॥ ೧೫ ॥

ವಿಸೃಜ್ಯ ಸ್ಮಯಮಾನಾನ್ ಸ್ವಾನ್ ದೃಶಂ ವ್ರೀಡಾಂ ಚ ದೈಹಿಕೀಮ್ ।
ಪ್ರಣಮೇದ್ದಂಡವದ್ಭೂಮಾವಾಶ್ವಚಾಂಡಾಲಗೋಖರಮ್
॥ ೧೬ ॥

ರೂಪಗಳನ್ನು ಧರಿಸುತ್ತಾನೆ. ಈ ಜಗತ್ತು ಅವನ ಆಟ (ಲೀಲೆ) ಯಾಗಿದೆ. ಉದ್ಧವನು ಅನುರಾಗತುಂಬಿದ ಚಿತ್ತದಿಂದ ಹೀಗೆ ಪ್ರಶ್ನಿಸಿದಾಗ ಅವನು ಮಂದ-ಮಂದವಾಗಿ ಮುಗುಳ್ನಕ್ಕು ಬಹು ಪ್ರೇಮದಿಂದ ಹೇಳಲು ಪ್ರಾರಂಭಿಸಿದನು –॥ ೭ ॥

**ಶ್ರೀಭಗವಂತನು ಹೇಳಿದನು** – ಪ್ರಿಯ ಉದ್ಧವನೇ! ನಿನ್ನ ಅನುರಾಗತುಂಬಿದ ವಾಣಿಯಿಂದ ನನಗೆ ತುಂಬಾ ಆನಂದ ವಾಯಿತು. ನಾನು ನಿನಗೆ ನನ್ನ ಮಂಗಲಮಯ ಭಾಗವತಧರ್ಮ ಗಳನ್ನು ಅರುಹುವೆನು. ಇವನ್ನು ಶ್ರದ್ಧೆಯಿಂದ ಆಚರಿಸಿದ ಮನುಷ್ಯನು ಸಂಸಾರರೂಪೀ ದುರ್ಜಯ ಮೃತ್ಯುವನ್ನು ಆಯಾಸ ವಿಲ್ಲದೆ ಗೆಲ್ಲಬಲ್ಲನು. ॥ ೮ ॥ ಉದ್ಧವನೇ! ನನ್ನ ಭಕ್ತನು ತನ್ನ ಎಲ್ಲ ಕರ್ಮಗಳನ್ನು ನನಗಾಗಿಯೇ ಮಾಡಬೇಕು. ಅವನ್ನು ಮಾಡುತ್ತಿರು ವಾಗ ನನ್ನ ಸ್ಮರಣೆಯ ಅಭ್ಯಾಸವನ್ನು ಕ್ರಮವಾಗಿ ಬೆಳೆಸಬೇಕು. ಕೆಲವೇ ದಿನಗಳಲ್ಲಿ ಅವನ ಮನಸ್ಸು-ಚಿತ್ತಗಳು ನನ್ನಲ್ಲಿ ಸಮರ್ಪಿತ ವಾಗುತ್ತವೆ. ಅವನ ಮನ ಆತ್ಮಗಳು ನನ್ನ ಧರ್ಮದಲ್ಲೇ ರಮಿಸಿ ಹೋಗುವವು. ॥ ೯ ॥ ನನ್ನ ಸಾಧುಭಕ್ತರು ವಾಸಿಸಿದ ಸ್ಥಾನಗಳಲ್ಲಿ ವಾಸಮಾಡಬೇಕು. ನನ್ನ ಅನನ್ಯ ಭಕ್ತರಾದ ದೇವತೆಗಳು, ಅಸುರರು, ಮನುಷ್ಯರು ಆಚರಿಸಿದ ಆಚರಣೆಗಳನ್ನು ಅನುಸರಿಸ ಬೇಕು. ॥ ೧೦ ॥ ಪರ್ವದಿನಗಳಲ್ಲಿ (ರಾಮನವಮಿ, ಕೃಷ್ಣಾಷ್ಟಮಿ) ಎಲ್ಲರೊಂದಿಗೆ ಸೇರಿ ಅಥವಾ ಒಂಟಿಯಾಗಿ ಮಹಾರಾಜೋಚಿತ ವೈಭವದಿಂದ ನೃತ್ಯ, ಗಾಯನ, ವಾದ್ಯ ಮುಂತಾದವುಗಳಿಂದ ನನ್ನ ಉತ್ಸವಗಳನ್ನು ನಡೆಸಬೇಕು. ॥ ೧೧ ॥ ಶುದ್ಧಾಂತಃಕರಣರಾದವರು ಆಕಾಶದಂತೆ ಒಳ-ಹೊರಗೆ ಪರಿಪೂರ್ಣ ಮತ್ತು ನಿರಾವರಣ ಪರಮಾತ್ಮನಾದ ನನ್ನನ್ನೇ ಸಮಸ್ತ ಪ್ರಾಣಿಗಳಲ್ಲಿ ಹಾಗೂ ತನ್ನ ಹೃದಯದಲ್ಲಿ ಸ್ಥಿತನಾಗಿದ್ದಾನೆ ಎಂದು ನೋಡಬೇಕು. ॥ ೧೨ ॥ ನಿರ್ಮಲ ಬುದ್ಧಿಯುಳ್ಳ ಉದ್ಧವನೇ! ಯಾವ ಸಾಧಕನು ಕೇವಲ ಈ ಜ್ಞಾನದೃಷ್ಟಿಯನ್ನು ಆಶ್ರಯಿಸಿ ಸಮಸ್ತ ಪ್ರಾಣಿ-ಪದಾರ್ಥ ಗಳಲ್ಲಿ ನನ್ನನ್ನು ದರ್ಶಿಸುತ್ತಾನೋ, ಅವನ್ನು ನನ್ನದೇ ಸ್ವರೂಪವೆಂದು ತಿಳಿದು ಅವುಗಳನ್ನು ಸತ್ಕರಿಸುತ್ತಾನೋ, ಬ್ರಾಹ್ಮಣ ಮತ್ತು ಚಾಂಡಾಲನಲ್ಲಿ, ಕಳ್ಳ ಹಾಗೂ ಬ್ರಾಹ್ಮಣ-ಭಕ್ತರಲ್ಲಿ, ಸೂರ್ಯ ಮತ್ತು ಬೆಂಕಿಯ ಕಿಡಿಯಲ್ಲಿ, ಕೃಪಾಳು ಹಾಗೂ ಕ್ರೂರನಲ್ಲಿ ಸರ್ವತ್ರ ಸಮಾನದೃಷ್ಟಿಯನ್ನು ಇರಿಸುತ್ತಾನೋ, ಅವನೇ ನಿಜವಾದ ಜ್ಞಾನಿ ಎಂದು ತಿಳಿಯಬೇಕು. ॥ ೧೩-೧೪ ॥ ಹೀಗೆ ನಿರಂತರ ಎಲ್ಲ ನರ-ನಾರಿಯರಲ್ಲಿ ನನ್ನ ಭಾವನೆಯನ್ನೇ ಇರಿಸಿದಾಗ ಸ್ವಲ್ಪ ದಿನಗಳಲ್ಲೇ ಸಾಧಕನ ಚಿತ್ತದಿಂದ ಸ್ಪರ್ಧೆ, ಈರ್ಷೆ, ತಿರಸ್ಕಾರ, ಅಹಂಕಾರ ಮುಂತಾದ ದೋಷಗಳು ದೂರವಾಗುತ್ತವೆ. ॥ ೧೫ ॥ ತನ್ನ ಜನರೇ ಅಪಹಾಸ್ಯಮಾಡಿದರೂ ಅದನ್ನು ಪರಿಗಣಿಸಬಾರದು. ಲೋಕ-ಲಜ್ಜೆಯನ್ನು ಬಿಟ್ಟು, ನಾಯಿ, ಚಾಂಡಾಲ, ಹಸು, ಕತ್ತೆ ಹಾಗೂ ತನ್ನಲ್ಲಿಯೂ ಕೂಡ ದೈಹಿಕದೃಷ್ಟಿಯನ್ನು ತೊರೆದು ಎಲ್ಲದರಲ್ಲಿ ಓರ್ವ ಪರಮಾತ್ಮನೇ ವಿರಾಜಮಾನನಾಗಿದ್ದಾನೆ ಎಂಬ ಭಾವನೆಯಿಂದ ಎಲ್ಲರಿಗೆ ಸಾಷ್ಟಾಂಗ ನಮಸ್ಕಾರ ಮಾಡ ಬೇಕು. ॥ ೧೬ ॥ ಸಮಸ್ತ ಪ್ರಾಣಿಗಳಲ್ಲಿ ನನ್ನ ಭಾವನೆ-

ಯಾವತ್ಸರ್ವೇಷು ಭೂತೇಷು ಮದ್ಭಾವೋ ನೋಪಜಾಯತೇ ।
ತಾವದೇವಮುಪಾಸೀತ ವಾಙ್ಮನಃಕಾಯವೃತ್ತಿಭಿಃ ॥ ೧೭ ॥

ಸರ್ವಂ ಬ್ರಹ್ಮಾತ್ಮಕಂ ತಸ್ಯ ವಿದ್ಯಯಾಽಽತ್ಮಮನೀಷಯಾ ।
ಪರಿಪಶ್ಯನ್ನುಪರಮೇತ್ಸರ್ವತೋ ಮುಕ್ತಸಂಶಯಃ ॥ ೧೮ ॥

ಅಯಂ ಹಿ ಸರ್ವಕಲ್ಪಾನಾಂ ಸಧ್ರೀಚೀನೋ ಮತೋ ಮಮ ।
ಮದ್ಭಾವಃ ಸರ್ವಭೂತೇಷು ಮನೋವಾಕ್ಕಾಯವೃತ್ತಿಭಿಃ ॥ ೧೯ ॥

ನ ಹ್ಯಂಗೋಪಕ್ರಮೇ ಧ್ವಂಸೋ ಮದ್ಧರ್ಮಸ್ಯೋದ್ಧವಾಣ್ವಪಿ ।
ಮಯಾ ವ್ಯವಸಿತಃ ಸಮ್ಯಙ್ನಿರ್ಗುಣತ್ವಾದನಾಶಿಷಃ ॥ ೨೦ ॥

ಯೋ ಯೋ ಮಯಿ ಪರೇ ಧರ್ಮಃ ಕಲ್ಪ್ಯತೇ ನಿಷ್ಫಲಾಯ ಚೇತ್ ।
ತದಾಯಾಸೋ ನಿರರ್ಥಃ ಸ್ಯಾದ್ ಭಯಾದೇರಿವ ಸತ್ತಮ ॥ ೨೧ ॥

ಏಷಾ ಬುದ್ಧಿಮತಾಂ ಬುದ್ಧಿರ್ಮನೀಷಾ ಚ ಮನೀಷಿಣಾಮ್ ।
ಯತ್ಸತ್ಯಮನೃತೇನೇಹ ಮರ್ತ್ಯೇನಾಪ್ನೋತಿ ಮಾಮೃತಮ್ ॥ ೨೨ ॥

ಏಷ ತೇಽಭಿಹಿತಃ ಕೃತ್ಸ್ನೋ ಬ್ರಹ್ಮವಾದಸ್ಯ ಸಂಗ್ರಹಃ ।
ಸಮಾಸವ್ಯಾಸವಿಧಿನಾ ದೇವಾನಾಮಪಿ ದುರ್ಗಮಃ ॥ ೨೩ ॥

ಅಭೀಕ್ಷ್ಣಶಸ್ತೇ ಗದಿತಂ ಜ್ಞಾನಂ ವಿಸ್ಪಷ್ಟಯುಕ್ತಿಮತ್ ।
ಏತದ್ವಿಜ್ಞಾಯ ಮುಚ್ಯೇತ ಪುರುಷೋ ನಷ್ಟಸಂಶಯಃ ॥ ೨೪ ॥

ಸುವಿವಿಕ್ತಂ ತವ ಪ್ರಶ್ನಂ ಮಯೈತದಪಿ ಧಾರಯೇತ್ ।
ಸನಾತನಂ ಬ್ರಹ್ಮಗುಹ್ಯಂ ಪರಂ ಬ್ರಹ್ಮಾಧಿಗಚ್ಛತಿ ॥ ೨೫ ॥

ಯ ಏತನ್ಮಮ ಭಕ್ತೇಷು ಸಂಪ್ರದದ್ಯಾತ್ಸುಪುಷ್ಕಲಮ್ ।
ತಸ್ಯಾಹಂ ಬ್ರಹ್ಮದಾಯಸ್ಯ ದದಾಮ್ಯಾತ್ಮಾನಮಾತ್ಮನಾ ॥ ೨೬ ॥

ಯ ಏತತ್ಸಮಧೀಯೀತ ಪವಿತ್ರಂ ಪರಮಂ ಶುಚಿ ।
ಸ ಪೂಯೇತಾಹರಹರ್ಮಾಂ ಜ್ಞಾನದೀಪೇನ ದರ್ಶಯನ್ ॥ ೨೭ ॥

ಭಗವದ್ಭಾವನೆ ಉಂಟಾಗುವ ತನಕ ಈ ಪ್ರಕಾರದಿಂದ ಮನಸ್ಸು, ವಾಣೀ, ಶರೀರದ ಎಲ್ಲ ಸಂಕಲ್ಪ ಮತ್ತು ಕರ್ಮಗಳ ಮೂಲಕ ನನ್ನ ಉಪಾಸನೆಮಾಡುತ್ತಾ ಇರಬೇಕು. ॥ ೧೭ ॥ ಉದ್ಧವನೇ! ಈ ಪ್ರಕಾರ ಸರ್ವತ್ರ ಆತ್ಮಬುದ್ಧಿ-ಬ್ರಹ್ಮಬುದ್ಧಿಯ ಅಭ್ಯಾಸ ಮಾಡಿದಾಗ ಕೆಲವೇ ದಿನಗಳಲ್ಲಿ ಅವನಿಗೆ ಜ್ಞಾನ ವುಂಟಾಗಿ ಎಲ್ಲವೂ ಬ್ರಹ್ಮಸ್ವರೂಪವಾಗಿ ಕಂಡುಬರಲು ತೊಡಗುತ್ತದೆ. ಇಂತಹ ದೃಷ್ಟಿ ಉಂಟಾದಮೇಲೆ ಎಲ್ಲ ಸಂಶಯಗಳು ತಾನಾಗಿಯೇ ನಿವೃತ್ತವಾಗುತ್ತವೆ. ಹೀಗೆ ಅವನು ನನ್ನ ಸಾಕ್ಷಾತ್ಕಾರಪಡೆದು ಪ್ರಪಂಚದಿಂದ ಉಪರಾಮನಾಗುತ್ತಾನೆ. ॥ ೧೮ ॥ ನನ್ನ ಪ್ರಾಪ್ತಿಯ ಸಾಧನೆಗಳಲ್ಲಿ ಸಮಸ್ತ ಪ್ರಾಣಿ-ಪದಾರ್ಥಗಳಲ್ಲಿ ಮನ - ವಾಣಿ - ಶರೀರದ ಸಮಸ್ತ ವೃತ್ತಿಗಳಿಂದ ನನ್ನನ್ನೇ ಭಾವಿಸುವುದೇ ಎಲ್ಲಕ್ಕಿಂತ ಶ್ರೇಷ್ಠ ಸಾಧನೆಯಾಗಿದೆ. ॥ ೧೯ ॥ ಉದ್ಧವನೇ! ಇದೇ ನನ್ನ ಭಾಗವತಧರ್ಮವಾಗಿದೆ. ಇದನ್ನು ಒಮ್ಮೆ ಪ್ರಾರಂಭಿಸಿದ ಬಳಿಕ ಮತ್ತೆ ಯಾವುದೇ ವಿಘ್ನಬಾಧೆಗಳಿಂದ ಇದರಲ್ಲಿ ಕಿಂಚಿತ್ತಾದರೂ ಅಂತರ ಬೀಳುವುದಿಲ್ಲ. ಏಕೆಂದರೆ ಈ ಧರ್ಮವು ನಿಷ್ಕಾಮವಾಗಿದೆ ಮತ್ತು ಇದು ನಿರ್ಗುಣವಾದ್ದರಿಂದ ಸರ್ವೋತ್ತಮವೆಂದು ಸ್ವತಃ ನಾನೇ ನಿಶ್ಚಯಿಸಿರುವೆನು. ॥ ೨೦ ॥ ಈ ಧರ್ಮದ ಸಾಧಕನು ಭಯ- ಶೋಕಾದಿ ಅವಸ್ಥೆಗಳಲ್ಲಿ ಆಗುವ ಭಾವನೆಯನ್ನು ಮತ್ತು ಅಳುವುದು, ಬಡಬಡಿಸುವುದು, ಓಡುವುದು ಮುಂತಾದ ನಿರರ್ಥಕ ಕರ್ಮಗಳನ್ನೂ, ನಿಷ್ಕಾಮ ಭಾವದಿಂದ ನನಗೆ ಅರ್ಪಿಸಿದರೆ, ಅವುಗಳು ಕೂಡ ನನಗೆ ಅರ್ಪಿಸಿದ ಕಾರಣ ಧರ್ಮಗಳಾಗುವಷ್ಟು ಈ ಭಾಗವತ ಧರ್ಮವು ಸರಳ ಸಾಧನೆಯಾಗಿದೆ. ॥ ೨೧ ॥ ವಿನಾಶಿಯೂ, ಅಸತ್ಯವೂ ಆದ ಈ ಶರೀರದ ಮೂಲಕವೇ ಅಮೃತಸ್ವರೂಪನೂ, ಸತ್ಯಸ್ವರೂಪನೂ ಆದ ಪರಮಾತ್ಮನಾದ ನನ್ನನ್ನು ಪಡೆದುಕೊಳ್ಳುವುದೇ ಬುದ್ಧಿವಂತರಲ್ಲಿರುವ ವಿವೇಕ ಮತ್ತು ಆತ್ಮಜ್ಞಾನಿಗಳ ಜ್ಞಾನವಾಗಿದೆ. ॥ ೨೨ ॥

ಉದ್ಧವನೇ! ಸಮಸ್ತ ಬ್ರಹ್ಮವಿದ್ಯೆಯ ಈ ರಹಸ್ಯವನ್ನು ನಾನು ನಿನಗೆ ಸಂಕ್ಷೇಪವಾಗಿ ಮತ್ತು ವಿಸ್ತಾರವಾಗಿ ತಿಳಿಸಿರುವೆನು. ಈ ರಹಸ್ಯವನ್ನು ತಿಳಿಯುವುದು ದೇವತೆಗಳಿಗೂ ಅತ್ಯಂತ ಕಠಿಣವಾಗಿದೆ. ॥ ೨೩ ॥ ನಾನು ಪದೇ-ಪದೇ ವರ್ಣಿಸಿದ ಸುಸ್ಪಷ್ಟ - ಯುಕ್ತಿಯುಕ್ತವಾಗಿ ಜ್ಞಾನದ ಮರ್ಮವನ್ನು ತಿಳಿದುಕೊಳ್ಳುವವನ ಹೃದಯದ ಸಂಶಯಗ್ರಂಥಿಗಳು ಛಿನ್ನ-ಭಿನ್ನವಾಗಿ, ಅವನು ಮುಕ್ತನಾಗುತ್ತಾನೆ. ॥ ೨೪ ॥ ನಾನು ನಿನ್ನ ಪ್ರಶ್ನೆಗೆ ಚೆನ್ನಾಗಿ ಉತ್ತರಿಸಿದೆ. ನಮ್ಮ ಈ ಪ್ರಶ್ನೋತ್ತರವನ್ನು ವಿಚಾರಪೂರ್ವಕ ಧರಿಸಿಕೊಳ್ಳುವವನು ವೇದಗಳ ಪರಮರಹಸ್ಯವಾದ ಸನಾತನ ಪರಬ್ರಹ್ಮವನ್ನು ಪಡೆದುಕೊಳ್ಳುತ್ತಾನೆ. ॥ ೨೫ ॥ ನನ್ನ ಭಕ್ತರಿಗೆ ಇದನ್ನು ಚೆನ್ನಾಗಿ ಸ್ಪಷ್ಟಪಡಿಸುವವನಿಗೆ, ಆ ಜ್ಞಾನದಾತೃವಿಗೆ ನಾನು ಪ್ರಸನ್ನ ಮನಸ್ಸಿನಿಂದ ನನ್ನ ಸ್ವರೂಪವನ್ನೇ ಕೊಟ್ಟುಬಿಡುತ್ತೇನೆ. ಅವನನ್ನು ಆತ್ಮಜ್ಞಾನಿಯಾಗಿಸುತ್ತೇನೆ. ॥ ೨೬ ॥ ಎಲೈ ಉದ್ಧವನೇ! ನಿನ್ನ ಮತ್ತು ನನ್ನ ಈ ಸಂವಾದವು ಸ್ವಯಂ ಪರಮ ಪವಿತ್ರವೇ ಆಗಿದೆ, ಬೇರೆಯವರನ್ನೂ ಪವಿತ್ರವಾಗಿಸುವಂತಹುದು. ಪ್ರತಿದಿನವು ಇದನ್ನು ಪಾರಾಯಣ ಮಾಡುವವನು, ಬೇರೆಯವರಿಗೆ ತಿಳಿಸುವವನು ಈ ಜ್ಞಾನದೀಪದ ಮೂಲಕ ಬೇರೆಯವರಿಗೆ ನನ್ನ ದರ್ಶನ ಮಾಡಿಸಿದ್ದರಿಂದ ಪವಿತ್ರನಾಗಿ ಹೋಗುವನು. ॥ ೨೭ ॥

ಯ ಏತಚ್ಛ್ರದ್ಧಯಾ ನಿತ್ಯಮವ್ಯಗ್ರಃ ಶೃಣುಯಾನ್ನರಃ ।
ಮಯಿ ಭಕ್ತಿಂ ಪರಾಂ ಕುರ್ವನ್ಕರ್ಮಭಿರ್ನ ಸ ಬಧ್ಯತೇ
॥ ೨೮ ॥

ಅಪ್ಯುದ್ಧವ ತ್ವಯಾ ಬ್ರಹ್ಮ ಸಖೇ ಸಮವಧಾರಿತಮ್ ।
ಅಪಿ ತೇ ವಿಗತೋ ಮೋಹಃ ಶೋಕಶ್ಚಾಸೌ ಮನೋಭವಃ
॥ ೨೯ ॥

ನೈತತ್ತ್ವಯಾ ದಾಂಭಿಕಾಯ ನಾಸ್ತಿಕಾಯ ಶಠಾಯ ಚ ।
ಅಶುಶ್ರೂಷೋರಭಕ್ತಾಯ ದುರ್ವಿನೀತಾಯ ದೀಯತಾಮ್
॥ ೩೦ ॥

ಏತೈರ್ದೋಷೈರ್ವಿಹೀನಾಯ ಬ್ರಹ್ಮಣ್ಯಾಯ ಪ್ರಿಯಾಯ ಚ ।
ಸಾಧವೇ ಶುಚಯೇ ಬ್ರೂಯಾದ್ ಭಕ್ತಿಃ ಸ್ಯಾಚ್ಛೂದ್ರಯೋಷಿತಾಮ್
॥ ೩೧ ॥

ನೈತದ್ವಿಜ್ಞಾಯ ಜಿಜ್ಞಾಸೋರ್ಜ್ಞಾತವ್ಯಮವಶಿಷ್ಯತೇ ।
ಪೀತ್ವಾ ಪೀಯೂಷಮಮೃತಂ ಪಾತವ್ಯಂ ನಾವಶಿಷ್ಯತೇ
॥ ೩೨ ॥

ಜ್ಞಾನೇ ಕರ್ಮಣಿ ಯೋಗೇ ಚ ವಾರ್ತಾಯಾಂ ದಂಡಧಾರಣೇ ।
ಯಾವಾನರ್ಥೋ ನೃಣಾಂ ತಾತ ತಾವಾಂಸ್ತೇಽಹಂ ಚತುರ್ವಿಧಃ
॥ ೩೩ ॥

ಮರ್ತ್ಯೋ ಯದಾ ತ್ಯಕ್ತಸಮಸ್ತಕರ್ಮಾ
ನಿವೇದಿತಾತ್ಮಾ ವಿಚಿಕೀರ್ಷಿತೋ ಮೇ ।
ತದಾಮೃತತ್ವಂ ಪ್ರತಿಪದ್ಯಮಾನೋ
ಮಯಾಽಽತ್ಮಭೂಯಾಯ ಚ ಕಲ್ಪತೇ ವೈ ॥ ೩೪ ॥

ಶ್ರೀಶುಕ ಉವಾಚ

ಸ ಏವಮಾದರ್ಶಿತಯೋಗಮಾರ್ಗ
ಸ್ತದೋತ್ತಮಶ್ಲೋಕವಚೋ ನಿಶಮ್ಯ ।
ಬದ್ಧಾಂಜಲಿಃ ಪ್ರೀತ್ಯುಪರುದ್ಧಕಂಠೋ
ನ ಕಿಂಚಿದೂಚೇಽಶ್ರುಪರಿಪ್ಲುತಾಕ್ಷಃ ॥ ೩೫ ॥

ವಿಷ್ಟಭ್ಯ ಚಿತ್ತಂ ಪ್ರಣಯಾವಘೂರ್ಣಂ
ಧೈರ್ಯೇಣ ರಾಜನ್ಬಹು ಮನ್ಯಮಾನಃ ।
ಕೃತಾಂಜಲಿಃ ಪ್ರಾಹ ಯದುಪ್ರವೀರಂ
ಶೀರ್ಷ್ಣಾ ಸ್ಪೃಶಂಸ್ತಚ್ಚರಣಾರವಿಂದಮ್ ॥ ೩೬ ॥

ಉದ್ಧವ ಉವಾಚ

ವಿದ್ರಾವಿತೋ ಮೋಹಮಹಾಂಧಕಾರೋ
ಯ ಆಶ್ರಿತೋ ಮೇ ತವ ಸಂನಿಧಾನಾತ್ ।
ವಿಭಾವಸೋಃ ಕಿಂ ನು ಸಮೀಪಗಸ್ಯ
ಶೀತಂ ತಮೋ ಭೀಃ ಪ್ರಭವಂತ್ಯಜಾದ್ಯ ॥ ೩೭ ॥

ಇದನ್ನು ಏಕಾಗ್ರಚಿತ್ತದಿಂದ, ಶ್ರದ್ಧಾಭಕ್ತಿಯಿಂದ ಕೇಳುವವನಿಗೆ ನನ್ನ ಪರಾಭಕ್ತಿಯು ಪ್ರಾಪ್ತವಾಗಿ, ಅವನು ಕರ್ಮಬಂಧನದಿಂದ ಮುಕ್ತನಾಗುವನು. ॥ ೨೮ ॥ ಪ್ರಿಯಮಿತ್ರಾ! ನೀನು ಚೆನ್ನಾಗಿ ಬ್ರಹ್ಮಸ್ವರೂಪವನ್ನು ತಿಳಿದುಕೊಂಡೆಯಲ್ಲ? ನಿನ್ನ ಚಿತ್ತದ ಮೋಹ ಹಾಗೂ ಶೋಕವಾದರೋ ದೂರವಾಯಿತಲ್ಲ? ॥ ೨೯ ॥ ನೀನು ಇದನ್ನು ದಾಂಭಿಕ, ನಾಸ್ತಿಕ, ಶ್ರದ್ಧೆಯಿಲ್ಲದ ಭಕ್ತಿಹೀನ, ಉದ್ಧಟ ಇಂತಹ ಜನರಿಗೆ ಎಂದಿಗೂ ಹೇಳಬಾರದು. ॥ ೩೦ ॥ ಈ ದೋಷ ಗಳಿಂದ ರಹಿತನೂ, ಬ್ರಾಹ್ಮಣಭಕ್ತನೂ, ಪ್ರೇಮಿಯೂ, ಸಾಧು ಸ್ವಭಾವನೂ, ಶುದ್ಧ ಚರಿತ್ರನೂ ಆದವರಿಗೆ ಈ ಪ್ರಸಂಗವನ್ನು ಹೇಳಬೇಕು. ಶೂದ್ರರು, ಸ್ತ್ರೀಯರು, ನನ್ನಲ್ಲಿ ಭಕ್ತಿಯನ್ನಿಡುವ ವರಾದರೆ ಅವರಿಗೂ ಇದನ್ನು ಉಪದೇಶಿಸಬೇಕು. ॥ ೩೧ ॥ ದಿವ್ಯ ಅಮೃತಪಾನ ಮಾಡಿದಮೇಲೆ ಏನನ್ನೂ ಕುಡಿಯುವುದೂ ಬಾಕಿ ಇರದಂತೆ, ಇದನ್ನು ಅರಿತುಕೊಂಡ ಮೇಲೆ ಜಿಜ್ಞಾಸುವಿಗೆ ಬೇರೆ ಏನನ್ನೂ ತಿಳಿಯುವುದು ಬಾಕಿ ಇರುವುದಿಲ್ಲ. ॥ ೩೨ ॥ ಪ್ರಿಯ ಉದ್ಧವನೇ! ಮನುಷ್ಯರಿಗೆ ಜ್ಞಾನ, ಕರ್ಮ, ಯೋಗ, ವಾಣಿಜ್ಯ, ದಂಡನೀತಿ ಇವುಗಳಿಂದ ಕ್ರಮವಾಗಿ ಮೋಕ್ಷ, ಧರ್ಮ, ಕಾಮ, ಅರ್ಥರೂಪೀ ಫಲಗಳು ದೊರೆಯುತ್ತವೆ. ಆದರೆ ನಿನ್ನಂತಹ ಅನನ್ಯ ಭಕ್ತರಿಗೆ ಆ ನಾಲ್ಕು ವಿಧದ ಫಲವೂ ನಾನೇ ಆಗಿದ್ದೇನೆ. ॥ ೩೩ ॥ ಮನುಷ್ಯನು ಎಲ್ಲ ಕರ್ಮಗಳನ್ನು ನನ್ನಲ್ಲಿ ಅರ್ಪಿಸಿ, ನನ್ನಲ್ಲಿ ಅನನ್ಯ ಶರಣಾದಾಗ, ಎಲ್ಲ ಕ್ರಿಯಾಕಲಾಪಗಳನ್ನು ನನಗಾಗಿಯೇ ಮಾಡಿದಾಗ, ಅವನ ಎಲ್ಲ ವ್ಯವಹಾರಗಳು ನನ್ನೊಂದಿಗೆ ಆಗುತ್ತವೆ. ಅವನು ನನಗೆ ತುಂಬಾ ಪ್ರಿಯನಾಗುತ್ತಾನೆ. ಮತ್ತೆ ನಾನೂ ಕೂಡ ಅವನಿಗಾಗಿ ಏನೇನು ಮಾಡಲಿ ಎಂದು ಯೋಚಿಸುತ್ತಾ ಇರುತ್ತೇನೆ. ಅವನಿಗೆ ಪ್ರಿಯವಾದುದನ್ನು ಮಾಡಲು ನನಗೆ ಪ್ರಬಲ ಉತ್ಕಂಠತೆ ಇರುತ್ತದೆ. ಇಂತಹ ನನ್ನ ಭಕ್ತನು ಅಮೃತತ್ತ್ವವನ್ನು ಪಡೆದುಕೊಂಡು, ನನ್ನ ಸ್ವರೂಪವೇ ಆಗುತ್ತಾನೆ. ॥ ೩೪ ॥

**ಶ್ರೀಶುಕಯೋಗಿಗಳು ಹೇಳುತ್ತಾರೆ –** ಪರೀಕ್ಷಿತನೇ! ಈಗ ಉದ್ಧವನು ಯೋಗಮಾರ್ಗದ ಪೂರ್ಣ ಉಪದೇಶವನ್ನು ಪಡೆದು ಕೊಂಡನು. ಭಗವಾನ್ ಶ್ರೀಕೃಷ್ಣನ ಮಾತನ್ನು ಕೇಳಿ ಅವನ ಕಣ್ಣು ಗಳಲ್ಲಿ ನೀರು ತುಂಬಿಬಂತು. ಪ್ರೇಮೋದ್ರೇಕದಿಂದ ಕಂಠ ಉಮ್ಮಳಿ ಸಿತು. ವಾಣಿಯಿಂದ ಏನನ್ನೂ ಮಾತನಾಡಲಾರದೆ ಮೌನವಾಗಿ ಕೈ ಜೋಡಿಸಿಕೊಂಡು ನಿಂತುಕೊಂಡನು. ॥ ೩೫ ॥ ಅವನ ಚಿತ್ತವು ಪ್ರೇಮಪರವಶವಾಗಿ ವಿಹ್ವಲವಾಗಿತ್ತು. ಅವನು ಧೈರ್ಯದಿಂದ ತಡೆದುಕೊಂಡು, ತನ್ನನ್ನು ಅತ್ಯಂತ ಭಾಗ್ಯಶಾಲಿಯೆಂದು ಅನುಭವಿ ಸುತ್ತಾ, ಯದುವಂಶ ಶಿರೋಮಣಿ ಭಗವಾನ್ ಶ್ರೀಕೃಷ್ಣನ ಚರಣ ಗಳಲ್ಲಿ ಶಿರವನ್ನಿಟ್ಟು ವಂದಿಸಿಕೊಂಡನು ಹಾಗೂ ಕೈಜೋಡಿಸಿ ಅವನಲ್ಲಿ ಹೀಗೆ ಪ್ರಾರ್ಥಿಸಿದನು. ॥ ೩೬ ॥

**ಉದ್ಧವನು ಹೇಳಿದನು –** ಬ್ರಹ್ಮನಿಗೂ ಆದಿಯಾದವನೇ! ನಾನು ಆಶ್ರಯಿಸಿದ್ದ ಮಹಾನ್ ಮೋಹರೂಪೀ ಅಂಧಕಾರವು ನಿನ್ನ ಜ್ಞಾನದ ಪ್ರಕಾಶದಿಂದ ದೂರವಾಯಿತು. ನಿನ್ನ ಬಳಿಗೆ ಬರುತ್ತಲೇ ಅದು ಎಂದೆಂದಿಗೂ ಓಡಿಹೋಯಿತು. ಬೆಂಕಿಯಬಳಿ ಸಾರಿದವ ನಿಗೆ ಚಳಿ, ಅಂಧಕಾರ ಮತ್ತು ಅದರಿಂದ ಉಂಟಾಗುವ ಭಯವು ನಿಲ್ಲಬಲ್ಲುದೇನು ? ॥ ೩೭ ॥

ಪ್ರತ್ಯರ್ಪಿತೋ ಮೇ ಭವತಾನುಕಂಪಿನಾ
ಭೃತ್ಯಾಯ ವಿಜ್ಞಾನಮಯಃ ಪ್ರದೀಪಃ ।
ಹಿತ್ವಾ ಕೃತಜ್ಞಸ್ತವ ಪಾದಮೂಲಂ
ಕೋಽನ್ಯತ್ಸಮೀಯಾಚ್ಛರಣಂ ತ್ವದೀಯಮ್ ॥ ೩೮ ॥

ವೃಕ್ಣಶ್ಚ ಮೇ ಸುದೃಢಃ ಸ್ನೇಹಪಾಶೋ
ದಾಶಾರ್ಹವೃಷ್ಣ್ಯಂಧಕಸಾತ್ವತೇಷು ।
ಪ್ರಸಾರಿತಃ ಸೃಷ್ಟಿವಿವೃದ್ಧಯೇ ತ್ವಯಾ
ಸ್ವಮಾಯಯಾ ಹ್ಯಾತ್ಮಸುಬೋಧಹೇತಿನಾ ॥ ೩೯ ॥

ನಮೋಽಸ್ತು ತೇ ಮಹಾಯೋಗಿನ್ ಪ್ರಪನ್ನಮನುಶಾಧಿ ಮಾಮ್ ।
ಯಥಾ ತ್ವಚ್ಚರಣಾಂಭೋಜೇ ರತಿಃ ಸ್ಯಾದನಪಾಯಿನೀ ॥ ೪೦ ॥

ಶ್ರೀಭಗವಾನುವಾಚ

ಗಚ್ಛೋದ್ಧವ ಮಯಾಽಽದಿಷ್ಟೋ
ಬದರ್ಯಾಖ್ಯಂ ಮಮಾಶ್ರಮಮ್ ।
ತತ್ರ ಮತ್ಪಾದತೀರ್ಥೋದೇ
ಸ್ನಾನೋಪಸ್ಪರ್ಶನೈಃ ಶುಚಿಃ ॥ ೪೧ ॥

ಈಕ್ಷಯಾಲಕನಂದಾಯಾ ವಿಧೂತಾಶೇಷಕಲ್ಮಷಃ ।
ವಸಾನೋ ವಲ್ಕಲಾನ್ಯಂಗ ವನ್ಯಭುಕ್ ಸುಖನಿಃಸ್ಪೃಹಃ ॥ ೪೨ ॥

ತಿತಿಕ್ಷುರ್ದ್ವಂದ್ವಮಾತ್ರಾಣಾಂ ಸುಶೀಲಃ ಸಂಯತೇಂದ್ರಿಯಃ ।
ಶಾಂತಃ ಸಮಾಹಿತಧಿಯಾ ಜ್ಞಾನವಿಜ್ಞಾನಸಂಯುತಃ ॥ ೪೩ ॥

ಮತ್ತೋಽನುಶಿಕ್ಷಿತಂ ಯತ್ತೇ ವಿವಿಕ್ತಮನುಭಾವಯನ್ ।
ಮಯ್ಯಾವೇಶಿತವಾಕ್ಚಿತ್ತೋ ಮದ್ಧರ್ಮನಿರತೋ ಭವ ।
ಅತಿವ್ರಜ್ಯ ಗತೀಸ್ತಿಸ್ರೋ ಮಾಮೇಷ್ಯಸಿ ತತಃ ಪರಮ್ ॥ ೪೪ ॥

ಶ್ರೀಶುಕ ಉವಾಚ

ಸ ಏವಮುಕ್ತೋ ಹರಿಮೇಧಸೋದ್ಧವಃ
ಪ್ರದಕ್ಷಿಣಂ ತಂ ಪರಿಸೃತ್ಯ ಪಾದಯೋಃ ।
ಶಿರೋ ನಿಧಾಯಾಶ್ರುಕಲಾಭಿರಾರ್ದ್ರಧೀ-
ರ್ನ್ಯಷಿಂಚದದ್ವಂದ್ವಪರೋಽಪ್ಯಪಕ್ರಮೇ ॥ ೪೫ ॥

ಭಗವಂತಾ ! ನೀನು ದಯಾರ್ದ್ರನಾಗಿ ಸೇವಕನಾದ ನನಗೆ ವಿಜ್ಞಾನರೂಪೀ ದೀಪದ ಪ್ರಕಾಶವನ್ನು ಪ್ರದಾನಮಾಡಿದೆ. ನೀನು ನನ್ನಮೇಲೆ ಮಹಾನ್ ಅನುಗ್ರಹವನ್ನು ವರ್ಷಿಸಿದೆ. ನಿನ್ನ ಉಪಕಾರಗಳನ್ನು ನಿನ್ನ ಮಹಾನ್‌ಕೃಪೆಯನ್ನು ಅನುಭವಿಸಿದವನು ಮತ್ತೆ ನಿನ್ನ ಈ ಚರಣಕಮಲಗಳನ್ನು ಬಿಟ್ಟು ಬೇರೆಯವರಿಗೆ ಶರಣಾಗುವವನು ಯಾರು ತಾನೇ ಇರುವನು ? ॥ ೩೮ ॥ ನೀನೇ ನಿನ್ನ ಮೋಹರೂಪೀ ಮಾಯೆಯಿಂದ ನನ್ನನ್ನು ಮೊದಲು ತನ್ನ ಸೃಷ್ಟಿಯನ್ನು ವೃದ್ಧಿಗೊಳಿಸಲು ದಾಶಾರ್ಹ, ವೃಷ್ಣಿ, ಅಂಧಕ, ಸಾತ್ವತವಂಶೀ ಯಾದವರೊಂದಿಗೆ ಸುದೃಢವಾದ ಸ್ನೇಹಪಾಶದಿಂದ ಕಟ್ಟಿದ್ದೆ ಇಂದು ನೀನೇ ಆತ್ಮಬೋಧದ ಹರಿತವಾದ ಖಡ್ಗದಿಂದ ನನ್ನ ಆ ಬಂಧನವನ್ನು ಅನಾಯಾಸವಾಗಿ ಕತ್ತರಿಸಿ ಬಿಟ್ಟಿರುವೆ. ॥ ೩೯ ॥ ಮಹಾಯೋಗೇಶ್ವರಾ ! ನಿನಗೆ ನನ್ನ ನಮಸ್ಕಾರಗಳು. ಈಗ ನೀನು ನಿನ್ನ ಚರಣಕಮಲಗಳಲ್ಲಿ ಅನನ್ಯ ಭಕ್ತಿಯು ಉಂಟಾಗುವಂತೆ ಕೃಪೆ ಮಾಡಿ ಶರಣಾಗತನಾದ ನನಗೆ ಆಜ್ಞೆಯನ್ನು ದಯಪಾಲಿಸು. ॥ ೪೦ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು –** ಉದ್ಧವನೇ ! ಈಗ ನೀನು ನನ್ನ ಅಪ್ಪಣೆಯಂತೆ ಬದರಿಕಾಶ್ರಮಕ್ಕೆ ಹೋಗು. ಅದು ನನ್ನದೇ ಆಶ್ರಮವಾಗಿದೆ. ಅಲ್ಲಿ ನನ್ನ ಚರಣಕಮಲಗಳನ್ನು ತೊಳೆದ ಗಂಗಾಜಲವನ್ನು ಸ್ನಾನ-ಪಾನಾದಿಗಳ ಮೂಲಕ ಸೇವಿಸುತ್ತಾ ನೀನು ಪವಿತ್ರನಾಗು. ॥ ೪೧ ॥ ಅಲಕನಂದೆಯ ದರ್ಶನಮಾತ್ರದಿಂದಲೇ ನಿನ್ನ ಪಾಪಗಳೆಲ್ಲ ನಾಶವಾಗುವವು. ಪ್ರಿಯ ಉದ್ಧವನೇ ! ಅಲ್ಲಿ ನೀನು ವಲ್ಕಲವನ್ನುಟ್ಟು, ಕಾಡಿನ ಕಂದ-ಮೂಲ-ಫಲಗಳನ್ನು ತಿನ್ನುತ್ತಾ, ಯಾವುದೇ ಭೋಗದ ಅಪೇಕ್ಷೆಯನ್ನಿಡದೆ ನಿಸ್ಪೃಹ ವೃತ್ತಿಯಿಂದ ನೀನೇ ನಿನ್ನಲ್ಲಿ ಆನಂದವಾಗಿರು. ॥ ೪೨ ॥ ಚಳಿ-ಸೆಕೆ, ಸುಖ-ದುಃಖ, ಏನೆಲ್ಲ ಇದಿರಾಗುತ್ತದೋ ಅದರಲ್ಲಿ ಸಮನಾಗಿದ್ದು ಸಹಿಸು. ಸ್ವಭಾವವು ಸೌಮ್ಯವಾಗಿರಲಿ. ಇಂದ್ರಿಯಗಳು ವಶದಲ್ಲಿರಲಿ. ಚಿತ್ತವು ಶಾಂತವಾಗಿದ್ದು, ಬುದ್ಧಿಸಮಾಹಿತವಾಗಿರಲಿ. ನೀನು ಸ್ವಯಂ ನನ್ನ ಸ್ವರೂಪ ಜ್ಞಾನದಲ್ಲಿ, ಅನುಭವದಲ್ಲಿ ಮುಳುಗಿರು. ॥ ೪೩ ॥ ನಾನು ನಿನಗೆ ಮಾಡಿದ ಉಪದೇಶವನ್ನು ಏಕಾಂತದಲ್ಲಿ ವಿಚಾರಪೂರ್ವಕ ಅನುಭವಿಸುತ್ತಿರು. ನಿನ್ನ ವಾಣಿ ಮತ್ತು ಚಿತ್ತವನ್ನು ನನ್ನಲ್ಲಿಯೇ ತೊಡಗಿಸಿಡಬೇಕು. ನಾನು ಹೇಳಿದ ಭಾಗವತಧರ್ಮದಲ್ಲಿ ಪ್ರೇಮದಿಂದ ನಿರತನಾಗಿರು. ಕೊನೆಗೆ ನೀನು ತ್ರಿಗುಣ ಮತ್ತು ಅವುಗಳ ಸಂಬಂಧವಿರಿಸುವ ಗತಿಗಳನ್ನು ದಾಟಿ, ಅದರಿಂದ ಆಚೆಗಿರುವ ನನ್ನ ಪರಮಾರ್ಥಸ್ವರೂಪದಲ್ಲಿ ಸೇರಿಹೋಗುವೆ. ॥ ೪೪ ॥

**ಶ್ರೀಶುಕಯೋಗಿಗಳು ಹೇಳುತ್ತಾರೆ –** ಪರೀಕ್ಷಿತನೇ ! ಭಗವಾನ್ ಶ್ರೀಕೃಷ್ಣನ ಸ್ವರೂಪದ ಜ್ಞಾನವು ಪ್ರಪಂಚದ ಭೇದ-ಭ್ರಮೆಗಳನ್ನು ಛಿನ್ನ-ಭಿನ್ನವಾಗಿಸುತ್ತದೆ. ಶ್ರೀಕೃಷ್ಣನು ಸ್ವತಃ ಉದ್ಧವನಿಗೆ ಹೀಗೆ ಉಪದೇಶಮಾಡಿದಾಗ, ಅವನು ಭಗವಂತನಿಗೆ ಪ್ರದಕ್ಷಿಣೆಮಾಡಿ, ಅವನ ಚರಣಗಳಲ್ಲಿ ಶಿರವನ್ನಿಟ್ಟನು. ಉದ್ಧವನು ಸಂಯೋಗ-ವಿಯೋಗದಿಂದ ಉಂಟಾಗುವ ಸುಖ-ದುಃಖಗಳ ದ್ವಂದ್ವಗಳಿಂದ ಮೀರಿದ್ದನು. ಏಕೆಂದರೆ, ಅವನು ಭಗವಂತನ

ಸುದುಸ್ತ್ಯಜಸ್ನೇಹವಿಯೋಗಕಾತರೋ
ನ ಶಕ್ನುವಂಸ್ತಂ ಪರಿಹಾತುಮಾತುರಃ ।
ಕೃಚ್ಛ್ರಂ ಯಯೌ ಮೂರ್ಧನಿ ಭರ್ತೃಪಾದುಕೇ
ಬಿಭ್ರನ್ನಮಸ್ಕೃತ್ಯ ಯಯೌ ಪುನಃ ಪುನಃ ॥ ೪೬ ॥

ಚರಣಗಳಲ್ಲಿ ಶರಣಾಗಿದ್ದನು. ಮತ್ತೆ ಅವನು ಅಲ್ಲಿಂದ ಹೊರಡುವಾಗ ಅವನ ಚಿತ್ತವು ಪ್ರೇಮಾವೇಶದಿಂದ ತುಂಬಿ ಹೋಗಿತ್ತು. ಅವನು ಕಣ್ಣುಗಳಿಂದ ಹರಿಯುವ ಪ್ರೇಮಾಶ್ರುಗಳಿಂದ ಭಗವಂತನ ಚರಣಕಮಲಗಳನ್ನು ತೊಳೆದುಬಿಟ್ಟನು. ॥ ೪೫ ॥ ಪರೀಕ್ಷಿತನೇ! ಉದ್ಧವನು ಭಗವಂತನ ಚರಣಕಮಲಗಳನ್ನು ಬಿಟ್ಟು ದೂರ ಹೋಗಲು ಬಯಸುತ್ತಿರಲಿಲ್ಲ, ಆದರೆ ಭಗವಂತನ ಆಜ್ಞೆಯೇ ಹಾಗಿತ್ತು. ಆದ್ದರಿಂದ ಅವನ ವಿಯೋಗದಿಂದ ಕಾತರನಾಗಿ ಬಹು ಕಷ್ಟದಿಂದ ಹೋಗಲೇಬೇಕಾಯಿತು. ಹೊರಡುವಾಗ ಅವನು ಭಗವಂತನ ಚರಣಪಾದುಕೆಗಳನ್ನು ತನ್ನ ಶಿರದಲ್ಲಿ ಹೊತ್ತುಕೊಂಡು, ಪದೇ - ಪದೇ ವಂದಿಸುತ್ತಾ ಅಲ್ಲಿಂದ ಹೊರಟು ಹೋದನು. ॥ ೪೬ ॥

ತತಸ್ತಮಂತರ್ಹೃದಿ ಸಂನಿವೇಶ್ಯ
ಗತೋ ಮಹಾಭಾಗವತೋ ವಿಶಾಲಾಮ್ ।
ಯಥೋಪದಿಷ್ಟಾಂ ಜಗದೇಕಬಂಧುನಾ
ತಪಃ ಸಮಾಸ್ಥಾಯ ಹರೇರಗಾದ್ಗತಿಮ್ ॥ ೪೭ ॥

ಭಗವಂತನ ಪರಮಪ್ರೇಮಿ ಉದ್ಧವನು ಹೃದಯದಲ್ಲಿ ಅವನ ದಿವ್ಯಸ್ವರೂಪವನ್ನು ಧರಿಸಿಕೊಂಡು ಬದರಿಕಾಶ್ರಮವನ್ನು ತಲುಪಿದನು. ಅಲ್ಲಿ ಅವನು ತಪೋಮಯ ಜೀವನವನ್ನು ಕಳೆಯುತ್ತಾ , ಜಗತ್ತಿನ ಏಕಮಾತ್ರ ಹಿತೈಷಿ ಭಗವಾನ್ ಶ್ರೀಕೃಷ್ಣನ ಉಪದೇಶದಂತೆ, ಅವನ ಸ್ವರೂಪಭೂತ ಪರಮಗತಿಯನ್ನು ಪಡೆದುಕೊಂಡನು.॥ ೪೭ ॥

ಯ ಏತದಾನಂದ ಸಮುದ್ರಸಂಭೃತಂ
ಜ್ಞಾನಾಮೃತಂ ಭಾಗವತಾಯ ಭಾಷಿತಮ್ ।
ಕೃಷ್ಣೇನ ಯೋಗೇಶ್ವರಸೇವಿತಾಂಘ್ರಿಣಾ
ಸಚ್ಛ್ರದ್ಧಯಾಽಽಸೇವ್ಯ ಜಗದ್ವಿಮುಚ್ಯತೇ ॥ ೪೮ ॥

ಭಗವಾನ್ ಶಂಕರನೇ ಆದಿ ಯೋಗೇಶ್ವರರೂ ಕೂಡ ಸಚ್ಚಿದಾನಂದಸ್ವರೂಪೀ ಭಗವಾನ್ ಶ್ರೀಕೃಷ್ಣನ ಚರಣಗಳ ಸೇವೆ ಮಾಡುತ್ತಾರೆ. ಅವನು ಸ್ವತಃ ತನ್ನ ಶ್ರೀಮುಖದಿಂದ ಪರಮಪ್ರೇಮಿ ಭಕ್ತ ಉದ್ಧವನಿಗಾಗಿ ಈ ಜ್ಞಾನಾಮೃತವನ್ನು ಉಪದೇಶಿಸಿದನು. ಇದು ಜ್ಞಾನಾಮೃತರೂಪೀ ಮಹಾಸಾಗರದ ಸಾರವಾಗಿದೆ. ಶ್ರದ್ಧೆಯೊಂದಿಗೆ ಇದನ್ನು ಸೇವಿಸುವವನು ಮುಕ್ತನಾಗಿಯೇ ಹೋಗುತ್ತಾನೆ. ಅವನ ಸಂಗದಿಂದ ಇಡೀ ಜಗತ್ತು ಮುಕ್ತವಾಗಿ ಹೋಗುತ್ತದೆ. ॥ ೪೮ ॥ ಪರೀಕ್ಷಿತನೇ! ಭ್ರಮರವು ವಿಭಿನ್ನ ಪುಷ್ಪಗಳಿಂದ ಸಾರವಾದ ಮಧುವನ್ನು ಸಂಗ್ರಹಿಸುವಂತೆ, ಸ್ವಯಂ ವೇದಗಳನ್ನು ಪ್ರಕಾಶಗೊಳಿಸುವ ಭಗವಾನ್ ಶ್ರೀಕೃಷ್ಣನು ಭಕ್ತರನ್ನು ಸಂಸಾರಸಾಗರದಿಂದ ಮುಕ್ತಗೊಳಿಸಲು ಈ ಜ್ಞಾನ-ವಿಜ್ಞಾನದ ಸಾರವನ್ನು ಅಮೃತರೂಪೀ ಸಾಗರದಿಂದ ತೆಗೆದು ತನ್ನ ಸೇವಕರಿಗಾಗಿ ಕೊಟ್ಟನು. ಇಂತಹ ಆ ಭಗವಾನ್ ಶ್ರೀಕೃಷ್ಣನೇ ಪುರುಷೋತ್ತಮನಾಗಿದ್ದಾನೆ, ಶ್ರೇಷ್ಠನಾಗಿದ್ದಾನೆ, ಆದಿನಾರಾಯಣನಾಗಿದ್ದಾನೆ ಹಾಗೂ ಇಡೀ ಜಗತ್ತಿನ ಮೂಲಕಾರಣನಾಗಿದ್ದಾನೆ. ಅವನಿಗೆ ನಾನು ಪದೇ-ಪದೇ ವಂದಿಸುತ್ತೇನೆ. ॥ ೪೯ ॥

ಭವಭಯಮಪಹಂತುಂ ಜ್ಞಾನವಿಜ್ಞಾನಸಾರಂ
ನಿಗಮಕೃದುಪಜಹ್ರೇ ಭೃಂಗವದ್ವೇದಸಾರಮ್ ।
ಅಮೃತಮುದಧಿತಶ್ಚಾಪಾಯಯದ್ ಭೃತ್ಯವರ್ಗಾನ್
ಪುರುಷಮೃಷಭಮಾದ್ಯಂ ಕೃಷ್ಣಸಂಜ್ಞಂ ನತೋಽಸ್ಮಿ ॥ ೪೯ ॥

ಇಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿಯಿತು. ॥ ೨೯ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಏಕಾದಶ ಸ್ಕಂಧೇ ಏಕೋನತ್ರಿಂಶೋಽಧ್ಯಾಯಃ ॥ ೨೯ ॥

# ಮೂವತ್ತನೆಯ ಅಧ್ಯಾಯ

## ಯದುಕುಲದ ಸಂಹಾರ

*ರಾಜೋವಾಚ*

ತತೋ ಮಹಾಭಾಗವತ ಉದ್ಧವೇ ನಿರ್ಗತೇ ವನಮ್ ।
ದ್ವಾರವತ್ಯಾಂ ಕಿಮಕರೋದ್ಭಗವಾನ್ ಭೂತಭಾವನಃ ॥ ೧ ॥

ಪರೀಕ್ಷಿತರಾಜನು ಕೇಳಿದನು – ಪೂಜ್ಯರೇ! ಮಹಾಭಾಗವತ ಉದ್ಧವನು ಬದರಿಕಾಶ್ರಮಕ್ಕೆ ಹೊರಟುಹೋದ ಬಳಿಕ ಸಮಸ್ತ ಪ್ರಾಣಿಗಳ ಆತ್ಮಸ್ವರೂಪೀ ಭಗವಾನ್ ಶ್ರೀಕೃಷ್ಣನು ದ್ವಾರಕೆಯಲ್ಲಿ ಯಾವ-ಯಾವ ಲೀಲೆಗಳನ್ನು ಮಾಡಿದನು ? ॥ ೧ ॥

ಬ್ರಹ್ಮಶಾಪೋಪಸಂಸೃಷ್ಟೇ ಸ್ವಕುಲೇ ಯಾದವರ್ಷಭಃ ।
ಪ್ರೇಯಸೀಂ ಸರ್ವನೇತ್ರಾಣಾಂ ತನುಂ ಸ ಕಥಮತ್ಯಜತ್
॥ ೨ ॥

ಪ್ರತ್ಯಾಕ್ರಷ್ಟುಂ ನಯನಮಬಲಾ ಯತ್ರ ಲಗ್ನಂ ನ ಶೇಕುಃ
ಕರ್ಣಾವಿಷ್ಟಂ ನ ಸರತಿ ತತೋ ಯತ್ಸತಾಮಾತ್ಮಲಗ್ನಮ್ ।
ಯಚ್ಛ್ರೀರ್ವಾಚಾಂ ಜನಯತಿ ರತಿಂ ಕಿಂ ನು ಮಾನಂ ಕವೀನಾಂ
ದೃಷ್ಟ್ವಾ ಜಿಷ್ಣೋರ್ಯುಧಿ ರಥಗತಂ ಯಚ್ಚ ತತ್ಸಾಮ್ಯಮೀಯುಃ
॥ ೩ ॥

ಋಷಿರುವಾಚ

ದಿವಿ ಭುವ್ಯಂತರಿಕ್ಷೇ ಚ ಮಹೋತ್ಪಾತಾನ್ ಸಮುತ್ಥಿತಾನ್ ।
ದೃಷ್ಟ್ವಾऽऽಸೀನಾನ್ಸುಧರ್ಮಾಯಾಂ
ಕೃಷ್ಣಃ ಪ್ರಾಹ ಯದೂನಿದಮ್
॥ ೪ ॥

ಏತೇ ಘೋರಾ ಮಹೋತ್ಪಾತಾ
ದ್ವಾರ್ವತ್ಯಾಂ ಯಮಕೇತವಃ ।
ಮುಹೂರ್ತಮಪಿ ನ ಸ್ಥೇಯ-
ಮತ್ರ ನೋ ಯದುಪುಂಗವಾಃ ॥ ೫ ॥

ಸ್ತ್ರಿಯೋ ಬಾಲಾಶ್ಚ ವೃದ್ಧಾಶ್ಚ ಶಂಖೋದ್ಧಾರಂ ವ್ರಜನ್ತ್ವಿತಃ ।
ವಯಂ ಪ್ರಭಾಸಂ ಯಾಸ್ಯಾಮೋ ಯತ್ರ ಪ್ರತ್ಯಕ್ಸರಸ್ವತೀ
॥ ೬ ॥

ತತ್ರಾಭಿಷಿಚ್ಯ ಶುಚಯ ಉಪೋಷ್ಯ ಸುಸಮಾಹಿತಾಃ ।
ದೇವತಾಃ ಪೂಜಯಿಷ್ಯಾಮಃ ಸ್ನಪನಾಲೇಪನಾರ್ಹಣೈಃ
॥ ೭ ॥

ಬ್ರಾಹ್ಮಣಾಂಸ್ತು ಮಹಾಭಾಗಾನ್ಕೃತಸ್ವಸ್ತ್ಯಯನಾ ವಯಮ್ ।
ಗೋಭೂಹಿರಣ್ಯವಾಸೋಭಿರ್ಗಜಾಶ್ವರಥವೇಶ್ಮಭಿಃ
॥ ೮ ॥

ವಿಧಿರೇಷ ಹ್ಯರಿಷ್ಟಘ್ನೋ ಮಂಗಲಾಯನಮುತ್ತಮಮ್ ।
ದೇವದ್ವಿಜಗವಾಂ ಪೂಜಾ ಭೂತೇಷು ಪರಮೋ ಭವಃ
॥ ೯ ॥

ಸ್ವಾಮಿ ! ಯದುವಂಶ ಶಿರೋಮಣಿ ಭಗವಾನ್ ಶ್ರೀಕೃಷ್ಣನು ತನ್ನ ಕುಲವು ಶಾಪಗ್ರಸ್ತವಾದಾಗ ಸಮಸ್ತರ ಕಣ್ಣುಗಳಿಗೆ 'ಆನಂದಕರವಾಗಿದ್ದ ತನ್ನ ದಿವ್ಯ ಶ್ರೀವಿಗ್ರಹದ ಲೀಲೆಯನ್ನು ಹೇಗೆ ಉಪಸಂಹಾರ ಮಾಡಿದನು ? ॥ ೨ ॥ ಭಗವಾನ್ ಶ್ರೀಕೃಷ್ಣನ ಆ ಸ್ವರೂಪದಲ್ಲಿ ವ್ರಜಾಂಗನೆಯರ ಕಣ್ಣುಗಳು ಒಮ್ಮೆ ನೆಟ್ಟುಬಿಟ್ಟರೆ ಅಲ್ಲಿಂದ ಅವನ್ನು ಕೀಳುವುದಕ್ಕೆ ಅವರು ಅಸಮರ್ಥರಾಗುತ್ತಿದ್ದರು, ಅಷ್ಟೊಂದು ಸುಂದರವಾಗಿತ್ತು ಆ ಶ್ರೀವಿಗ್ರಹ. ಭಕ್ತರು, ರುಕ್ಮಿಣೀ, ಯಜ್ಞಪತ್ನಿಯರು (ಭಾಗ ೧೦/೨೩./೨೩.) ಮುಂತಾದವರು ಕವಿಗಳ ಮೂಲಕ ಭಗವಂತನ ಆ ದಿವ್ಯರೂಪ ಸೌಂದರ್ಯವನ್ನು ವರ್ಣನೆಯನ್ನು ಕೇಳಿದಾಗ ಆ ರೂಪಮಾಧುರಿಯು ಅವರ ಚಿತ್ತದಿಂದ ಯಾವ ರೀತಿಯಿಂದಲೂ ವಿಸ್ಮೃತವಾಗುತ್ತಿರಲಿಲ್ಲ. ಭಗವಂತನ ಅದೇ ಶ್ರೀವಿಗ್ರಹದ ಶೋಭೆಯ ಕುರಿತು ಕವಿಗಳು ವರ್ಣಿಸುತ್ತಾ-ವರ್ಣಿಸುತ್ತಾ ಅವರಿಗೆ ತೃಪ್ತಿಯೇ ಆಗದಷ್ಟು ಅದರಲ್ಲಿ ಅನುರಾಗ ಬೆಳೆದುಹೋಯಿತು. ಅಷ್ಟೇ ಅಲ್ಲ ಅದರಿಂದ ಆ ಕವಿಗಳೂ ಗೌರವಕ್ಕೆ ಪಾತ್ರರಾದರು. ಅರ್ಜುನನ ರಥದಲ್ಲಿ ಸಾರಥಿಯಾಗಿ ಕುಳಿತಿರುವ ಆ ಶ್ರೀಕೃಷ್ಣನ ಅದೇ ರೂಪಮಾಧುರಿಯನ್ನು ನೋಡುತ್ತಾ-ನೋಡುತ್ತಾ ಮಹಾಭಾರತಯುದ್ಧದಲ್ಲಿ ಪ್ರಾಣಗಳನ್ನು ತ್ಯಜಿಸಿದವರು ಅವನ ಸಾರೂಪ್ಯವನ್ನು ಪಡೆದರು. ಭಗವಂತನ ಅಂತಹ ಆ ಮುಗ್ಧಮನೋಹರ ಸ್ವರೂಪವನ್ನು ಅವನು ಹೇಗೆ ತ್ಯಜಿಸಿದನು. ॥ ೩ ॥

**ಶ್ರೀಶುಕಯೋಗಿಗಳು ಹೇಳುತ್ತಾರೆ** – ಪರೀಕ್ಷಿದ್ರಾಜನೇ ! ಆಕಾಶ, ಪೃಥಿವಿ, ಅಂತರಿಕ್ಷಗಳಲ್ಲಿ ದೊಡ್ಡ-ದೊಡ್ಡ ಉತ್ಪಾತ-ಅಪಶಕುನಗಳು ಆಗುತ್ತಿರುವುದನ್ನು ನೋಡಿದಾಗ, ಭಗವಾನ್ ಶ್ರೀಕೃಷ್ಣನು ಸುಧರ್ಮಸಭೆಯಲ್ಲಿ ಉಪಸ್ಥಿತ ಎಲ್ಲ ಯದುವಂಶೀಯರಲ್ಲಿ ಹೀಗೆ ಹೇಳಿದನು – ॥ ೪ ॥ ಶ್ರೇಷ್ಠ ಯದುವಂಶೀಯರೇ ! ದ್ವಾರಕೆಯಲ್ಲಿ ದೊಡ್ಡ-ದೊಡ್ಡ ಭಯಂಕರ ಉತ್ಪಾತಗಳು ನಡೆಯುವುದನ್ನು ನೀವೆಲ್ಲ ನೋಡುತ್ತಿದ್ದೀರಿ. ಇವು ಸಾಕ್ಷಾತ್ ಯಮರಾಜನ ಧ್ವಜದಂತೆ ನಮ್ಮ ಮಹಾನ್ ಅನಿಷ್ಟದ ಸೂಚಕಗಳಾಗಿವೆ. ಇನ್ನು ನಾವು ಇಲ್ಲಿ ಒಂದು ಮುಹೂರ್ತವೂ ನಿಲ್ಲಬಾರದು. ॥ ೫ ॥ ಸ್ತ್ರೀಯರು, ಮಕ್ಕಳು, ಮುದುಕರು ಇಲ್ಲಿಂದ ಶಂಖೋದ್ಧಾರಕ್ಷೇತ್ರಕ್ಕೆ ಹೊರಟುಹೋಗಲಿ. ನಾವೆಲ್ಲರೂ ಪ್ರಭಾಸಕ್ಷೇತ್ರಕ್ಕೆ ಹೋಗೋಣ. ಅಲ್ಲಿ ಸರಸ್ವತಿ ನದಿಯು ಪಶ್ಚಿಮದ ಕಡೆಗೆ ಹರಿದು ಸಮುದ್ರಕ್ಕೆ ಸೇರುತ್ತದೆ ಎಂಬುದು ನೀವೆಲ್ಲರೂ ತಿಳಿದಿದ್ದೀರಿ. ॥ ೬ ॥ ಅಲ್ಲಿ ನಾವೆಲ್ಲರೂ ಸ್ನಾನಮಾಡಿ ಪವಿತ್ರರಾಗಿ ಉಪವಾಸ ಮಾಡುವೆವು. ಏಕಾಗ್ರಚಿತ್ತದಿಂದ ಸ್ನಾನ ಮತ್ತು ಚಂದನಾದಿ ಸಾಮಗ್ರಿಗಳಿಂದ ದೇವತೆಗಳನ್ನು ಪೂಜಿಸೋಣ. ॥ ೭ ॥ ಅಲ್ಲಿ ಬ್ರಾಹ್ಮಣರಿಂದ ಸ್ವಸ್ತಿವಾಚನ ಮಾಡಿಸಿದ ಬಳಿಕ ನಾವೆಲ್ಲರೂ ಗೋ, ಭೂಮಿ, ಸ್ವರ್ಣ, ವಸ್ತ್ರ, ಆನೆ, ಕುದುರೆ, ರಥ, ಮನೆಯೇ ಮುಂತಾದುವನ್ನು ದಾನಮಾಡಿ ಬ್ರಾಹ್ಮಣರನ್ನು ಸತ್ಕರಿಸುವೆವು. ॥ ೮ ॥ ಈ ವಿಧಿಯು ಎಲ್ಲ ರೀತಿಯ ಅಮಂಗಳವನ್ನು ನಾಶಮಾಡುವಂತಹುದು ಮತ್ತು ಪರಮ ಮಂಗಲದ ಜನನಿಯಾಗಿದೆ. ಶ್ರೇಷ್ಠ ಯದುವಂಶೀಯರೇ ! ದೇವತೆ, ಬ್ರಾಹ್ಮಣ, ಗೋವು ಇವುಗಳ ಪೂಜೆಯೇ ಪ್ರಾಣಿಗಳ ಜನ್ಮದ ಪರಮ ಲಾಭವಾಗಿದೆ. ॥ ೯ ॥

ಇತಿ ಸರ್ವೇ ಸಮಾಕರ್ಣ್ಯ ಯದುವೃದ್ಧಾ ಮಧುದ್ವಿಷಃ ।
ತಥೇತಿ ನೌಭಿರುತ್ತೀರ್ಯ ಪ್ರಭಾಸಂ ಪ್ರಯಯೂ ರಥೈಃ ॥ ೧೦ ॥

ತಸ್ಮಿನ್ಭಗವತಾಽಽದಿಷ್ಟಂ ಯದುದೇವೇನ ಯಾದವಾಃ ।
ಚಕ್ರುಃ ಪರಮಯಾ ಭಕ್ತ್ಯಾ ಸರ್ವಶ್ರೇಯೋಪಬೃಂಹಿತಮ್ ॥ ೧೧ ॥

ತತಸ್ತಸ್ಮಿನ್ಮಹಾಪಾನಂ ಪಪುರ್ಮೈರೇಯಕಂ ಮಧು ।
ದಿಷ್ಟವಿಭ್ರಂಶಿತಧಿಯೋ ಯದ್ದ್ರವೈರ್ಭ್ರಶ್ಯತೇ ಮತಿಃ ॥ ೧೨ ॥

ಮಹಾಪಾನಾಭಿಮತ್ತಾನಾಂ ವೀರಾಣಾಂ ದೃಪ್ತಚೇತಸಾಮ್ ।
ಕೃಷ್ಣಮಾಯಾವಿಮೂಢಾನಾಂ ಸಂಘರ್ಷಃ ಸುಮಹಾನಭೂತ್ ॥ ೧೩ ॥

ಯುಯುಧುಃ ಕ್ರೋಧಸಂರಬ್ಧಾ ವೇಲಾಯಾಮಾತತಾಯಿನಃ ।
ಧನುರ್ಭಿರಸಿಭಿರ್ಭಲ್ಲೈರ್ಗದಾಭಿಸ್ತೋಮರರ್ಷ್ಟಿಭಿಃ ॥ ೧೪ ॥

ಪತತ್ಪತಾಕೈ ರಥಕುಂಜರಾದಿಭಿಃ
ಖರೋಷ್ಟ್ರಗೋಭಿರ್ಮಹಿಷೈರ್ನರೈರಪಿ ।
ಮಿಥಃ ಸಮೇತ್ಯಾಶ್ವತರೈಃ ಸುದುರ್ಮದಾ
ನ್ಯಹನ್ಶರೈರ್ದದ್ಭಿರಿವ ದ್ವಿಪಾ ವನೇ ॥ ೧೫ ॥

ಪ್ರದ್ಯುಮ್ನಸಾಂಬೌ ಯುಧಿ ರೂಢಮತ್ಸರಾ-
ವಕ್ರೂರಭೋಜಾವನಿರುದ್ಧಸಾತ್ಯಕೀ ।
ಸುಭದ್ರಸಂಗ್ರಾಮಜಿತೌ ಸುದಾರುಣೌ
ಗದೌ ಸುಮಿತ್ರಾಸುರಥೌ ಸಮೀಯತುಃ ॥ ೧೬ ॥

ಅನ್ಯೇ ಚ ಯೇ ವೈ ನಿಶಠೋಲ್ಮುಕಾದಯಃ
ಸಹಸ್ರಜಿಚ್ಛತಜಿದ್ಭಾನುಮುಖ್ಯಾಃ ।
ಅನ್ಯೋನ್ಯಮಾಸಾದ್ಯ ಮದಾಂಧಕಾರಿತಾ
ಜಘ್ನುರ್ಮುಕುಂದೇನ ವಿಮೋಹಿತಾ ಭೃಶಮ್ ॥ ೧೭ ॥

ದಾಶಾರ್ಹವೃಷ್ಣ್ಯಂಧಕಭೋಜಸಾತ್ವತಾ
ಮಧ್ವರ್ಬುದಾ ಮಾಥುರಶೂರಸೇನಾಃ ।
ವಿಸರ್ಜನಾಃ ಕುಕುರಾಃ ಕುಂತಯಶ್ಚ
ಮಿಥಸ್ತತಸ್ತೇಽಥ ವಿಸೃಜ್ಯ ಸೌಹೃದಮ್ ॥ ೧೮ ॥

ಪರೀಕ್ಷಿತನೇ! ಎಲ್ಲ ವೃದ್ಧ ಯದುವಂಶೀಯರು ಭಗವಾನ್ ಶ್ರೀಕೃಷ್ಣನ ಮಾತನ್ನು ಕೇಳಿ 'ಹಾಗೆಯೇ ಆಗಲಿ' ಎಂದು ಹೇಳಿ ಅದನ್ನು ಅನುಮೋದಿಸಿದರು. ಕೂಡಲೇ ನಾವೆಗಳಿಂದ ಸಮುದ್ರವನ್ನು ದಾಟಿ ರಥಗಳಲ್ಲಿ ಪ್ರಭಾಸಕ್ಷೇತ್ರದ ಯಾತ್ರೆಯನ್ನು ಕೈಗೊಂಡರು. ॥ ೧೦ ॥ ಅಲ್ಲಿಗೆ ತಲುಪಿ ಯಾದವರು ಯದುವಂಶ ಶಿರೋಮಣಿ ಭಗವಾನ್ ಶ್ರೀಕೃಷ್ಣನ ಆದೇಶಾನುಸಾರ ಬಹು ಶ್ರದ್ಧೆ ಮತ್ತು ಭಕ್ತಿಯಿಂದ ಶಾಂತಿಪಾಠಾದಿಗಳನ್ನು ಗೈದು, ಎಲ್ಲ ರೀತಿಯ ಮಂಗಲ ಕೃತ್ಯಗಳನ್ನು ಮಾಡಿದರು. ॥ ೧೧ ॥ ಇದೆಲ್ಲವನ್ನು ಅವರೇನೋ ಮಾಡಿದರು, ಆದರೆ ದೈವವು ಅವರ ಬುದ್ಧಿಯನ್ನು ಅಪಹರಿಸಿತ್ತು. ಆದ್ದರಿಂದ ಅವರು ಮೈರೇಯಕವೆಂಬ ಮದಿರೆಯನ್ನು ಪಾನಮಾಡತೊಡಗಿದರು. ಅದರ ಮತ್ತಿನಿಂದ ಬುದ್ಧಿಯು ಭ್ರಷ್ಟವಾಗುತ್ತದೆ. ಅದು ಕುಡಿಯುವಾಗ ಸಿಹಿಯಾಗಿರುತ್ತದೆ, ಆದರೆ ಪರಿಣಾಮದಲ್ಲಿ ಸರ್ವನಾಶ ಮಾಡುವಂತಹುದು.॥ ೧೨ ॥ ಆ ತೀವ್ರವಾದ ಮದಿರಾಪಾನದಿಂದ ಎಲ್ಲರೂ ಉನ್ಮತ್ತರಾದರು. ಅವರು ಗರ್ವದಿಂದ ಪರಸ್ಪರ ಜಗಳ ಕಾಯಲು ತೊಡಗಿದರು. ನಿಜವಾಗಿಯಾದರೋ ಅವರೆಲ್ಲರೂ ಶ್ರೀಕೃಷ್ಣನ ಮಾಯೆಯಿಂದ ಮೂಢರಾಗಿದ್ದರು. ॥ ೧೩ ॥ ಆಗ ಅವರೆಲ್ಲರೂ ಸಿಟ್ಟುಗೊಂಡು ಒಬ್ಬರು ಮತ್ತೊಬ್ಬರ ಮೇಲೆ ಆಕ್ರಮಣಕ್ಕೆ ತೊಡಗಿದರು. ಧನುಷ್ಯ ಬಾಣ, ಖಡ್ಗ, ಈಟಿ, ಗದೆ, ತೋಮರ, ಋಷ್ಟಿ ಮುಂತಾದ ಅಸ್ತ್ರ ಶಸ್ತ್ರಗಳಿಂದ ಅಲ್ಲೇ ಸಮುದ್ರತಟದಲ್ಲಿ ಪರಸ್ಪರ ಆಕ್ರಮಣ ಮಾಡಿದರು. ॥ ೧೪ ॥ ಮದೋನ್ಮತ್ತರಾದ ಯದುವಂಶೀಯರು ಆನೆ, ಕುದುರೆ, ಕತ್ತೆ, ಒಂಟೆ, ಹೇಸರಕತ್ತೆ, ಎತ್ತು, ಕೋಣ ಮತ್ತು ಮನುಷ್ಯರನ್ನೇ ವಾಹನವಾಗಿಸಿಕೊಂಡು ಒಬ್ಬರು ಮತ್ತೊಬ್ಬರನ್ನು ಬಾಣಗಳಿಂದ ಘಾಸಿಗೊಳಿಸಿದರು. ಅವನ ಕಾಳಗ ಕಾಡಾನೆಗಳು ಒಂದು ಮತ್ತೊಂದನ್ನು ದಂತದಿಂದ ತಿವಿಯುವಂತೆ ಇತ್ತು ಎಲ್ಲ ವಾಹನಗಳ ಮೇಲೆ ಧ್ವಜಗಳು ಹಾರಾಡುತ್ತಿದ್ದವು. ಕಾಲಾಳುಗಳೂ ಪರಸ್ಪರ ಕಾದುತ್ತಿದ್ದರು. ॥ ೧೫ ॥ ಪ್ರದ್ಯುಮ್ನನು ಸಾಂಬನೊಂದಿಗೆ, ಅಕ್ರೂರನು ಭೋಜನೊಂದಿಗೆ, ಅನಿರುದ್ಧನು-ಸಾತ್ಯಕಿಯೊಂದಿಗೆ, ಸುಭದ್ರನು ಸಂಗ್ರಾಮಜಿತನೊಂದಿಗೆ, ಶ್ರೀಕೃಷ್ಣನ ತಮ್ಮ ಗದನು ಅದೇ ಹೆಸರಿನ ಅವರ ಪುತ್ರನೊಂದಿಗೆ, ಸುಮಿತ್ರನು ಸುರಥನೊಂದಿಗೆ ಯುದ್ಧಮಾಡತೊಡಗಿದರು. ಅವರೆಲ್ಲರೂ ಭಯಂಕರ ಯೋಧರಾಗಿದ್ದರು. ಕ್ರೋಧದಿಂದ ಒಬ್ಬರು ಮತ್ತೊಬ್ಬರ ನಾಶ ಮಾಡಲು ಹವಣಿಸುತ್ತಿದ್ದರು. ॥ ೧೬ ॥ ಇವರಲ್ಲದೆ ನಿಶಠ, ಉಲ್ಮುಖ, ಸಹಸ್ರಜಿತ್, ಶತಜಿತ್, ಭಾನು ಮುಂತಾದ ಯಾದವರೂ ಪರಸ್ಪರ ಯುದ್ಧದಲ್ಲಿ ತೊಡಗಿದರು ಭಗವಾನ್ ಶ್ರೀಕೃಷ್ಣನ ಮಾಯೆಯಿಂದ ಅವರು ಅತ್ಯಂತ ಮೋಹಿತರಾಗಿದ್ದರು. ಇತ್ತ ಮದಿರೆಯ ಮತ್ತಿನಿಂದ ಅವರು ಕುರುಡಾಗಿದ್ದರು. ॥ ೧೭ ॥ ದಾಶಾರ್ಹ, ವೃಷ್ಣಿ ಅಂಧಕ, ಭೋಜ, ಸಾತ್ವತ, ಮಧು, ಅರ್ಬುದ, ಮಾಥುರ, ಶೂರಸೇನ, ವಿಸರ್ಜನ, ಕುಕುರ, ಕುಂತಿ ಮುಂತಾದ ವಂಶಜರು ಸೌಹಾರ್ದ್ರ, ಪ್ರೇಮವನ್ನು ಮರೆತು ಪರಸ್ಪರ ಕಡಿದಾಡಲು ತೊಡಗಿದರು. ॥ ೧೮ ॥

ಪುತ್ರಾ ಅಯುಧ್ಯನ್ ಪಿತೃಭಿರ್ಭ್ರಾತೃಭಿಶ್ಚ
ಸ್ವಸ್ರೀಯದೌಹಿತ್ರಪಿತೃವ್ಯಮಾತುಲೈಃ ।
ಮಿತ್ರಾಣಿ ಮಿತ್ರೈಃ ಸುಹೃದಃ ಸುಹೃದ್ಭಿ-
ರ್ಜ್ಞಾತೀಂಸ್ತ್ವಹನ್ ಜ್ಞಾತಯ ಏವ ಮೂಢಾಃ ॥ ೧೯ ॥

ಶರೇಷು ಕ್ಷೀಯಮಾಣೇಷು ಭಜ್ಯಮಾನೇಷು ಧನ್ವಸು ।
ಶಸ್ತ್ರೇಷು ಕ್ಷೀಯಮಾಣೇಷು ಮುಷ್ಟಿಭಿರ್ಜಹ್ರುರೇರಕಾಃ ॥ ೨೦ ॥

ತಾ ವಜ್ರಕಲ್ಪಾಹ್ಯಭವನ್ಪರಿಘಾ ಮುಷ್ಟಿನಾ ಭೃತಾಃ ।
ಜಘ್ನುರ್ದ್ವಿಷಸ್ತೈಃ ಕೃಷ್ಣೇನ ವಾರ್ಯಮಾಣಾಸ್ತು ತಂ ಚ ತೇ ॥ ೨೧ ॥

ಪ್ರತ್ಯನೀಕಂ ಮನ್ಯಮಾನಾ ಬಲಭದ್ರಂ ಚ ಮೋಹಿತಾಃ ।
ಹಂತುಂ ಕೃತಧಿಯೋ ರಾಜನ್ನಾಪನ್ನಾ ಆತತಾಯಿನಃ ॥ ೨೨ ॥

ಅಥ ತಾವಪಿ ಸಂಕ್ರುದ್ಧಾವುದ್ಯಮ್ಯ ಕುರುನಂದನ ।
ಏರಕಾಮುಷ್ಟಿಪರಿಘೌ ಚರಂತೌ ಜಘ್ನತುರ್ಯುಧಿ ॥ ೨೩ ॥

ಬ್ರಹ್ಮಶಾಪೋಪಸೃಷ್ಟಾನಾಂ ಕೃಷ್ಣಮಾಯಾವೃತಾತ್ಮನಾಮ್ ।
ಸ್ಪರ್ಧಾಕ್ರೋಧಃ ಕ್ಷಯಂ ನಿನ್ಯೇ ವೈಣವೋಽಗ್ನಿರ್ಯಥಾ ವನಮ್ ॥ ೨೪ ॥

ಏವಂ ನಷ್ಟೇಷು ಸರ್ವೇಷು ಕುಲೇಷು ಸ್ವೇಷು ಕೇಶವಃ ।
ಅವತಾರಿತೋ ಭುವೋ ಭಾರ ಇತಿ ಮೇನೇಽವಶೇಷಿತಃ ॥ ೨೫ ॥

ರಾಮಃ ಸಮುದ್ರವೇಲಾಯಾಂ ಯೋಗಮಾಸ್ಥಾಯ ಪೌರುಷಮ್ ।
ತತ್ಯಾಜ ಲೋಕಂ ಮಾನುಷ್ಯಂ ಸಂಯೋಜ್ಯಾತ್ಮಾನಮಾತ್ಮನಿ ॥ ೨೬ ॥

ರಾಮನಿರ್ಯಾಣಮಾಲೋಕ್ಯ ಭಗವಾನ್ ದೇವಕೀಸುತಃ ।
ನಿಷಸಾದ ಧರೋಪಸ್ಥೇ ತೂಷ್ಣೀಮಾಸಾದ್ಯ ಪಿಪ್ಪಲಮ್ ॥ ೨೭ ॥

ಬಿಭ್ರಚ್ಚತುರ್ಭುಜಂ ರೂಪಂ ಭ್ರಾಜಿಷ್ಣು ಪ್ರಭಯಾ ಸ್ವಯಾ ।
ದಿಶೋ ವಿತಿಮಿರಾಃ ಕುರ್ವನ್ವಿಧೂಮ ಇವ ಪಾವಕಃ ॥ ೨೮ ॥

ಶ್ರೀವತ್ಸಾಂಕಂ ಘನಶ್ಯಾಮಂ ತಪ್ತಹಾಟಕವರ್ಚಸಮ್ ।
ಕೌಶೇಯಾಂಬರಯುಗ್ಮೇನ ಪರಿವೀತಂ ಸುಮಂಗಲಮ್ ॥ ೨೯ ॥

ಮೂಢತೆಯಿಂದ ಮಗನು ತಂದೆಯು, ಸಹೋದರ ಸೋದರನ, ಅಳಿಯ ಮಾವನ, ಮೊಮ್ಮಗ ಅಜ್ಜನ, ಮಿತ್ರನು ಮಿತ್ರನ, ಸುಹೃದ್ ಸುಹೃದನ, ಸೋದರಳಿಯ ಸೋದರಮಾವನ ಹಾಗೂ ಒಂದೇ ಗೋತ್ರದವರು ಪರಸ್ಪರ ರಕ್ತಹರಿಸತೊಡಗಿದರು. ॥ ೧೯ ॥

ಕೊನೆಗೆ ಅವರ ಬಾಣಗಳು ಮುಗಿದಾಗ, ಧನುಸ್ಸುಗಳು ಮುರಿದಾಗ, ಶಸ್ತ್ರಾಸ್ತ್ರಗಳು ನಷ್ಟ-ಭ್ರಷ್ಟವಾದಾಗ ಅವರೆಲ್ಲರೂ ತಮ್ಮ ಕೈಗಳಿಂದ ಸಮುದ್ರತಟದಲ್ಲಿ ಬೆಳೆದ ಏರಕಾ ಎಂಬ ಹುಲ್ಲನ್ನು ಕೀಳಲು ತೊಡಗಿದರು. ಆ ಹುಲ್ಲು ಋಷಿಗಳ ಶಾಪದಿಂದ ಉತ್ಪನ್ನವಾದ ಕಬ್ಬಿಣದ ಒನಕೆಯ ಚೂರ್ಣದಿಂದ ಹುಟ್ಟಿತ್ತು. ॥ ೨೦ ॥ ಎಲೈ ರಾಜನೇ! ಆ ಹುಲ್ಲನ್ನು ಅವರು ಕೈಗೆತ್ತಿಕೊಳ್ಳುತ್ತಲೇ ಅದು ಪರಿಘದಂತೆ ಶಕ್ತಿಶಾಲಿಯಾಯಿತು. ಆಗ ಅವರು ರೋಷಾವಿಷ್ಟರಾಗಿ ಆ ಹುಲ್ಲಿನಿಂದಲೇ ವಿಪಕ್ಷಿಯರನ್ನು ಪ್ರಹರಿತೊಡಗಿದರು. ಭಗವಾನ್ ಶ್ರೀಕೃಷ್ಣನು ಅವರನ್ನು ತಡೆದರೂ ಅವರು ಅವನನ್ನು ಮತ್ತು ಬಲರಾಮನನ್ನು ತಮ್ಮ ಶತ್ರುಗಳೆಂದೇ ಭಾವಿಸಿದರು. ಆ ಆತತಾಯಿಗಳು ಕೃಷ್ಣ ಬಲರಾಮರನ್ನೇ ಹೊಡೆಯುವಷ್ಟು ಅವರ ಬುದ್ಧಿ ಮೂಢವಾಗಿತ್ತು. ॥ ೨೧-೨೨ ॥ ಕುರುನಂದನಾ! ಈಗ ಭಗವಾನ್ ಶ್ರೀಕೃಷ್ಣ ಬಲರಾಮರೂ ಕ್ರೋಧಗೊಂಡು ಯುದ್ಧಭೂಮಿಯಲ್ಲಿ ಅತ್ತ-ಇತ್ತ ಹೋಗುತ್ತಾ ಏರಕಾರೂಪೀ ಪರಿಘವನ್ನು ಕೈಯಲ್ಲೆತ್ತಿಕೊಂಡು ಅವರೆಲ್ಲರನ್ನು ಯುದ್ಧದಲ್ಲಿ ಕೊಲ್ಲತೊಡಗಿದರು. ॥ ೨೩ ॥ ಬಿದಿರಿನ ಘರ್ಷಣೆಯಿಂದ ಉಂಟಾದ ಬೆಂಕಿಯು ಬಿದಿರಮೆಳೆಯನ್ನೇ ಸುಡುವಂತೆ, ಬ್ರಹ್ಮಶಾಪದಿಂದ ಗ್ರಸ್ತರಾದ ಮತ್ತು ಶ್ರೀಕೃಷ್ಣನ ಮಾಯೆಯಿಂದ ಮೋಹಿತರಾದ ಯದುವಂಶೀಯರ ಸ್ಪರ್ಧಾಮೂಲಕ ಕ್ರೋಧವೇ ಅವರನ್ನು ನಾಶಮಾಡಿಬಿಟ್ಟಿತು. ॥ ೨೪ ॥ ಸಮಸ್ತ ಯದುವಂಶೀಯರ ಸಂಹಾರವಾಗಿ ಹೋದುದನ್ನು ನೋಡಿ 'ಈಗ ಅಳಿದುಳಿದ ಪೃಥ್ವಿಯ ಭಾರವೂ ತಗ್ಗಿ ಹೋಯಿತು' ಎಂದು ಭಗವಾನ್ ಶ್ರೀಕೃಷ್ಣನು ಯೋಚಿಸಿದನು.

ಪರೀಕ್ಷಿತನೇ! ಬಲರಾಮದೇವರು ಸಮುದ್ರತಟದಲ್ಲಿ ಕುಳಿತುಕೊಂಡು ಏಕಾಗ್ರಚಿತ್ತದಿಂದ ಪರಮಾತ್ಮನ ಚಿಂತನೆಮಾಡುತ್ತಾ ತನ್ನ ಆತ್ಮನನ್ನು ಆತ್ಮಸ್ವರೂಪದಲ್ಲಿ ಸ್ಥಿರಗೊಳಿಸಿದನು ಹಾಗೂ ಈ ಭೂಲೋಕವನ್ನು ಬಿಟ್ಟು ಹೊರಟುಹೋದನು. ॥ ೨೫ ॥ ಭಗವಾನ್ ಶ್ರೀಕೃಷ್ಣನು ತನ್ನ ಅಣ್ಣ ಬಲರಾಮನು ಪರಮಪದದಲ್ಲಿ ಲೀನವಾದನು ಎಂದು ನೋಡಿದಾಗ, ಅವನೂ ಕೂಡ ಒಂದು ಅರಳಿ ಮರದ ಕೆಳಗೆ ಹೋಗಿ ಮೌನಧರಿಸಿ ನೆಲದ ಮೇಲೆಯೇ ಕುಳಿತುಬಿಟ್ಟನು. ॥ ೨೬ ॥ ಭಗವಾನ್ ಶ್ರೀಕೃಷ್ಣನು ಆಗ ತನ್ನ ಅಂಗಕಾಂತಿಯಿಂದ ದೇದೀಪ್ಯಮಾನ ಚತುರ್ಭುಜರೂಪವನ್ನು ಧರಿಸಿದ್ದನು ಮತ್ತು ಧೂಮರಹಿತ ಅಗ್ನಿಯಂತೆ ಎಲ್ಲ ದಿಕ್ಕುಗಳನ್ನು ಪ್ರಕಾಶಿಸುತ್ತಿದ್ದನು. ॥ ೨೭ ॥ ವರ್ಷಾಕಾಲದ ಮೇಘದಂತೆ ಶ್ಯಾಮಲ ಶರೀರದಿಂದ ಕಾದ ಚಿನ್ನದಂತೆ ಜ್ಯೋತಿಯು ಹೊರಸೂಸುತ್ತಿತ್ತು. ವಕ್ಷಃಸ್ಥಳದಲ್ಲಿ ಶ್ರೀವತ್ಸಲಾಂಛನ ಶೋಭಿಸುತ್ತಿತ್ತು. ಅವನು ರೇಷ್ಮೆ ಪೀತಾಂಬರದ ಧೋತಿ ಮತ್ತು ಶಲ್ಯವನ್ನು ಧರಿಸಿದ್ದನು. ಅವನ ಆ ಸ್ವರೂಪವು ತುಂಬಾ ಮಂಗಲಮಯವಾಗಿತ್ತು. ॥ ೨೯ ॥

ಸುಂದರಸ್ಮಿತವಕ್ತ್ರಾಬ್ಜಂ ನೀಲಕುಂತಲಮಂಡಿತಮ್ ।
ಪುಂಡರೀಕಾಭಿರಾಮಾಕ್ಷಂ ಸ್ಫುರನ್ಮಕರಕುಂಡಲಮ್ ॥ ೩೦ ॥

ಕಟಿಸೂತ್ರಬ್ರಹ್ಮಸೂತ್ರಕಿರೀಟಕಟಕಾಂಗದೈಃ ।
ಹಾರನೂಪುರಮುದ್ರಾಭಿಃ ಕೌಸ್ತುಭೇನ ವಿರಾಜಿತಮ್ ॥ ೩೧ ॥

ವನಮಾಲಾಪರೀತಾಂಗಂ ಮೂರ್ತಿಮದ್ಭಿರ್ನಿಜಾಯುಧೈಃ ।
ಕೃತ್ವೋರೌ ದಕ್ಷಿಣೇ ಪಾದಮಾಸೀನಂ ಪಂಕಜಾರುಣಮ್ ॥ ೩೨ ॥

ಮುಸಲಾವಶೇಷಾಯಃಖಂಡಕೃತೇಷುರ್ಲುಬ್ಧಕೋ ಜರಾ ।
ಮೃಗಾಸ್ಯಾಕಾರಂ ತಚ್ಚರಣಂ ವಿವ್ಯಾಧ ಮೃಗಶಂಕಯಾ ॥ ೩೩ ॥

ಚತುರ್ಭುಜಂ ತಂ ಪುರುಷಂ ದೃಷ್ಟ್ವಾ ಸ ಕೃತಕಿಲ್ಬಿಷಃ ।
ಭೀತಃ ಪಪಾತ ಶಿರಸಾ ಪಾದಯೋರಸುರದ್ವಿಷಃ ॥ ೩೪ ॥

ಅಜಾನತಾ ಕೃತಮಿದಂ ಪಾಪೇನ ಮಧುಸೂದನ ।
ಕ್ಷಂತುಮರ್ಹಸಿ ಪಾಪಸ್ಯ ಉತ್ತಮಶ್ಲೋಕ ಮೇಽನಘ ॥ ೩೫ ॥

ಯಸ್ಯಾನುಸ್ಮರಣಂ ನೃಣಾಮಜ್ಞಾನಧ್ವಾಂತನಾಶನಮ್ ।
ವದಂತಿ ತಸ್ಯ ತೇ ವಿಷ್ಣೋ ಮಯಾಸಾಧು ಕೃತಂ ಪ್ರಭೋ ॥ ೩೬ ॥

ತನ್ಮಾಽಽಶು ಜಹಿ ವೈಕುಂಠ ಪಾಪ್ಮಾನಂ ಮೃಗಲುಬ್ಧಕಮ್ ।
ಯಥಾ ಪುನರಹಂ ತ್ವೇವಂ ನ ಕುರ್ಯಾಂ ಸದತಿಕ್ರಮಮ್ ॥ ೩೭ ॥

ಯಸ್ಯಾತ್ಮಯೋಗರಚಿತಂ ನ ವಿದುರ್ವಿರಿಂಚೋ
ರುದ್ರಾದಯೋಽಸ್ಯ ತನಯಾಃ ಪತಯೋ ಗಿರಾಂ ಯೇ ।
ತ್ವನ್ಮಾಯಯಾ ಪಿಹಿತದೃಷ್ಟಯ ಏತದಂಜಃ
ಕಿಂ ತಸ್ಯ ತೇ ವಯಮಸದ್ಗತಯೋ ಗೃಣೀಮಃ ॥ ೩೮ ॥

ಮುಖದಲ್ಲಿ ಸುಂದರ ಹಾಸ್ಯ, ಕಪೋಲಗಳಲ್ಲಿ ಕಪ್ಪಾದ ಮುಂಗುರುಳು ಲಾಸ್ಯವಾಡುತ್ತಿದ್ದವು. ಅವನ ನೇತ್ರಗಳು ಕಮಲದಂತೆ ಸುಂದರ ಹಾಗೂ ಸುಕುಮಾರವಾಗಿದ್ದವು. ಕಿವಿಗಳಲ್ಲಿ ಮಕರಾಕೃತಿಯ ಕುಂಡಲಗಳು ಓಲಾಡುತ್ತಿದ್ದು ಅವನು ಬಹಳ ಅಂದವಾಗಿ ಕಾಣುತ್ತಿದ್ದನು. ॥ ೩೦ ॥ ಸೊಂಟದಲ್ಲಿ ಉಡಿದಾರದಿಂದಲೂ, ಹೆಗಲಲ್ಲಿ ಯಜ್ಞೋಪವೀತದಿಂದಲೂ, ತಲೆಯ ಮೇಲಿನ ಕಿರೀಟದಿಂದಲೂ, ಕರಕಂಕಣಗಳಿಂದಲೂ, ತೋಳುಗಳಲ್ಲಿ ಬಾಜೂ-ಬಂದಿಗಳಿಂದಲೂ, ವಕ್ಷಃಸ್ಥಳದಲ್ಲಿ ಹಾರಗಳಿಂದಲೂ, ಚರಣಗಳಲ್ಲಿ ನೂಪುರಗಳಿಂದಲೂ, ಬೆರಳುಗಳಲ್ಲಿ ಉಂಗುರಗಳಿಂದಲೂ, ಕತ್ತಿನಲ್ಲಿ ಕೌಸ್ತುಭಮಣಿಯಿಂದಲೂ ಶೋಭಿಸುತ್ತಿದ್ದನು. ॥ ೩೧ ॥ ಮಂಡಿಯವರೆಗೆ ವನ ಮಾಲೆಯು ಓಲಾಡುತ್ತಿತ್ತು. ಶಂಖ, ಚಕ್ರ, ಗದೆ ಮುಂತಾದ ಆಯುಧಗಳು ಮೂರ್ತಿವತ್ತಾಗಿ ಪ್ರಭುವನ್ನು ಸೇವಿಸುತ್ತಿದ್ದವು. ಆಗ ಭಗವಂತನು ಬಲ ತೊಡೆಯ ಮೇಲೆ ಎಡ ಕಾಲನ್ನಿಟ್ಟುಕೊಂಡು ಕುಳಿತಿದ್ದನು. ಅವನ ಅಂಗಾಲುಗಳು ಕೆಂಪಾದ ಕಮಲದಂತೆ ಹೊಳೆಯುತ್ತಿದ್ದವು. ॥ ೩೨ ॥

ಪರೀಕ್ಷಿತನೇ! ಜರಾ ಎಂಬ ವ್ಯಾಧನು ಉಳಿದಿದ್ದ ಕಬ್ಬಿಣದ ಒನಕೆಯ ತುಂಡನ್ನು ತನ್ನ ಬಾಣದ ಅಲುಗನ್ನಾಗಿಸಿಕೊಂಡಿದ್ದನು. ಅವನಿಗೆ ದೂರದಿಂದ ಭಗವಂತನ ಕೆಂಪಾದ ಪಾದ ಪದ್ಮವು ಜಿಂಕೆಯ ಮುಖದಂತೆ ಕಂಡುಬಂತು. ಅವನು ಅದನ್ನು ನಿಜವಾದ ಮೃಗವೆಂದೇ ತಿಳಿದು ಅದೇ ಬಾಣವನ್ನು ಪ್ರಯೋಗಿಸಿದನು. ॥ ೩೩ ॥ ಮೃಗವನ್ನರಸುತ್ತಾ ಅವನು ಬಳಿಗೆ ಬಂದಾಗ ನೋಡಿದನು – ಅರೇ! ಇವನಾದರೋ ಚತುರ್ಭುಜ ಸ್ವಯಂ ಭಗವಂತನಾಗಿದ್ದಾನಲ್ಲ! ಈಗಲಾದರೋ ಅಪರಾಧ ನಡೆದು ಹೋಯಿತು. ಇದಕ್ಕಾಗಿ ಭಯದಿಂದ ನಡುಗುತ್ತಾ, ಅಸುರರನ್ನು ನಾಶಗೊಳಿಸುವ ಭಗವಾನ್ ಶ್ರೀಕೃಷ್ಣನ ಚರಣಗಳಲ್ಲಿ ತಲೆಯನ್ನಿಟ್ಟು ಹೊರಳಾಡುತ್ತಾ ಕ್ಷಮೆಕೇಳ ತೊಡಗಿದನು. ॥ ೩೪ ॥ ಬೇಡನು ಬೇಡಿಕೊಂಡನು ಓ ಮಧುಸೂದನಾ ! ನಾನು ತಿಳಿಯದೆ ಈ ಪಾಪ ಮಾಡಿರುವೆನು. ನಿಜವಾಗಿ ನಾನು ದೊಡ್ಡ ಪಾಪಿಯಾಗಿದ್ದೇನೆ. ಆದರೆ ನೀನು ಪರಮ ಯಶಸ್ವೀ ಮತ್ತು ನಿರ್ವಿಕಾರನಾಗಿರುವೆ. ನೀನು ದಯಮಾಡಿ ನನ್ನ ಅಪಾರಾಧವನ್ನು ಕ್ಷಮಿಸು. ॥ ೩೫ ॥ ಸರ್ವವ್ಯಾಪಕ ಸರ್ವಶಕ್ತಿವಂತನಾದ ಪ್ರಭುವೇ! ನಿನ್ನ ಸ್ಮರಣಮಾತ್ರದಿಂದ ಮನುಷ್ಯರ ಅಜ್ಞಾನಾಂಧಕಾರವು ನಾಶವಾಗುತ್ತದೆ ಎಂದು ಮಹಾತ್ಮರು ಹೇಳುತ್ತಾರೆ. ನಾನು ಸ್ವಯಂ ನಿನಗೇ ಅನಿಷ್ಟಮಾಡಿದೆ ಇದು ತುಂಬಾ ದುಃಖದ ಮಾತಾಗಿದೆ. ॥ ೩೬ ॥ ವೈಕುಂಠನಾಥಾ ! ನಾನು ನಿರಪರಾಧಿಯಾದ ಜಿಂಕೆಗಳನ್ನು ಕೊಲ್ಲುವಂತಹ ಮಹಾಪಾಪಿಯಾಗಿದ್ದೇನೆ. ನೀನು ಈಗಲೇ ನನ್ನನ್ನು ಕೊಂದುಬಿಡು. ಏಕೆಂದರೆ, ಸತ್ತು ಹೋದರೆ ನಾನು ಎಂದೂ ನಿನ್ನಂತಹ ಮಹಾಪುರುಷರಿಗೆ ಅಪರಾಧ ಮಾಡಲಾರೆನು. ॥ ೩೭ ॥ ನಿನ್ನ ಯೋಗಮಾಯೆಯಿಂದ ರಚಿತವಾದ ಈ ವಿಶ್ವದ ಕುರಿತು ಬ್ರಹ್ಮರುದ್ರಾದಿಗಳೂ ಹಾಗೂ ವಾಣಿಯ ಅಧಿಷ್ಠಾತಾ ಬೃಹಸ್ಪತಿ ಮುಂತಾದವರೂ ಸರಿಯಾಗಿ ತಿಳಿಯಲಾರರು. ಏಕೆಂದರೆ, ಅವರ ದೃಷ್ಟಿಯು ನಿನ್ನ ಮಾಯೆಯಿಂದ ಮುಚ್ಚಿಹೋಗಿದೆ. ಮತ್ತೆ ನಾವಾದರೋ ಪಾಪಯೋನಿಗಳು. ಅದರ ಕುರಿತು ಏನು ವರ್ಣಿಸ ಬಲ್ಲೆವು ? ॥ ೩೮ ॥

ಶ್ರೀಭಗವಾನುವಾಚ

ಮಾ ಭೈರ್ಜರೇ ತ್ವಮುತ್ತಿಷ್ಠ ಕಾಮ ಏಷ ಕೃತೋ ಹಿ ಮೇ ।
ಯಾಹಿ ತ್ವಂ ಮದನುಜ್ಞಾತಃ ಸ್ವರ್ಗಂ ಸುಕೃತಿನಾಂ ಪದಮ್ ॥ ೩೯ ॥

ಶ್ರೀಶುಕ ಉವಾಚ

ಇತ್ಯಾದಿಷ್ಟೋ ಭಗವತಾ ಕೃಷ್ಣೇನೇಚ್ಛಾಶರೀರಿಣಾ ।
ತ್ರಿಃ ಪರಿಕ್ರಮ್ಯ ತಂ ನತ್ವಾ ವಿಮಾನೇನ ದಿವಂ ಯಯೌ ॥ ೪೦ ॥

ದಾರುಕಃ ಕೃಷ್ಣಪದವೀಮನ್ವಿಚ್ಛನ್ನಧಿಗಮ್ಯ ತಾಮ್ ।
ವಾಯುಂ ತುಲಸಿಕಾಮೋದಮಾಘ್ರಾಯಾಭಿಮುಖಂ ಯಯೌ ॥ ೪೧ ॥

ತಂ ತತ್ರ ತಿಗ್ಮದ್ಯುಭಿರಾಯುಧೈರ್ವೃತಂ
ಹ್ಯಶ್ವತ್ಥಮೂಲೇ ಕೃತಕೇತನಂ ಪತಿಮ್ ।
ಸ್ನೇಹಪ್ಲುತಾತ್ಮಾ ನಿಪಪಾತ ಪಾದಯೋಃ
ರಥಾದವಪ್ಲುತ್ಯ ಸಬಾಷ್ಪಲೋಚನಃ ॥ ೪೨ ॥

ಅಪಶ್ಯತಸ್ತ್ವಚ್ಚರಣಾಂಬುಜಂ ಪ್ರಭೋ
ದೃಷ್ಟಿಃ ಪ್ರನಷ್ಟಾ ತಮಸಿ ಪ್ರವಿಷ್ಟಾ ।
ದಿಶೋ ನ ಜಾನೇ ನ ಲಭೇ ಚ ಶಾಂತಿಂ
ಯಥಾ ನಿಶಾಯಾಮುಡುಪೇ ಪ್ರನಷ್ಟೇ ॥ ೪೩ ॥

ಇತಿ ಬ್ರುವತಿ ಸೂತೇ ವೈ ರಥೋ ಗರುಡಲಾಂಛನಃ ।
ಖಮುತ್ಪಪಾತ ರಾಜೇಂದ್ರ ಸಾಶ್ವಧ್ವಜ ಉದೀಕ್ಷತಃ ॥ ೪೪ ॥

ತಮನ್ವಗಚ್ಛನ್ ದಿವ್ಯಾನಿ ವಿಷ್ಣುಪ್ರಹರಣಾನಿ ಚ ।
ತೇನಾತಿವಿಸ್ಮಿತಾತ್ಮಾನಂ ಸೂತಮಾಹ ಜನಾರ್ದನಃ ॥ ೪೫ ॥

ಗಚ್ಛ ದ್ವಾರವತೀಂ ಸೂತ ಜ್ಞಾತೀನಾಂ ನಿಧನಂ ಮಿಥಃ ।
ಸಂಕರ್ಷಣಸ್ಯ ನಿರ್ಯಾಣಂ ಬಂಧುಭ್ಯೋ ಬ್ರೂಹಿ ಮದ್ದಶಾಮ್ ॥ ೪೬ ॥

ದ್ವಾರಕಾಯಾಂ ಚ ನ ಸ್ಥೇಯಂ ಭವದ್ಭಿಶ್ಚ ಸ್ವಬಂಧುಭಿಃ ।
ಮಯಾ ತ್ಯಕ್ತಾಂ ಯದುಪುರೀಂ ಸಮುದ್ರಃ ಪ್ಲಾವಯಿಷ್ಯತಿ ॥ ೪೭ ॥

ಸ್ವಂ ಸ್ವಂ ಪರಿಗ್ರಹಂ ಸರ್ವೇ ಆದಾಯ ಪಿತರೌ ಚ ನಃ ।
ಅರ್ಜುನೇನಾವಿತಾಃ ಸರ್ವೇ ಇಂದ್ರಪ್ರಸ್ಥಂ ಗಮಿಷ್ಯಥ ॥ ೪೮ ॥

ತ್ವಂ ತು ಮದ್ಧರ್ಮಮಾಸ್ಥಾಯ ಜ್ಞಾನನಿಷ್ಠ ಉಪೇಕ್ಷಕಃ ।
ಮನ್ಮಾಯಾರಚನಾಮೇತಾಂ ವಿಜ್ಞಾಯೋಪಶಮಂ ವ್ರಜ ॥ ೪೯ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** – ಜರಾವ್ಯಾಧನೇ! ಹೆದರಬೇಡ, ಮೇಲೇಳು. ನೀನು ನನಗೆ ಇಷ್ಟವಾದುದನ್ನೇ ಮಾಡಿರುವೆ. ನನ್ನ ಅಜ್ಞೆಯಿಂದ ನೀನು ದೊಡ್ಡ-ದೊಡ್ಡ ಪುಣ್ಯಾತ್ಮರಿಗೆ ದೊರಕುವಂತಹ ಸ್ವರ್ಗಕ್ಕೆ ಹೋಗಿ ವಾಸಿಸು. ॥ ೩೯ ॥

**ಶ್ರೀಶುಕಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನು ತನ್ನ ಇಚ್ಛೆಯಿಂದಲೇ ಶರೀರವನ್ನು ಧರಿಸಿದ್ದನು. ಅವನು ಜರಾವ್ಯಾಧನಿಗೆ ಹೀಗೆ ಅಪ್ಪಣೆ ಮಾಡಿದಾಗ ಅವನು ಭಗವಂತನಿಗೆ ಮೂರು ಪ್ರದಕ್ಷಿಣೆ ಬಂದು, ನಮಸ್ಕರಿಸಿ, ವಿಮಾನವನ್ನು ಹತ್ತಿ ದಿವ್ಯಲೋಕಕ್ಕೆ ಹೊರಟು ಹೋದನು. ॥ ೪೦ ॥ ಭಗವಾನ್ ಶ್ರೀಕೃಷ್ಣನ ಸಾರಥಿ ದಾರುಕನು ಅವನನ್ನು ಹುಡುಕುತ್ತಾ, ಅವನು ಧರಿಸಿದ ತುಲಸೀಮಾಲೆಯ ಪರಿಮಳದ ಓಘವನ್ನು ಹಿಡಿದು, ಶ್ರೀಕೃಷ್ಣನಿರುವ ಸ್ಥಳವನ್ನು ಗುರುತಿಸಿ ಅಲ್ಲಿಗೆ ಬಂದು ಸೇರಿದನು. ॥ ೪೧ ॥ ದಾರುಕನು ಅಲ್ಲಿಗೆ ಹೋಗಿ ನೋಡಿದನು – ಭಗವಾನ್ ಶ್ರೀಕೃಷ್ಣನು ಅರಳೀಮರದ ಕೆಳಗೆ ಕುಳಿತಿರುವನು. ಸಹಿಸಲಸಾಧ್ಯವಾದ ತೇಜಸ್ಸಿನಿಂದ ಕೂಡಿದ ಆಯುಧಗಳು ಮೂರ್ತಿಮಂತರಾಗಿ ಅವನ ಸೇವೆಯಲ್ಲಿ ನಿರತವಾಗಿವೆ. ಅವನನ್ನು ನೋಡಿ ದಾರುಕನ ಹೃದಯದಲ್ಲಿ ಪ್ರೇಮದ ನೆರೆಯೇ ಬಂದಂತಾಯಿತು. ಕಣ್ಣುಗಳಿಂದ ಅಶ್ರುಗಳು ಧಾರಾಕಾರವಾಗಿ ಹರಿದವು. ರಥದಿಂದ ಹಾರಿ ಭಗವಂತನ ಚರಣದಲ್ಲಿ ಕುಸಿದು ಬಿದ್ದನು. ॥ ೪೨ ॥ ದಾರುಕನು ಭಗವಂತನಲ್ಲಿ – ಸ್ವಾಮಿ! ರಾತ್ರಿಯಲ್ಲಿ ಚಂದ್ರನು ಮರೆಯಾದಾಗ ದಿಕ್ಕುಗಳ ಅರಿವು ಆಗದೆ, ಅಂಧಕಾರದಿಂದ ಏನೂ ಕಾಣದಂತೆಯೇ ನಿನ್ನ ಈ ಚರಣ ಕಮಲಗಳನ್ನು ನೋಡದೆ ನನಗೆ ಎಲ್ಲೆಡೆಗಳಲ್ಲಿ ಕತ್ತಲೆಯೇ ಕಂಡುಬರುತ್ತದೆ. ನನಗೆ ದಿಕ್ಕುಗಳ ಜ್ಞಾನವಿಲ್ಲ, ಹೃದಯದಲ್ಲಿ ಶಾಂತಿಯೂ ಇಲ್ಲ ಎಂದು ಪ್ರಾರ್ಥಿಸಿದನು. ॥ ೪೩ ॥ ಪರೀಕ್ಷಿತನೇ! ದಾರುಕನು ಹೀಗೆ ಹೇಳುತ್ತಿರುವಂತೆ ಅವನ ಇದಿರಿನಲ್ಲೇ ಭಗವಂತನ ಗರುಡಧ್ವಜ ರಥವು, ಪತಾಕೆ, ಕುದುರೆಗಳೊಂದಿಗೆ ಆಕಾಶಕ್ಕೆ ಹಾರಿ ಹೋಯಿತು. ॥ ೪೪ ॥ ಅದರ ಬೆನ್ನಲ್ಲೇ ಭಗವಂತನ ದಿವ್ಯ ಆಯುಧಗಳೂ ಹೊರಟುಹೋದವು. ಇದೆಲ್ಲವನ್ನು ನೋಡಿದಾಗ ದಾರುಕನಿಗೆ ಆಶ್ಚರ್ಯದ ಸೀಮೆಯೇ ಉಳಿಯಲಿಲ್ಲ. ಆಗ ಭಗವಂತನು ಅವನಲ್ಲಿ ಹೇಳಿದನು. ॥ ೪೫ ॥ ದಾರುಕನೇ! ಈಗ ನೀನು ದ್ವಾರಕೆಗೆ ಹೊರಟುಹೋಗು. ಅಲ್ಲಿ ಯದುವಂಶೀಯರ ಪಾರಸ್ಪರಿಕ ಸಂಹಾರ, ಅಣ್ಣ ಬಲರಾಮನ ಪರಮಗತಿ ಮತ್ತು ನನ್ನ ಸ್ವಧಾಮಗಮನದ ವಾರ್ತೆಯನ್ನು ಎಲ್ಲರಿಗೆ ಹೇಳು. ॥ ೪೬ ॥ ಈಗ ನೀವೆಲ್ಲರೂ ನಿಮ್ಮ-ನಿಮ್ಮ ಪರಿವಾರಗಳೊಂದಿಗೆ ದ್ವಾರಕೆಯಲ್ಲಿ ಇರಬಾರದು. ನಾನು ಇಲ್ಲದಿರುವುದರಿಂದ ಸಮುದ್ರವು ಆ ನಗರಿಯನ್ನು ಮುಳುಗಿಸಿಬಿಡುತ್ತದೆ. ॥ ೪೭ ॥ ಎಲ್ಲ ಜನರು ತಮ್ಮ-ತಮ್ಮ ಧನ-ಸಂಪತ್ತು, ಕುಟುಂಬಸಹಿತ, ನನ್ನ ತಂದೆ-ತಾಯಿಯರನ್ನು ಕರಕೊಂಡು ಅರ್ಜುನನ ಸಂರಕ್ಷಣೆಯಲ್ಲಿ ಇಂದ್ರಪ್ರಸ್ಥಕ್ಕೆ ಹೋಗಿರಿ. ॥ ೪೮ ॥ ದಾರುಕನೇ! ನೀನು ನನ್ನ ಮೂಲಕ ಉಪದೇಶಿಸಲ್ಪಟ್ಟ ಭಾಗವತ ಧರ್ಮವನ್ನು ಆಶ್ರಯಿಸು. ಜ್ಞಾನನಿಷ್ಠನಾಗಿ, ಎಲ್ಲವುಗಳಿಂದ ನಿರಪೇಕ್ಷನಾಗು. ಈ ದೃಶ್ಯವನ್ನು ನನ್ನ ಮಾಯೆಯ ರಚನೆ ಎಂದು ತಿಳಿದು ಶಾಂತನಾಗು. ॥ ೪೯ ॥

ಇತ್ಯುಕ್ತಸ್ತಂ ಪರಿಕ್ರಮ್ಯ ನಮಸ್ಕೃತ್ಯ ಪುನಃ ಪುನಃ ।
ತತ್ಪಾದೌ ಶೀರ್ಷ್ಣ್ಯುಪಾಧಾಯ ದುರ್ಮನಾಃ ಪ್ರಯಯೌ ಪುರೀಮ್ ॥ ೫೦ ॥

ಭಗವಂತನ ಈ ಆದೇಶವನ್ನು ಪಡೆದು ದಾರುಕನು ಭಗವಂತನಿಗೆ ಪ್ರದಕ್ಷಿಣೆಮಾಡಿ, ಅವನ ಚರಣಕಮಲಗಳಲ್ಲಿ ತನ್ನ ಶಿರಸ್ಸನ್ನಿಟ್ಟು ಪದೇ-ಪದೇ ನಮಸ್ಕರಿಸಿದನು. ಅನಂತರ ಖಿನ್ನವಾದ ಮನಸ್ಸಿನಿಂದ ದ್ವಾರಕೆಗೆ ಹೊರಟುಹೋದನು. ॥ ೫೦ ॥

ಮೂವತ್ತನೆಯ ಅಧ್ಯಾಯವು ಮುಗಿಯಿತು. ॥ ೩೦ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಏಕಾದಶ ಸ್ಕಂಧೇ ತ್ರಿಂಶೋಽಧ್ಯಾಯಃ ॥ ೩೦ ॥

# ಮೂವತ್ತೊಂದನೆಯ ಅಧ್ಯಾಯ

## ಶ್ರೀಭಗವಂತನ ಸ್ವಧಾಮಗಮನ

ಶ್ರೀಶುಕ ಉವಾಚ

ಅಥ ತತ್ರಾಗಮದ್ಬ್ರಹ್ಮಾ ಭವಾನ್ಯಾ ಚ ಸಮಂ ಭವಃ ।
ಮಹೇಂದ್ರಪ್ರಮುಖಾ ದೇವಾ ಮುನಯಃ ಸಪ್ರಜೇಶ್ವರಾಃ ॥ ೧ ॥

ಪಿತರಃ ಸಿದ್ಧಗಂಧರ್ವಾ ವಿದ್ಯಾಧರಮಹೋರಗಾಃ ।
ಚಾರಣಾ ಯಕ್ಷರಕ್ಷಾಂಸಿ ಕಿನ್ನರಾಪ್ಸರಸೋ ದ್ವಿಜಾಃ ॥ ೨ ॥

ದ್ರಷ್ಟುಕಾಮಾ ಭಗವತೋ ನಿರ್ಯಾಣಂ ಪರಮೋತ್ಸುಕಾಃ ।
ಗಾಯಂತಶ್ಚ ಗೃಣಂತಶ್ಚ ಶೌರೇಃ ಕರ್ಮಾಣಿ ಜನ್ಮ ಚ ॥ ೩ ॥

ವವೃಷುಃ ಪುಷ್ಪವರ್ಷಾಣಿ ವಿಮಾನಾವಲಿಭಿರ್ನಭಃ ।
ಕುರ್ವಂತಃ ಸಂಕುಲಂ ರಾಜನ್ಭಕ್ತ್ಯಾ ಪರಮಯಾ ಯುತಾಃ ॥ ೪ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿತರಾಜನೇ! ದಾರುಕನು ಹೊರಟುಹೋದ ಮೇಲೆ ಬ್ರಹ್ಮದೇವರು, ಶಿವ ಪಾರ್ವತಿಯರು, ಇಂದ್ರಾದಿಲೋಕಪಾಲರು, ಮರೀಚಿ ಆದಿ ಪ್ರಜಾಪತಿಗಳು, ದೊಡ್ಡ-ದೊಡ್ಡ ಋಷಿ-ಮುನಿಗಳು, ಸಿದ್ಧರು, ಪಿತೃಗಳು, ಗಂಧರ್ವರು, ವಿದ್ಯಾಧರರು, ನಾಗರು, ಚಾರಣರು, ಯಕ್ಷ-ರಾಕ್ಷಸರು, ಕಿನ್ನರರು ; ಅಪ್ಸರೆಯರು, ಗರುಡ ಆದಿ ಪಕ್ಷಿಗಳು ಹಾಗೂ ಮೈತ್ರೇಯರೇ ಆದಿ ಬ್ರಾಹ್ಮಣರು ಭಗವಾನ್ ಶ್ರೀಕೃಷ್ಣನ ಪರಮಧಾಮ ಪ್ರಸ್ಥಾನವನ್ನು ನೋಡಲು ತುಂಬಾ ಉತ್ಸುಕತೆಯಿಂದ ಅಲ್ಲಿಗೆ ಬಂದರು. ಅವರೆಲ್ಲರೂ ಭಗವಾನ್ ಶ್ರೀಕೃಷ್ಣನ ಜನ್ಮ ಮತ್ತು ಲೀಲೆಗಳನ್ನು ಹಾಡುತ್ತಾ, ವರ್ಣಿಸುತ್ತಿದ್ದರು. ಅವರ ವಿಮಾನಗಳಿಂದ ಆಕಾಶವಿಡೀ ತುಂಬಿಹೋಗಿತ್ತು. ಅವರು ತುಂಬುಭಕ್ತಿಯಿಂದ ಭಗವಂತನ ಮೇಲೆ ಪುಷ್ಪವೃಷ್ಟಿ ಮಾಡುತ್ತಿದ್ದರು. ॥ ೧-೪ ॥

ಭಗವಾನ್ಪಿತಾಮಹಂ ವೀಕ್ಷ್ಯ ವಿಭೂತೀರಾತ್ಮನೋ ವಿಭುಃ ।
ಸಂಯೋಜ್ಯಾತ್ಮನಿ ಚಾತ್ಮಾನಂ ಪದ್ಮನೇತ್ರೇ ನ್ಯಮೀಲಯತ್ ॥ ೫ ॥

ಸರ್ವವ್ಯಾಪಕ ಭಗವಾನ್ ಶ್ರೀಕೃಷ್ಣನು ತನ್ನದೇ ವಿಭೂತಿಸ್ವರೂಪ ಲೋಕಪಿತಾಮಹ ಬ್ರಹ್ಮನನ್ನು ಮತ್ತು ಬೇರೆ ದೇವತೆಗಳನ್ನು ಋಷಿ-ಮುನೀಶ್ವರರನ್ನು ನೋಡಿ ತನ್ನ ಆತ್ಮಸ್ವರೂಪದಲ್ಲಿ ಸ್ಥಿತನಾಗಿ, ಕಮಲದಂತಿರುವ ಕಣ್ಣುಗಳನ್ನು ಮುಚ್ಚಿಕೊಂಡನು. ॥ ೫ ॥

ಲೋಕಾಭಿರಾಮಾಂ ಸ್ವತನುಂ ಧಾರಣಾಧ್ಯಾನಮಂಗಲಮ್ ।
ಯೋಗಧಾರಣಯಾಽಽಗ್ನೇಯ್ಯಾಽದಗ್ಧ್ವಾ ಧಾಮಾವಿಶತ್ಸ್ವಕಮ್ ॥ ೬ ॥

ದಿವಿ ದುಂದುಭಯೋ ನೇದುಃ ಪೇತುಃ ಸುಮನಸಶ್ಚ ಖಾತ್ ।
ಸತ್ಯಂ ಧರ್ಮೋ ಧೃತಿರ್ಭೂಮೇಃ ಕೀರ್ತಿಃ ಶ್ರೀಶ್ಚಾನು ತಂ ಯಯುಃ ॥ ೭ ॥

ಭಗವಂತನ ಮಂಗಲಮಯ ಶ್ರೀವಿಗ್ರಹವು ಉಪಾಸಕರಿಗಾಗಿ ಧಾರಣೆ ಮತ್ತು ಧ್ಯಾನದ ಪರಮ ಮಂಗಲಮಯ ಆಶ್ರಯವಾಗಿದೆ. ಸಮಸ್ತ ಲೋಕಗಳ ಆಶ್ರಯವೂ ಆಗಿದೆ ಹಾಗೂ ಅವುಗಳಿಗೆ ಆನಂದವನ್ನು ಪ್ರದಾನಮಾಡುವುದಾಗಿದೆ. ಆದ್ದರಿಂದ ಭಗವಂತನು ತನ್ನ ಆ ಮಂಗಲಮಯ ವಿಗ್ರಹವನ್ನು ಯೋಗಧಾರಣೆಯ ಅಗ್ನಿಯಿಂದ ಸುಡದೆಯೇ ಸಶರೀರವಾಗಿ ತನ್ನ ಧಾಮಕ್ಕೆ ತೆರಳಿದನು. ॥ ೬ ॥ ಆಗ ಸ್ವರ್ಗದಲ್ಲಿ ದೇವ ದುಂದುಭಿಗಳು ಮೊಳಗಿದವು. ಆಕಾಶದಿಂದ ಪುಷ್ಪವೃಷ್ಟಿ ಆಗತೊಡಗಿತು. ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನ ಹಿಂದೆ-ಹಿಂದೆಯೇ ಭೂಮಿಯಿಂದ ಸತ್ಯ, ಧರ್ಮ, ಧೃತಿ, ಕೀರ್ತಿ ಮತ್ತು ಶ್ರೀದೇವಿ ಹೊರಟುಹೋದರು. ॥ ೭ ॥

ದೇವಾದಯೋ ಬ್ರಹ್ಮಮುಖ್ಯಾ ನ ವಿಶಂತಂ ಸ್ವಧಾಮನಿ ।
ಅವಿಜ್ಞಾತಗತಿಂ ಕೃಷ್ಣಂ ದದೃಶುಶ್ಚಾತಿವಿಸ್ಮಿತಾಃ ॥ ೮ ॥

ಸೌದಾಮನ್ಯಾ ಯಥಾಽಽಕಾಶೇ ಯಾಂತ್ಯಾ ಹಿತ್ವಾಭ್ರಮಂಡಲಮ್ ।
ಗತಿರ್ನ ಲಕ್ಷ್ಯತೇ ಮರ್ತ್ಯೈಸ್ತಥಾ ಕೃಷ್ಣಸ್ಯ ದೈವತೈಃ ॥ ೯ ॥

ಬ್ರಹ್ಮರುದ್ರಾದಯಸ್ತೇ ತು ದೃಷ್ಟ್ವಾ ಯೋಗಗತಿಂ ಹರೇಃ ।
ವಿಸ್ಮಿತಾಸ್ತಾಂ ಪ್ರಶಂಸಂತಃ ಸ್ವಂ ಸ್ವಂ ಲೋಕಂ ಯಯುಸ್ತದಾ ॥ ೧೦ ॥

ರಾಜನ್ ಪರಸ್ಯ ತನುಭೃಜ್ಜನನಾಪ್ಯಯೇಹಾ
ಮಾಯಾವಿಡಂಬನಮವೇಹಿ ಯಥಾ ನಟಸ್ಯ ।
ಸೃಷ್ಟ್ವಾಽಽತ್ಮನೇದಮನುವಿಶ್ಯ ವಿಹೃತ್ಯ ಚಾಂತೇ
ಸಂಹೃತ್ಯ ಚಾತ್ಮಮಹಿಮೋಪರತಃ ಸ ಆಸ್ತೇ ॥ ೧೧ ॥

ಮರ್ತ್ಯೇನ ಯೋ ಗುರುಸುತಂ ಯಮಲೋಕನೀತಂ
ತ್ವಾಂ ಚಾನಯಚ್ಛರಣದಃ ಪರಮಾಸ್ತ್ರದಗ್ಧಮ್ ।
ಜಿಗ್ಯೇಽಂತಕಾಂತಕಮಪೀಶಮಸಾವನೀಶಃ
ಕಿಂ ಸ್ವಾವನೇ ಸ್ವರನಯನ್ಮೃಗಯುಂ ಸದೇಹಮ್ ॥ ೧೨ ॥

ತಥಾಪ್ಯಶೇಷಸ್ಥಿತಿಸಂಭವಾಪ್ಯಯೇ-
ಷ್ವನನ್ಯಹೇತುರ್ಯದಶೇಷಶಕ್ತಿಧೃಕ್ ।
ನೈಚ್ಛತ್ಪ್ರಣೇತುಂ ವಪುರತ್ರ ಶೇಷಿತಂ
ಮರ್ತ್ಯೇನ ಕಿಂ ಸ್ವಸ್ಥಗತಿಂ ಪ್ರದರ್ಶಯನ್ ॥ ೧೩ ॥

ಭಗವಾನ್ ಶ್ರೀಕೃಷ್ಣನ ಗತಿಯು ಮನ, ವಚನಗಳಿಗೆ ಅತೀತವಾಗಿದೆ. ಆದರಿಂದಲೇ ಭಗವಂತನು ತನ್ನ ಧಾಮಕ್ಕೆ ಪ್ರವೇಶಿಸುವಾಗ ಬ್ರಹ್ಮಾದಿ ದೇವತೆಗಳಿಂದಲೂ ಕೂಡ ಅದನ್ನು ನೋಡಲಾಗಲಿಲ್ಲ. ಈ ಘಟನೆಯಿಂದ ಅವರಿಗೆ ಭಾರೀ ಆಶ್ಚರ್ಯವಾಯಿತು. ॥ ೮ ॥ ಆಕಾಶದಲ್ಲಿ ಮಿಂಚು ಮೋಡಗಳಲ್ಲಿ ಕಾಣಿಸಿಕೊಂಡು ಕೂಡಲೇ ಆಕಾಶದಲ್ಲೇ ವಿಲೀನವಾಗಿ ಹೋಗುತ್ತದೆ. ಅದನ್ನು ಯಾವ ಮನುಷ್ಯನಿಂದಲೂ ನೋಡಲಾಗುವುದಿಲ್ಲ. ಹಾಗೆಯೇ ಭಗವಾನ್ ಶ್ರೀಕೃಷ್ಣನ ಸ್ವಧಾಮಗಮನದ ಲೀಲೆಯನ್ನು ನೋಡಲು ಅಲ್ಲಿ ನೆರೆದ ದೊಡ್ಡ-ದೊಡ್ಡ ದೇವತೆಗಳು ಋಷಿಗಳು ಮುನಿಗಳು ಯಾರಿಂದಲೂ ನೋಡಲಾಗಲಿಲ್ಲ. ॥ ೯ ॥ ಬ್ರಹ್ಮಾ, ಭಗವಾನ್ ಶಂಕರ ಮುಂತಾದ ದೇವತೆಗಳು ಭಗವಂತನ ಈ ಪರಮಯೋಗಮಯ ಗತಿಯನ್ನು ನೋಡಿ ಬಹು ವಿಸ್ಮಯಗೊಂಡು ಅವನನ್ನು ಸ್ತುತಿಸುತ್ತಾ ತಮ್ಮ-ತಮ್ಮ ಲೋಕಗಳಿಗೆ ತೆರಳಿದರು. ॥ ೧೦ ॥ ಪರೀಕ್ಷಿತನೇ! ನಟನಾದವನು ಅನೇಕ ವಿಧದ ಭೂಮಿಕೆಗಳನ್ನು ಧರಿಸಿದರೂ ಅವೆಲ್ಲವುಗಳಿಂದ ನಿರ್ಲೇಪನಾಗಿಯೇ ಇರುವಂತೆ ಭಗವಂತನು ಮನುಷ್ಯರಂತೆ ಅವತರಿಸುವುದು, ಮತ್ತೆ ಅದನ್ನು ತಿರೋಹಿತಗೊಳಿಸುವುದು, ನಾನಾ ರೀತಿಯ ಲೀಲೆಗಳನ್ನು ನಡೆಸುವುದು, ಇದೆಲ್ಲವೂ ಅವನ ಮಾಯಾವಿಲಾಸಮಾತ್ರವಾಗಿದೆ – ಅಭಿನಯಮಾತ್ರವಾಗಿದೆ. ಅವನು ಸ್ವತಃ ಈ ಜಗತ್ತನ್ನು ಸೃಷ್ಟಿಸಿ, ಇದರಲ್ಲಿ ಪ್ರವೇಶಿಸಿ ವಿಹರಿಸುತ್ತಾನೆ. ಕೊನೆಗೆ ಸಂಹಾರ ಲೀಲೆಗಳನ್ನು ಗೈದು ಎಲ್ಲದರಿಂದಲೂ ಉಪರತನಾಗಿ ತನ್ನ ಅನಂತ ಮಹಿಮಾಮಯ ಸ್ವರೂಪದಲ್ಲೇ ಸ್ಥಿತನಾಗಿರುತ್ತಾನೆ. ॥೧೧॥ ಪ್ರಿಯ ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನು ಯಮಪುರಕ್ಕೆ ಹೋಗಿ ಗುರುಪುತ್ರರನ್ನು ಮರ್ತ್ಯಶರೀರದಿಂದಲೇ ತಂದನು. ಬ್ರಹ್ಮಾಸ್ತ್ರದಿಂದ ನಿನ್ನ ಶರೀರವು ಸುಟ್ಟುಹೋದಾಗ ಅದನ್ನು ಅವನು ಜೀವಂತವಾಗಿಸಿದನು. ಅವನು ಕಾಲಕ್ಕೂ ಮಹಾಕಾಲನಾದ ಶಂಕರನನ್ನು ಯುದ್ಧದಲ್ಲಿ ಗೆದ್ದುಕೊಂಡನು. ಜರಾವ್ಯಾಧನು ಇಷ್ಟೊಂದು ಭಯಂಕರವಾದ ಅಪರಾಧಮಾಡಿದರೂ, ಅವನ ಅಪರಾಧವನ್ನು ಕ್ಷಮಿಸಿ ಅವನನ್ನು ಸಶರೀರದಿಂದ ಸ್ವರ್ಗಕ್ಕೆ ಕಳಿಸಿಬಿಟ್ಟನು. ಹಾಗಿರುವಾಗ ಸರ್ವಸಮರ್ಥ ಪ್ರಭು ಶ್ರೀಕೃಷ್ಣನು ತನ್ನ ಶರೀರವನ್ನು ಇಲ್ಲಿ ಇರಿಸಲಾರನೇನು ? ಅವಶ್ಯವಾಗಿ ಇರಿಸುತ್ತಿದ್ದನು. ಇದರಲ್ಲಿ ಆಶ್ಚರ್ಯವೇನಿದೆ ? ॥ ೧೨ ॥ ಭಗವಾನ್ ಶ್ರೀಕೃಷ್ಣನು ಸಮಸ್ತ ಜಗತ್ತಿನ ಉತ್ಪತ್ತಿ, ಸ್ಥಿತಿ, ಸಂಹಾರಗಳ ನಿರಪೇಕ್ಷ ಕಾರಣನಾಗಿದ್ದಾನೆ. ಸಮಸ್ತ ಶಕ್ತಿಗಳನ್ನು ಧರಿಸುವಂತಹವನು. ಹಾಗಿರುವಾಗ ತನ್ನ ಶರೀರವನ್ನು ಇರಿಸುವುದು ಅವನಿಗೆ ಅಶಕ್ಯವಾಗಿತ್ತೆ? ಭಗವಂತನು ಸಮಸ್ತ ಯಾದವರ ಸಂಹಾರವಾದ ಬಳಿಕ ತನ್ನ ಶರೀರವನ್ನು ಇರಿಸಿಕೊಳ್ಳಲು ಇಚ್ಛಿಸಲಿಲ್ಲ. (ಇಷ್ಟೊಂದು ವಿಶಾಲ ದ್ವಾರಕೆಯ ಐಶ್ವರ್ಯದ ಕಡೆಗೆ ಹಾಗೂ ತನ್ನ ಕುಟುಂಬದ ಕಡೆಗೆ ಪೂರ್ಣ ಅನಾಸಕ್ತನಾಗಿ ತನ್ನ ದಿವ್ಯಧಾಮಕ್ಕೆ ಹೊರಟುಹೋದನು.) ಮನುಷ್ಯಶರೀರದ ಮೂಲಕ ಯೋಗಿಯು ಹೇಗೆ ದಿವ್ಯಧಾಮದ ಯಾತ್ರೆ ಮಾಡಬೇಕು ? ಈ ಆಚರಣೆಯನ್ನು ಕಲಿಸಲಿಕ್ಕಾಗಿ

ಯ ಏತಾಂ ಪ್ರಾತರುತ್ಥಾಯ ಕೃಷ್ಣಸ್ಯ ಪದವೀಂ ಪರಾಮ್ ।
ಪ್ರಯತಃ ಕೀರ್ತಯೇದ್ಭಕ್ತ್ಯಾ ತಾಮೇವಾಪ್ನೋತ್ಯನುತ್ತಮಾಮ್
॥ ೧೪ ॥

ದಾರುಕೋ ದ್ವಾರಕಾಮೇತ್ಯ ವಸುದೇವೋಗ್ರಸೇನಯೋಃ ।
ಪತಿತ್ವಾ ಚರಣಾವಸ್ರೈರ್ನ್ಯಷಿಂಚತ್ಕೃಷ್ಣವಿಚ್ಯುತಃ
॥ ೧೫ ॥

ಕಥಯಾಮಾಸ ನಿಧನಂ ವೃಷ್ಣೀನಾಂ ಕೃತ್ಸ್ನಶೋ ನೃಪ ।
ತಚ್ಛ್ರುತ್ವೋದ್ವಿಗ್ನಹೃದಯಾ ಜನಾಃ ಶೋಕವಿಮೂರ್ಛಿತಾಃ
॥ ೧೬ ॥

ತತ್ರ ಸ್ಮ ತ್ವರಿತಾ ಜಗ್ಮುಃ ಕೃಷ್ಣವಿಶ್ಲೇಷವಿಹ್ವಲಾಃ ।
ವ್ಯಸವಃ ಶೇರತೇ ಯತ್ರ ಜ್ಞಾತಯೋ ಘ್ನಂತ ಆನನಮ್
॥ ೧೭ ॥

ದೇವಕೀ ರೋಹಿಣೀ ಚೈವ ವಸುದೇವಸ್ತಥಾ ಸುತೌ ।
ಕೃಷ್ಣರಾಮಾವಪಶ್ಯಂತಃ ಶೋಕಾರ್ತಾ ವಿಜಹುಃ ಸ್ಮೃತಿಮ್
॥ ೧೮ ॥

ಪ್ರಾಣಾಂಶ್ಚ ವಿಜಹುಸ್ತತ್ರ ಭಗವದ್ವಿರಹಾತುರಾಃ ।
ಉಪಗುಹ್ಯ ಪತೀಂಸ್ತಾತ ಚಿತಾಮಾರುರುಹುಃ ಸ್ತ್ರಿಯಃ
॥ ೧೯ ॥

ರಾಮಪತ್ನ್ಯಶ್ಚ ತದ್ದೇಹಮುಪಗುಹ್ಯಾಗ್ನಿ ಮಾವಿಶನ್ ।
ವಸುದೇವಪತ್ನ್ಯಸ್ತದ್ಗಾತ್ರಂ ಪ್ರದ್ಯುಮ್ನಾದೀನ್ಹರೇಃ ಸ್ನುಷಾಃ ।
ಕೃಷ್ಣಪತ್ನ್ಯೋಽವಿಶನ್ನಗ್ನಿಂ ರುಕ್ಮಿಣ್ಯಾದ್ಯಾಸ್ತದಾತ್ಮಿಕಾಃ
॥ ೨೦ ॥

ಅರ್ಜುನಃ ಪ್ರೇಯಸಃ ಸಖ್ಯುಃ ಕೃಷ್ಣಸ್ಯ ವಿರಹಾತುರಃ ।
ಆತ್ಮಾನಂ ಸಾಂತ್ವಯಾಮಾಸ ಕೃಷ್ಣಗೀತೈಃ ಸದುಕ್ತಿಭಿಃ
॥ ೨೧ ॥

ಬಂಧೂನಾಂ ನಷ್ಟಗೋತ್ರಾಣಾಮರ್ಜುನಃ ಸಾಂಪರಾಯಿಕಮ್ ।
ಹತಾನಾಂ ಕಾರಯಾಮಾಸ ಯಥಾವದನುಪೂರ್ವಶಃ
॥ ೨೨ ॥

ದ್ವಾರಕಾಂ ಹರಿಣಾ ತ್ಯಕ್ತಾಂ ಸಮುದ್ರೋಽಪ್ಲಾವಯತ್ ಕ್ಷಣಾತ್ ।
ವರ್ಜಯಿತ್ವಾ ಮಹಾರಾಜ ಶ್ರೀಮದ್ಭಗವದಾಲಯಮ್
॥ ೨೩ ॥

ಭಗವಂತನು ಹೀಗೆ ಮಾಡಿರಬಹುದೇ ? ಅರ್ಥಾತ್ ಯೋಗಿಯು ಸಿದ್ಧಿಗಳ ಮೂಲಕ ತನ್ನ ಶರೀರವನ್ನು ಉಳಿಸಿಕೊಳ್ಳಲು ಹಾಗೂ ಸಂಸಾರದಲ್ಲಿ, ಮನೆಯಲ್ಲಿ, ಕುಟುಂಬದಲ್ಲಿ ರಮಮಾಣನಾಗಲು ಇಚ್ಛಿಸಬಾರದು. ಪೂರ್ಣವಾಗಿ ಅನಾಸಕ್ತನಾಗಿ ತನ್ನ ದಿವ್ಯಧಾಮ (ಪರಮಪದ)ದ ಯಾತ್ರೆಯನ್ನು ಕೈಗೊಳ್ಳಬೇಕು. ॥ ೧೩ ॥ ಪ್ರಾತಃ ಕಾಲ ಎದ್ದು ಭಗವಾನ್ ಶ್ರೀಕೃಷ್ಣನ ಪರಮಧಾಮಗಮನದ ಈ ಕಥೆಯನ್ನು ಏಕಾಗ್ರಚಿತ್ತದಿಂದ, ಭಕ್ತಿಯೊಂದಿಗೆ ಕೀರ್ತಿಸುವವನಿಗೆ ಭಗವಂತನ ಆ ಸರ್ವಶ್ರೇಷ್ಠ ಪರಮಪದ ಪ್ರಾಪ್ತಿಯಾಗುವುದು. ॥ ೧೪ ॥

ಇತ್ತ ದಾರುಕನು ಭಗವಾನ್ ಶ್ರೀಕೃಷ್ಣನ ವಿರಹದಿಂದ ವ್ಯಾಕುಲನಾಗಿ ದ್ವಾರಕೆಗೆ ಬಂದನು ಮತ್ತು ವಸುದೇವನ ಹಾಗೂ ಉಗ್ರಸೇನನ ಚರಣಗಳಲ್ಲಿ ಬಿದ್ದು, ಅವನ್ನು ಕಣ್ಣೀರಿನಿಂದ ತೊಳೆದನು. ॥ ೧೫ ॥ ಪರೀಕ್ಷಿತನೇ ! ಅವನು ತನ್ನನ್ನು ಸಾವರಿಸಿಕೊಂಡು ಯದುವಂಶೀಯರ ವಿನಾಶದ ಎಲ್ಲಾ ವಿವರವನ್ನು ತಿಳಿಸಿದನು. ಅದನ್ನು ಕೇಳಿ ಜನರು ತುಂಬಾ ದುಃಖಿತರಾದರು ಮತ್ತು ಶೋಕದಿಂದ ಮೂರ್ಛಿತರಾದರು. ॥ ೧೬ ॥ ಭಗವಾನ್ ಶ್ರೀಕೃಷ್ಣನ ವಿಯೋಗದಿಂದ ವಿಹ್ವಲರಾಗಿ ಆ ಜನರು ತಲೆಚಚ್ಚಿಕೊಳ್ಳುತ್ತಾ, ಅವರ ಬಂಧು-ಬಾಂಧವರು ನಿಷ್ಪ್ರಾಣರಾಗಿ ಬಿದ್ದಲ್ಲಿಗೆ ಕೂಡಲೇ ತಲುಪಿದರು. ॥ ೧೭ ॥

ದೇವಕಿ, ರೋಹಿಣೀ ಮತ್ತು ವಸುದೇವನು ತಮ್ಮ ಪ್ರಿಯ ಪುತ್ರ ಶ್ರೀಕೃಷ್ಣ-ಬಲರಾಮರನ್ನು ಕಾಣದೆ ಶೋಕದಿಂದ ಪೀಡಿತರಾಗಿ ಎಚ್ಚರತಪ್ಪಿದರು. ॥ ೧೮ ॥ ಅವರು ಭಗವದ್ವಿರಹದಿಂದ ವ್ಯಾಕುಲರಾಗಿ ಅಲ್ಲೇ ತಮ್ಮ ಪ್ರಾಣಗಳನ್ನು ಬಿಟ್ಟು ಬಿಟ್ಟರು. ಸ್ತ್ರೀಯರು ತಮ್ಮ-ತಮ್ಮ ಪತಿಗಳ ಶವಗಳನ್ನು ಗುರುತಿಸಿ, ಅವನ್ನು ಹೃದಯಕ್ಕೆ ಒತ್ತಿಕೊಂಡು, ಅವರೊಂದಿಗೆ ಚಿತೆಯನ್ನೇರಿ ಭಸ್ಮವಾಗಿ ಹೋದರು. ॥ ೧೯ ॥ ಬಲರಾಮನ ಪತ್ನಿಯರು ಅವನ ಶರೀರವನ್ನು, ವಸುದೇವನ ಪತ್ನಿಯರು ಅವನ ಶವವನ್ನು, ಭಗವಂತನ ಸೊಸೆಯರು ತಮ್ಮ ಪತಿಗಳ ಶವದೊಂದಿಗೆ ಅಗ್ನಿಪ್ರವೇಶ ಮಾಡಿದರು. ರುಕ್ಮಿಣಿಯೇ ಮೊದಲಾದ ಭಗವಾನ್ ಶ್ರೀಕೃಷ್ಣನ ಪಟ್ಟಮಹಿಷಿಯರು ಜಗತ್ಪತಿಯ ಧ್ಯಾನದಲ್ಲಿ ಮಗ್ನರಾಗಿ ಅಗ್ನಿಪ್ರವೇಶ ಮಾಡಿದರು. ॥ ೨೦ ॥

ಪರೀಕ್ಷಿತನೇ! ಅರ್ಜುನನು ತನ್ನ ಪರಮ ಪ್ರಿಯತಮನೂ, ಸಖನೂ ಆದ ಭಗವಾನ್ ಶ್ರೀಕೃಷ್ಣನ ವಿರಹದಿಂದ ಮೊದಲಿಗೆನೋ ಅತ್ಯಂತ ವ್ಯಾಕುಲನಾದನು. ಮತ್ತೆ ಅವನು ಶ್ರೀಕೃಷ್ಣನ ಗೀತೋಕ್ತ ಸದುಪದೇಶಗಳನ್ನು ಸ್ಮರಿಸುತ್ತಾ ತನ್ನ ಮನಸ್ಸನ್ನು ಸಮಾಧಾನಗೊಳಿಸಿದನು. ॥ ೨೧ ॥ ಯದುವಂಶದ ಮೃತ ವ್ಯಕ್ತಿಗಳಲ್ಲಿ ಪಿಂಡ ಕೊಡಲು ಯಾರೂ ಇಲ್ಲದ್ದರಿಂದ ಶ್ರಾದ್ಧಾದಿಗಳನ್ನು ಅರ್ಜುನನೇ ಕ್ರಮವಾಗಿ, ವಿಧಿಪೂರ್ವಕವಾಗಿ ಮಾಡಿಸಿದನು. ॥ ೨೨ ॥ ಮಹಾರಾಜನೇ! ಭಗವಂತನು ಇಲ್ಲದಿದ್ದಾಗ ಸಮುದ್ರವು ಏಕಮಾತ್ರ ಭಗವಾನ್ ಶ್ರೀಕೃಷ್ಣನ ಅರಮನೆಯನ್ನು ಬಿಟ್ಟು ಒಂದೇ ಕ್ಷಣದಲ್ಲಿ ಇಡೀ ದ್ವಾರಕೆಯನ್ನು ಮುಳುಗಿಸಿಬಿಟ್ಟಿತು. ॥ ೨೩ ॥

ನಿತ್ಯಂ ಸಂನಿಹಿತಸ್ತತ್ರ ಭಗವಾನ್ ಮಧುಸೂದನಃ ।
ಸ್ಮೃತ್ವಾಶೇಷಾಶುಭಹರಂ ಸರ್ವಮಂಗಲಮಂಗಲಮ್ ॥ ೨೪ ॥

ಸ್ತ್ರೀಬಾಲವೃದ್ಧಾನಾದಾಯ ಹತಶೇಷಾನ್ ಧನಂಜಯಃ ।
ಇಂದ್ರಪ್ರಸ್ಥಂ ಸಮಾವೇಶ್ಯ ವಜ್ರಂ ತತ್ರಾಭ್ಯಷೇಚಯತ್ ॥ ೨೫ ॥

ಶ್ರುತ್ವಾ ಸುಹೃದ್ವಧಂ ರಾಜನ್ನರ್ಜುನಾತ್ತೇ ಪಿತಾಮಹಾಃ ।
ತ್ವಾಂ ತು ವಂಶಧರಂ ಕೃತ್ವಾ ಜಗ್ಮುಃ ಸರ್ವೇ ಮಹಾಪಥಮ್ ॥ ೨೬ ॥

ಯ ಏತದ್ದೇವದೇವಸ್ಯ ವಿಷ್ಣೋಃ ಕರ್ಮಾಣಿ ಜನ್ಮ ಚ ।
ಕೀರ್ತಯೇಚ್ಛ್ರದ್ಧಯಾ ಮರ್ತ್ಯಃ ಸರ್ವಪಾಪೈಃ ಪ್ರಮುಚ್ಯತೇ ॥ ೨೭ ॥

ಇತ್ಥಂ ಹರೇರ್ಭಗವತೋ ರುಚಿರಾವತಾರ-
ವೀರ್ಯಾಣಿ ಬಾಲಚರಿತಾನಿ ಚ ಶಂತಮಾನಿ ।
ಅನ್ಯತ್ರ ಚೇಹ ಚ ಶ್ರುತಾನಿ ಗೃಣನ್ಮನುಷ್ಯೋ
ಭಕ್ತಿಂ ಪರಾಂ ಪರಮಹಂಸಗತೌ ಲಭೇತ ॥ ೨೮ ॥

ಭಗವಾನ್ ಶ್ರೀಕೃಷ್ಣನು ಅಲ್ಲಿ ಈಗಲೂ ಸದಾ-ಸರ್ವದಾ ವಾಸಿಸುತ್ತಿರುವನು. ಆ ಸ್ಥಾನದ ಸ್ಮರಣೆಮಾತ್ರದಿಂದಲೇ ಎಲ್ಲ ಪಾಪ ತಾಪಗಳು ನಾಶವಾಗಿ, ಎಲ್ಲ ಮಂಗಲಗಳಿಗೂ ಮಂಗಲ ಉಂಟಾಗುವುದು. ॥ ೨೪ ॥ ಪ್ರಿಯ ಪರೀಕ್ಷಿತನೇ! ಪಿಂಡ ದಾನಾದಿಗಳ ಬಳಿಕ ಅಲ್ಲಿ ಉಳಿದಿದ್ದ ಸ್ತ್ರೀಯರೂ, ಬಾಲಕರು, ವೃದ್ಧರೇ ಮುಂತಾದವರನ್ನು ಕರೆದುಕೊಂಡು ಅರ್ಜುನನು ಇಂದ್ರ ಪ್ರಸ್ಥಕ್ಕೆ ಬಂದನು. ಅಲ್ಲಿ ಎಲ್ಲರಿಗೂ ಯಥಾಯೋಗ್ಯ ವಸತಿ ಏರ್ಪಡಿಸಿ ಮಥುರೆಯಲ್ಲಿ ಅನಿರುದ್ಧನ ಪುತ್ರ ವಜ್ರನಾಭನಿಗೆ ರಾಜ್ಯಾಭಿಷೇಕ ಮಾಡಿದನು. ॥ ೨೫ ॥ ರಾಜನೇ! ನಿನ್ನ ಪಿತಾಮಹನಾದ ಯುಧಿಷ್ಠಿರ ಮೊದಲಾದ ಪಾಂಡವರಿಗೆ ಯದುವಂಶೀಯರ ಸಂಹಾರವಾಯಿತು ಎಂಬುದು ಅರ್ಜುನನಿಂದಲೇ ತಿಳಿಯಿತು. ಆಗ ಅವರು ತನ್ನ ವಂಶಧರ ನಿನ್ನನ್ನು ರಾಜ್ಯಕ್ಕೆ ಪಟ್ಟಾಭಿಷೇಕಗೈದು ಹಿಮಾಲಯದ ವೀರಯಾತ್ರೆಯನ್ನು ಕೈಗೊಂಡರು. ॥ ೨೬ ॥

ನಾನು ನಿನಗೆ ದೇವತೆಗಳಿಗೂ ಆರಾಧ್ಯನಾದ ಭಗವಾನ್ ಶ್ರೀಕೃಷ್ಣನ ಜನ್ಮಲೀಲೆ ಮತ್ತು ಕರ್ಮಲೀಲೆಗಳನ್ನು ಹೇಳಿದೆ. ಶ್ರದ್ಧೆಯಿಂದೊಡಗೂಡಿ ಇದನ್ನು ಕೀರ್ತಿಸುವ ಮನುಷ್ಯನು ಸಮಸ್ತ ಪಾಪಗಳಿಂದ ಮುಕ್ತನಾಗಿ ಹೋಗುತ್ತಾನೆ. ॥ ೨೭ ॥ ಪರೀಕ್ಷಿತನೇ! ಈ ಪ್ರಕಾರ ಭಕ್ತಭಯಹಾರಿ ನಿಖಿಲ ಸೌಂದರ್ಯ-ಮಾಧುರ್ಯ ನಿಧಿ ಶ್ರೀಕೃಷ್ಣಚಂದ್ರನ ಅವತಾರ ಸಂಬಂಧೀ ರುಚಿರ ಪರಾಕ್ರಮ ಮತ್ತು ಈ ಶ್ರೀಮದ್ಭಾಗವತಮಹಾಪುರಾಣದಲ್ಲಿ ಹಾಗೂ ಬೇರೆ ಪುರಾಣಗಳಲ್ಲಿ ವರ್ಣಿತ ಪರಮಾನಂದಮಯ ಬಾಲಲೀಲೆ, ಕೈಶೋರಲೀಲೆ ಮುಂತಾದವುಗಳನ್ನು ಸಂಕೀರ್ತನೆ ಮಾಡುವ ಮನುಷ್ಯನಿಗೆ ಪರಮಹಂಸ ಮುನೀಂದ್ರರ ಅಂತಿಮ ಪ್ರಾಪ್ತವ್ಯವಾದ ಶ್ರೀಕೃಷ್ಣನ ಚರಣಗಳಲ್ಲಿ ಪರಾಭಕ್ತಿಯು ಪ್ರಾಪ್ತವಾಗುತ್ತದೆ.॥ ೨೮ ॥

ಮೂವತ್ತೊಂದನೆಯ ಅಧ್ಯಾಯವು ಮುಗಿಯಿತು. ॥ ೩೧ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ಏಕಾದಶ ಸ್ಕಂಧೇ ಏಕತ್ರಿಂಶೋಽಧ್ಯಾಯಃ ॥ ೩೧ ॥

ಹನ್ನೊಂದನೆಯ ಸ್ಕಂಧವು ಸಂಪೂರ್ಣವಾಯಿತು.

ಹರಿಃಓಂ ತತ್ಸತ್ - ಹರಿಃಓಂ ತತ್ಸತ್

॥ ಓಂ ನಮೋ ಭಗವತೇ ವಾಸುದೇವಾಯ ॥

# ಶ್ರೀಮದ್ಭಾಗವತಮಹಾಪುರಾಣಮ್

## ದ್ವಾದಶಃ ಸ್ಕಂಧಃ

## ಮೊದಲನೆಯ ಅಧ್ಯಾಯ

### ಕಲಿಯುಗದ ರಾಜವಂಶಗಳ ವರ್ಣನೆ

ರಾಜೋವಾಚ

ಸ್ವಧಾಮಾನುಗತೇ ಕೃಷ್ಣೇ ಯದುವಂಶವಿಭೂಷಣೇ ।
ಕಸ್ಯ ವಂಶೋಽಭವತ್ಪೃಥ್ವ್ಯಾಮೇತದಾಚಕ್ಷ್ವ ಮೇ ಮುನೇ ॥ ೧ ॥

ಶ್ರೀಶುಕ ಉವಾಚ

ಯೋಽನ್ತ್ಯಃ ಪುರಂಜಯೋ ನಾಮ ಭಾವ್ಯೋ ಬಾರ್ಹದ್ರಥೋ ನೃಪ ।
ತಸ್ಯಾಮಾತ್ಯಸ್ತು ಶುನಕೋ ಹತ್ವಾ ಸ್ವಾಮಿನಮಾತ್ಮಜಮ್ ॥ ೨ ॥

ಪ್ರದ್ಯೋತಸಂಜ್ಞಂ ರಾಜಾನಂ ಕರ್ತಾ ಯತ್ಪಾಲಕಃ ಸುತಃ ।
ವಿಶಾಖಯೂಪಸ್ತತ್ಪುತ್ರೋ ಭವಿತಾ ರಾಜಕಸ್ತತಃ ॥ ೩ ॥

ನಂದಿವರ್ಧನಸ್ತತ್ಪುತ್ರಃ ಪಂಚ ಪ್ರದ್ಯೋತನಾ ಇಮೇ ।
ಅಷ್ಟತ್ರಿಂಶೋತ್ತರಶತಂ ಭೋಕ್ಷ್ಯಂತಿ ಪೃಥಿವೀಂ ನೃಪಾಃ ॥ ೪ ॥

ಶಿಶುನಾಗಸ್ತತೋ ಭಾವ್ಯಃ ಕಾಕವರ್ಣಸ್ತು ತತ್ಸುತಃ ।
ಕ್ಷೇಮಧರ್ಮಾ ತಸ್ಯ ಸುತಃ ಕ್ಷೇತ್ರಜ್ಞಃ ಕ್ಷೇಮಧರ್ಮಜಃ ॥ ೫ ॥

ವಿಧಿಸಾರಃ ಸುತಸ್ತಸ್ಯಾಜಾತಶತ್ರುರ್ಭವಿಷ್ಯತಿ ।
ದರ್ಭಕಸ್ತತ್ಸುತೋ ಭಾವೀ ದರ್ಭಕಸ್ಯಾಜಯಃ ಸ್ಮೃತಃ ॥ ೬ ॥

ನಂದಿವರ್ಧನ ಆಜೇಯೋ ಮಹಾನಂದಿಃ ಸುತಸ್ತತಃ ।
ಶಿಶುನಾಗಾ ದಶೈವೈತೇ ಷಷ್ಟ್ಯುತ್ತರಶತತ್ರಯಮ್ ॥ ೭ ॥

ಸಮಾ ಭೋಕ್ಷ್ಯಂತಿ ಪೃಥಿವೀಂ ಕುರುಶ್ರೇಷ್ಠ ಕಲೌ ನೃಪಾಃ ।
ಮಹಾನಂದಿಸುತೋ ರಾಜನ್ ಶೂದ್ರೀಗರ್ಭೋದ್ಭವೋ ಬಲೀ ॥ ೮ ॥

ಮಹಾಪದ್ಮಪತಿಃ ಕಶ್ಚಿನ್ನಂದಃ ಕ್ಷತ್ರವಿನಾಶಕೃತ್ ।
ತತೋ ನೃಪಾ ಭವಿಷ್ಯಂತಿ ಶೂದ್ರಪ್ರಾಯಾಸ್ತ್ವಧಾರ್ಮಿಕಾಃ ॥ ೯ ॥

**ಪರೀಕ್ಷಿದ್ರಾಜನು ಕೇಳಿದನು –** ಮಹಾಮುನಿಗಳೇ! ಯದುವಂಶ ಶಿರೋಮಣಿಯಾದ ಭಗವಾನ್ ಶ್ರೀಕೃಷ್ಣನು ಸ್ವಧಾಮಕ್ಕೆ ತೆರಳಿದ ಬಳಿಕ ಈ ಭೂಮಿಯಲ್ಲಿ ಯಾವ ರಾಜವಂಶದವರು ರಾಜ್ಯವಾಳಿದರು? ಈಗ ಯಾರು ಆಳುತ್ತಿರುವರು? ತಾವು ದಯಮಾಡಿ ತಿಳಿಸಿರಿ. ॥ ೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ –** ಪ್ರಿಯ ಪರೀಕ್ಷಿತನೇ! ಜರಾಸಂಧನ ತಂದೆಯಾದ ಬೃಹದ್ರಥನ ವಂಶದಲ್ಲಿ ಪುರಂಜಯ ಅಥವಾ ರಿಪುಂಜಯ ಎನ್ನುವವನು ಕಡೆಯ ರಾಜನಾಗುವನು ಎಂದು ನಾನು ಹಿಂದೆ ಒಂಭತ್ತನೇ ಸ್ಕಂಧದಲ್ಲಿ ತಿಳಿಸಿದ್ದೆ. ಅವನಿಗೆ ಶುನಕನೆಂಬ ಮಂತ್ರಿಯಾಗುವನು. ಅವನು ತನ್ನ ಒಡೆಯನನ್ನು ಕೊಂದು ತನ್ನ ಪುತ್ರನಾದ ಪ್ರದ್ಯೋತನನ್ನು ಸಿಂಹಾಸನದಲ್ಲಿ ಕೂರಿಸುವನು. ಪ್ರದ್ಯೋತನಿಗೆ ಪಾಲಕನೆಂಬ ಪುತ್ರನೂ, ಪಾಲಕನಿಗೆ ವಿಶಾಖಯೂಪನೂ, ವಿಶಾಖಯೂಪನಿಗೆ ರಾಜಕ ಹಾಗೂ ರಾಜಕನಿಗೆ ನಂದಿವರ್ಧನನೆಂಬ ಪುತ್ರನು ಹುಟ್ಟುವನು. ಪ್ರದ್ಯೋತವಂಶದಲ್ಲಿ ಇವರೇ ಐದು ಮಂದಿ ರಾಜರಾಗುವರು. ಇವರೆಲ್ಲರೂ ಪ್ರದ್ಯೋತರೆಂದೇ ಕರೆಸಿಕೊಳ್ಳುವರು. ಇವರು ನೂರು ಮೂವತ್ತೆಂಟು ವರ್ಷಗಳವರೆಗೆ ಧರೆಯ ರಾಜ್ಯತ್ವವನ್ನು ಅನುಭವಿಸುವರು. ॥ ೨-೪ ॥

ಅನಂತರ ಶಿಶುನಾಗನೆಂಬುವನು ರಾಜನಾಗುವನು. ಅವನ ಪುತ್ರನು ಕಾಕವರ್ಣ, ಅವನಿಗೆ ಕ್ಷೇಮಧರ್ಮನೆಂಬ ಪುತ್ರನೂ, ಅವನಿಗೆ ಕ್ಷೇತ್ರಜ್ಞನೆಂಬ ಪುತ್ರನು ಹುಟ್ಟುವನು. ॥ ೫ ॥ ಕ್ಷೇತ್ರಜ್ಞನಿಗೆ ವಿಧಿಸಾರನೂ, ಅವನಿಗೆ ಅಜಾತಶತ್ರುವೂ, ಅಜಾತಶತ್ರುವಿಗೆ ದರ್ಭಕನೂ, ಅವನಿಗೆ ಅಜಯನೆಂಬ ಪುತ್ರ ಜನಿಸುವನು. ॥ ೬ ॥ ಅಜಯನಿಂದ ನಂದಿವರ್ಧನನೂ, ಅವನಿಂದ ಮಹಾನಂದಿಯು ಹುಟ್ಟುವನು. ಈ ಶಿಶುನಾಗವಂಶದಲ್ಲಿ ಈ ಹತ್ತು ರಾಜರು ಕಲಿಯುಗದಲ್ಲಿ ಮುನ್ನೂರ ಅರವತ್ತು ವರ್ಷಗಳವರೆಗೆ ಭೂಮಿಯಲ್ಲಿ ರಾಜ್ಯವಾಳುವರು. ಮಹಾನಂದಿಯ ಶೂದ್ರಪತ್ನಿಯಲ್ಲಿ ನಂದನೆಂಬ ಪುತ್ರನು ಹುಟ್ಟುವನು. ಈ ಮಹಾಬಲಿಷ್ಠನಾದ ನಂದನು ಮಹಾಪದ್ಮವೆಂಬ ನಿಧಿಗೆ ಅಧಿಕಾರಿಯಾಗುವನು. ಅದರಿಂದ ಜನರು ಇವನಿಗೆ 'ಮಹಾಪದ್ಮ' ಎಂದೂ ಹೇಳುವರು. ಈತನು ಕ್ಷತ್ರಿಯರಾಜರ ನಾಶಕ್ಕೆ ಕಾರಣನಾಗುವನು. ಅಲ್ಲಿಂದ ಮುಂದಿನ ರಾಜರು ಪ್ರಾಯಶಃ ಶೂದ್ರರೂ, ಅಧಾರ್ಮಿಕರೇ ಆಗುವರು. ॥ ೭-೯ ॥

ಸ ಏಕಚ್ಛತ್ರಾಂ ಪೃಥಿವೀಮನುಲ್ಲಂಘಿತಶಾಸನಃ ।
ಶಾಸಿಷ್ಯತಿ ಮಹಾಪದ್ಮೋ ದ್ವಿತೀಯ ಇವ ಭಾರ್ಗವಃ
॥ ೧೦ ॥

ತಸ್ಯ ಚಾಷ್ಟೌ ಭವಿಷ್ಯಂತಿ ಸುಮಾಲ್ಯಪ್ರಮುಖಾಃ ಸುತಾಃ ।
ಯ ಇಮಾಂ ಭೋಕ್ಷ್ಯಂತಿ ಮಹೀಂ ರಾಜಾನಃ ಸ್ಮ ಶತಂ ಸಮಾಃ
॥ ೧೧ ॥

ನವ ನಂದಾನ್ ದ್ವಿಜಃ ಕಶ್ಚಿತ್ಪ್ರಪನ್ನಾನುದ್ಧರಿಷ್ಯತಿ ।
ತೇಷಾಮಭಾವೇ ಜಗತೀಂ ಮೌರ್ಯಾ ಭೋಕ್ಷ್ಯಂತಿ ವೈ ಕಲೌ
॥ ೧೨ ॥

ಸ ಏವ ಚಂದ್ರಗುಪ್ತಂ ವೈ ದ್ವಿಜೋ ರಾಜ್ಯೇಽಭಿಷೇಕ್ಷ್ಯತಿ ।
ತತ್ಸುತೋ ವಾರಿಸಾರಸ್ತು ತತಶ್ಚಾಶೋಕವರ್ಧನಃ
॥ ೧೩ ॥

ಸುಯಶಾ ಭವಿತಾ ತಸ್ಯ ಸಂಗತಃ ಸುಯಶಃಸುತಃ ।
ಶಾಲಿಶೂಕಸ್ತತಸ್ತಸ್ಯ ಸೋಮಶರ್ಮಾ ಭವಿಷ್ಯತಿ
॥ ೧೪ ॥

ಶತಧನ್ವಾ ತತಸ್ತಸ್ಯ ಭವಿತಾ ತದ್ಬೃಹದ್ರಥಃ ।
ಮೌರ್ಯಾ ಹ್ಯೇತೇ ದಶ ನೃಪಾಃ ಸಪ್ತತ್ರಿಂಶಚ್ಛತೋತ್ತರಮ್ ।
ಸಮಾ ಭೋಕ್ಷ್ಯಂತಿ ಪೃಥಿವೀಂ ಕಲೌ ಕುರುಕುಲೋದ್ವಹ
॥ ೧೫ ॥

ಹತ್ವಾ ಬೃಹದ್ರಥಂ ಮೌರ್ಯಂ ತಸ್ಯ ಸೇನಾಪತಿಃ ಕಲೌ ।
ಪುಷ್ಯಮಿತ್ರಸ್ತು ಶುಂಗಾಹ್ವಃ ಸ್ವಯಂ ರಾಜ್ಯಂ ಕರಿಷ್ಯತಿ ।
ಅಗ್ನಿಮಿತ್ರಸ್ತತಸ್ತಸ್ಮಾತ್ ಸುಜ್ಯೇಷ್ಠೋಽಥ ಭವಿಷ್ಯತಿ
॥ ೧೬ ॥

ವಸುಮಿತ್ರೋ ಭದ್ರಕಶ್ಚ ಪುಲಿಂದೋ ಭವಿತಾ ತತಃ ।
ತತೋ ಘೋಷಃ ಸುತಸ್ತಸ್ಮಾದ್ವಜ್ರಮಿತ್ರೋ ಭವಿಷ್ಯತಿ
॥ ೧೭ ॥

ತತೋ ಭಾಗವತಸ್ತಸ್ಮಾದ್ದೇವಭೂತಿರಿತಿ ಶ್ರುತಃ ।
ಶುಂಗಾ ದಶೈತೇ ಭೋಕ್ಷ್ಯಂತಿ ಭೂಮಿಂ ವರ್ಷಶತಾಧಿಕಮ್
॥ ೧೮ ॥

ತತಃ ಕಣ್ವಾನಿಯಂ ಭೂಮಿರ್ಯಾಸ್ಯತ್ಯಲ್ಪಗುಣಾನ್ನೃಪ ।
ಶುಂಗಂ ಹತ್ವಾ ದೇವಭೂತಿಂ ಕಣ್ವೋಽಮಾತ್ಯಸ್ತು ಕಾಮಿನಮ್
॥ ೧೯ ॥

ಸ್ವಯಂ ಕರಿಷ್ಯತೇ ರಾಜ್ಯಂ ವಸುದೇವೋ ಮಹಾಮತಿಃ ।
ತಸ್ಯ ಪುತ್ರಸ್ತು ಭೂಮಿತ್ರಸ್ತಸ್ಯ ನಾರಾಯಣಃ ಸುತಃ ।
ನಾರಾಯಣಸ್ಯ ಭವಿತಾ ಸುಶರ್ಮಾ ನಾಮ ವಿಶ್ರುತಃ
॥ ೨೦ ॥

ಮಹಾಪದ್ಮನು ಭೂಮಿಯಲ್ಲಿ ಏಕಚ್ಛತ್ರಾಧಿಪತಿಯಾಗುವನು. ಅವನ ಶಾಸನವನ್ನು ಯಾರೂ ಮೀರಲಾರರು. ಕ್ಷತ್ರಿಯರ ವಿನಾಶಕ್ಕೆ ಕಾರಣವಾದ ಇವನು ಇನ್ನೊಬ್ಬ ಪರಶುರಾಮನೆಂದೇ ತಿಳಿಯಬೇಕು. ॥ ೧೦ ॥ ಇವನಿಗೆ ಸುಮಾಲ್ಯರೇ ಮೊದಲಾದ ಎಂಟು ಮಂದಿ ಪುತ್ರರಾಗುವರು. ಅವರೆಲ್ಲರೂ ರಾಜರಾಗಿ ನೂರುವರ್ಷಗಳ ಕಾಲ ಭೂಮಿಯನ್ನು ಅನುಭವಿಸುವರು. ॥ ೧೧ ॥ ಕೌಟಿಲ್ಯ ವಾತ್ಸ್ಯಾಯನ ಅಥವಾ ಚಾಣಕ್ಯನೆಂದು ಪ್ರಸಿದ್ಧನಾದ ಒಬ್ಬ ಬ್ರಾಹ್ಮಣನು ವಿಶ್ವವಿಖ್ಯಾತ ನಂದ ಮತ್ತು ಅವನ ಸುಮಾಲ್ಯರೇ ಮುಂತಾದ ಎಂಟು ಪುತ್ರರನ್ನು ನಾಶಮಾಡುವನು. ಅವರು ಅಳಿದುಹೋದಮೇಲೆ ಕಲಿಯುಗದಲ್ಲಿ ಮೌರ್ಯವಂಶದ ರಾಜರು ಭೂಮಿಯನ್ನು ಆಳುವರು. ॥ ೧೨ ॥ ಚಾಣಕ್ಯನು ಮೊಟ್ಟಮೊದಲಿಗೆ ಚಂದ್ರಗುಪ್ತ ಮೌರ್ಯನನ್ನು ರಾಜನಾಗಿ ಪಟ್ಟಾಭಿಷೇಕ ಮಾಡುವನು. ಚಂದ್ರಗುಪ್ತನ ಪುತ್ರ ವಾರಿಸಾರನಾಗುವನು ಮತ್ತು ವಾರಿಸಾರನಿಗೆ ಅಶೋಕ ವರ್ಧನನು ಜನಿಸುವನು. ॥ ೧೩ ॥ ಅಶೋಕವರ್ಧನನಿಗೆ ಸುಯಶನೆಂಬ ಪುತ್ರನಾಗುವನು. ಅವನಿಗೆ ಸಂಗತ, ಸಂಗತನಿಗೆ ಶಾಲಿಶೂಕ ಮತ್ತು ಶಾಲಿಶೂಕನಿಗೆ ಸೋಮಶರ್ಮಾ ಆಗುವನು. ॥ ೧೪ ॥ ಸೋಮಶರ್ಮನಿಗೆ ಶತಧನ್ವಾ, ಶತಧನ್ವನಿಗೆ ಬೃಹದ್ರಥ ಪುತ್ರನಾಗುವನು. ಕುರುವಂಶ ವಿಭೂಷಿತ ಪರೀಕ್ಷಿತನೇ ! ಮೌರ್ಯವಂಶದ ಈ ಹತ್ತು ಮಂದಿ* ರಾಜರು ಕಲಿಯುಗದಲ್ಲಿ ಒಂದುನೂರ ಮೂವತ್ತೇಳು ವರ್ಷಗಳ ಕಾಲ ರಾಜ್ಯವನ್ನಾಳುವರು. ಬೃಹದ್ರಥನಿಗೆ ಪುಷ್ಯಮಿತ್ರಶುಂಗನೆಂಬುವನು ಸೇನಾಪತಿ. ಅವನು ತನ್ನ ಒಡೆಯನನ್ನು ಕೊಂದು ತಾನೇ ರಾಜನಾಗುವನು. ಪುಷ್ಯಮಿತ್ರನಿಗೆ ಅಗ್ನಿಮಿತ್ರ ಹಾಗೂ ಅಗ್ನಿಮಿತ್ರನಿಗೆ ಸುಜ್ಯೇಷ್ಠನಾಗುವನು. ॥ ೧೫-೧೬ ॥ ಸುಜ್ಯೇಷ್ಠನಿಗೆ ವಸುಮಿತ್ರ, ವಸುಮಿತ್ರನಿಗೆ ಭದ್ರಕ ಮತ್ತು ಭದ್ರಕನಿಗೆ ಪುಲಿಂದ, ಪುಲಿಂದಕನಿಗೆ ಘೋಷ, ಘೋಷನಿಗೆ ವಜ್ರಮಿತ್ರನು ಮಗನಾಗುವನು. ॥ ೧೭ ॥ ವಜ್ರಮಿತ್ರನಿಗೆ ಭಾಗವತ, ಭಾಗವತನ ಪುತ್ರ ದೇವಭೂತಿ ಎಂಬುವನು. ಶುಂಗವಂಶದ ಈ ಹತ್ತುಮಂದಿ ರಾಜರು ನೂರಹನ್ನೆರಡು ವರ್ಷಗಳವರೆಗೆ ಪೃಥ್ವಿಯನ್ನು ಪಾಲಿಸುವರು. ॥ ೧೮ ॥

ಪರೀಕ್ಷಿತನೇ ! ಶುಂಗವಂಶೀಯರಾಜರ ತರುವಾಯ ಈ ಭೂಮಿಯನ್ನು ಕಣ್ವವಂಶೀಯ ರಾಜರು ಆಳುವರು. ಇವರು ತಮ್ಮ ಹಿಂದಿನ ರಾಜರಿಗಿಂತ ಗುಣಮಟ್ಟದಲ್ಲಿ ಅಲ್ಪರಾಗುವರು. ಶುಂಗ ವಂಶದ ಕೊನೆಯ ರಾಜನಾದ ದೇವಭೂತಿಯು ಅತ್ಯಂತ ವಿಷಯಲಂಪಟನಾಗುವನು. ಅವನನ್ನು ಕೊಂದು ಮಹಾಮತಿಯಾದ ಮಂತ್ರಿ ಕಣ್ವವಂಶೀಯ ವಸುದೇವನು ರಾಜ್ಯವನ್ನು ಪಡೆಯುವನು. ಆ ವಸುದೇವನಿಗೆ ಭೂಮಿತ್ರನೂ, ಭೂಮಿತ್ರನಿಗೆ ನಾರಾಯಣನೆಂಬುವನೂ, ಅವನಿಗೆ ಅತ್ಯಂತ ಯಶಸ್ವಿಯಾದ ಸುಶರ್ಮಾ ಎಂಬ ಪುತ್ರನಾಗುವನು. ॥ ೧೯-೨೦ ॥ ಕಣ್ವವಂಶದ ಈ ನಾಲ್ವರು

* ಮೌರ್ಯರಾಜರ ಸಂಖ್ಯೆ ಚಂದ್ರಗುಪ್ತನನ್ನು ಸೇರಿಸಿ ಒಂಭತ್ತೇ ಆಗುವುದು. ಆದರೆ ವಿಷ್ಣುಪುರಾಣಾದಿಗಳಲ್ಲಿ ಚಂದ್ರಗುಪ್ತನಿಂದ ಐದನೆಯವನಾದ ದಶರಥ ಎಂಬ ಮೌರ್ಯವಂಶೀರಾಜನ ಉಲ್ಲೇಖ ದೊರೆಯುತ್ತದೆ. ಅವನನ್ನು ಸೇರಿಸಿ ಇಲ್ಲಿ ಹತ್ತುಮಂದಿ ಎಂದು ತಿಳಿಯಬೇಕು.

ಕಾಣ್ವಾಯನಾ ಇಮೇ ಭೂಮಿಂ ಚತ್ವಾರಿಂಶಚ್ಚ ಪಂಚ ಚ ।
ಶತಾನಿ ತ್ರೀಣಿ ಭೋಕ್ಷ್ಯಂತಿ ವರ್ಷಾಣಾಂ ಚ ಕಲೌ ಯುಗೇ
॥ ೨೧ ॥

ಹತ್ವಾ ಕಾಣ್ವಂ ಸುಶರ್ಮಾಣಂ ತದ್ಭೃತ್ಯೋ ವೃಷಲೋ ಬಲೀ ।
ಗಾಂ ಭೋಕ್ಷ್ಯತ್ಯಂಧ್ರ ಜಾತೀಯಃ ಕಂಚಿತ್ಕಾಲಮಸತ್ತಮಃ
॥ ೨೨ ॥

ಕೃಷ್ಣನಾಮಾಥ ತದ್ಭ್ರಾತಾ ಭವಿತಾ ಪೃಥಿವೀಪತಿಃ ।
ಶ್ರೀಶಾಂತಕರ್ಣಸ್ತತ್ಪುತ್ರಃ ಪೌರ್ಣಮಾಸಸ್ತು ತತ್ಸುತಃ
॥ ೨೩ ॥

ಲಂಬೋದರಸ್ತು ತತ್ಪುತ್ರಸ್ತಸ್ಮಾಚ್ಚಿಬಿಲಕೋ ನೃಪಃ ।
ಮೇಘಸ್ವಾತಿಶ್ಚಿಬಿಲಕಾದಟಮಾನಸ್ತು ತಸ್ಯ ಚ
॥ ೨೪ ॥

ಅನಿಷ್ಟಕರ್ಮಾ ಹಾಲೇಯಸ್ತಲಕಸ್ತಸ್ಯ ಚಾತ್ಮಜಃ ।
ಪುರೀಷಭೀರುಸ್ತತ್ಪುತ್ರಸ್ತತೋ ರಾಜಾ ಸುನಂದನಃ
॥ ೨೫ ॥

ಚಕೋರೋ ಬಹವೋ ಯತ್ರ ಶಿವಸ್ವಾತಿರರಿಂದಮಃ ।
ತಸ್ಯಾಪಿ ಗೋಮತೀಪುತ್ರಃ ಪುರೀಮಾನ್ಭವಿತಾ ತತಃ
॥ ೨೬ ॥

ಮೇದಃಶಿರಾಃ ಶಿವಸ್ಕಂಧೋ ಯಜ್ಞಶ್ರೀಸ್ತತ್ಸುತಸ್ತತಃ ।
ವಿಜಯಸ್ತತ್ಸುತೋ ಭಾವ್ಯಶ್ಚಂದ್ರವಿಜ್ಞಃ ಸಲೋಮಧಿಃ
॥ ೨೭ ॥

ಏತೇ ತ್ರಿಂಶನ್ನೃಪತಯಶ್ಚತ್ವಾರ್ಯಬ್ದಶತಾನಿ ಚ ।
ಷಟ್‌ಪಂಚಾಶಚ್ಚ ಪೃಥಿವೀಂ ಭೋಕ್ಷ್ಯಂತಿ ಕುರುನಂದನ
॥ ೨೮ ॥

ಸಪ್ತಾಭೀರಾ ಆವಭೃತ್ಯಾ ದಶ ಗರ್ದಭಿನೋ ನೃಪಾಃ ।
ಕಂಕಾಃ ಷೋಡಶ ಭೂಪಾಲಾ ಭವಿಷ್ಯಂತ್ಯತಿಲೋಲುಪಾಃ
॥ ೨೯ ॥

ತತೋಽಷ್ಟೌ ಯವನಾ ಭಾವ್ಯಾಶ್ಚತುರ್ದಶ ತುರುಷ್ಕಕಾಃ ।
ಭೂಯೋ ದಶ ಗುರುಂಡಾಶ್ಚ ಮೌನಾ ಏಕಾದಶೈವ ತು
॥ ೩೦ ॥

ಏತೇ ಭೋಕ್ಷ್ಯಂತಿ ಪೃಥಿವೀಂ ದಶವರ್ಷಶತಾನಿ ಚ ।
ನವಾಧಿಕಾಂ ಚ ನವತಿಂ ಮೌನಾ ಏಕಾದಶ ಕ್ಷಿತಿಮ್
॥ ೩೧ ॥

ಭೋಕ್ಷ್ಯಂತ್ಯಬ್ದಶತಾನ್ಯಂಗ ತ್ರೀಣಿ ತೈಃ ಸಂಸ್ಥಿತೇ ತತಃ ।
ಕಿಲಕಿಲಾಯಾಂ ನೃಪತಯೋ ಭೂತನಂದೋಽಥ ವಂಗಿರಿಃ
॥ ೩೨ ॥

ಶಿಶುನಂದಿಶ್ಚ ತದ್ ಭ್ರಾತಾ ಯಶೋನಂದಿಃ ಪ್ರವೀರಕಃ ।
ಇತ್ಯೇತೇ ವೈ ವರ್ಷಶತಂ ಭವಿಷ್ಯಂತ್ಯಧಿಕಾನಿ ಷಟ್
॥ ೩೩ ॥

ತೇಷಾಂ ತ್ರಯೋದಶ ಸುತಾ ಭವಿತಾರಶ್ಚ ಬಾಹ್ಲಿಕಾಃ ।
ಪುಷ್ಯಮಿತ್ರೋಽಥ ರಾಜನ್ಯೋ ದುರ್ಮಿತ್ರೋಽಸ್ಯ ತಥೈವ ಚ
॥ ೩೪ ॥

ಕಾಣ್ವಾಯನರೆಂದು ಖ್ಯಾತರಾಗಿ ಕಲಿಯುಗದ ಮೂನ್ನೂರ ನಲವತ್ತೈದು ವರ್ಷಗಳವರೆಗೆ ಭೂಮಿಯನ್ನು ಆಳುವರು. ॥ ೨೧ ॥ ಪ್ರಿಯ ಪರೀಕ್ಷಿತನೇ! ಕಣ್ವವಂಶೀ ಸುಶರ್ಮನಿಗೆ ಬಲಿ ಎಂಬ ಶೂದ್ರ ಸೇವಕನಿರುವನು. ಅವನು ಆಂಧ್ರಜಾತಿಯವನಾಗಿದ್ದು ಬಹಳ ದುಷ್ಟನಾಗಿದ್ದನು. ಅವನು ಸುಶರ್ಮನನ್ನು ಕೊಂದು ಕೆಲವು ಕಾಲ ತಾನೇ ರಾಜನಾಗುವನು. ॥ ೨೨ ॥ ಅನಂತರ ಅವನ ತಮ್ಮ ಕೃಷ್ಣ ನೆಂಬುವನು ರಾಜನಾಗುವನು. ಕೃಷ್ಣನ ಪುತ್ರ ಶ್ರೀಶಾಂತಕರ್ಣನು. ಅವನಿಗೆ ಪೌರ್ಣಮಾಸ ಪುತ್ರನಾಗುವನು. ॥ ೨೩ ॥ ಪೌರ್ಣಮಾಸ ನಿಗೆ ಲಂಬೋದರ, ಲಂಬೋದರನಿಗೆ ಚಿಬಿಲಕ, ಚಿಬಿಲಕನಿಗೆ ಮೇಘಸ್ವಾತಿ, ಮೇಘಸ್ವಾತಿಯಿಂದ ಅಟಮಾನೂ, ಅವನಿಗೆ ಅನಿಷ್ಟಕರ್ಮನೂ, ಅನಿಷ್ಟಕರ್ಮನಿಂದ ಹಾಲೇಯ, ಅವನಿಂದ ತಲಕ, ತಲಕನಿಂದ ಪುರೀಷಭೀರು. ಪುರೀಷಭೀರುವಿಗೆ ರಾಜಾಸು ನಂದನು ಪುತ್ರನಾಗುವನು. ॥ ೨೪-೨೫ ॥ ಪರೀಕ್ಷಿತನೇ! ಸುನಂದ ನಿಗೆ ಚಕೋರ, ಚಕೋರನಿಗೆ ಎಂಟು ಮಂದಿ ಪುತ್ರರಾಗುವರು. ಅವರು 'ಬಹು' ಎಂದು ಹೇಳಲ್ಪಡುವರು. ಇವರೆಲ್ಲರಲ್ಲಿ ಕಿರಿಯವ ನಾದ ಅತ್ಯಂತ ವೀರನೂ, ಶತ್ರುಗಳನ್ನು ದಮನ ಮಾಡುವವನೂ ಆದ ಶಿವಸ್ವಾತಿಗೆ ಗೋಮತಿಪುತ್ರನೆಂಬುವನೂ, ಅವನಿಗೆ ಪುರೀಮಂತ ಎಂಬ ಪುತ್ರನಾಗುವನು. ॥ ೨೬ ॥ ಪುರೀಮಂತನಿಗೆ ಮೇದಶ್ಶಿರ, ಮೇದಶ್ಶಿರನಿಗೆ ಶಿವಸ್ಕಂಧನೂ, ಶಿವಸ್ಕಂಧನಿಗೆ ಯಜ್ಞಶ್ರೀಯು, ಅವನಿಗೆ ವಿಜಯನೂ, ವಿಜಯನಿಗೆ ಚಂದ್ರವಿಜ್ಞ ಮತ್ತು ಲೋಮಧಿ ಎಂಬ ಇಬ್ಬರು ಪುತ್ರರಾಗುವರು. ॥ ೨೭ ॥ ಪರೀಕ್ಷಿತನೇ! ಈ ಮೂವತ್ತುಮಂದಿ ರಾಜರು ನಾಲ್ಕುನೂರು ಐವತ್ತಾರು ವರ್ಷಗಳವರೆಗೆ ಪೃಥಿವಿಯ ಆಳ್ವಿಕೆಯನ್ನು ಅನುಭವಿಸುವರು. ॥ ೨೮ ॥

ಇವರ ನಂತರ ಅವಭೃತಿನಗರದ ಏಳು ಮಂದಿ ಆಭೀರ ರಾಜರೂ, ಹತ್ತುಮಂದಿ ಗರ್ದಭಿರಾಜರೂ, ಹದಿನಾರು ಕಂಕ ರೆಂಬರಾಜರೂ ಭೂಮಿಯನ್ನಾಳುವರು. ಇವರೆಲ್ಲರೂ ಕಡು ಲೋಭಿಗಳಾಗುವರು. ॥ ೨೯ ॥ ಇವರಾದ ಮೇಲೆ ಎಂಟುಮಂದಿ ಯವನರೂ, ಹದಿನಾಲ್ಕು ಮಂದಿ ತುರ್ಕರೂ ರಾಜ್ಯವಾಳುವರು. ಮತ್ತೆ ಹತ್ತು ಮಂದಿ ಗುರುಂಡರೂ, ಹನ್ನೊಂದು ಮಂದಿ ಮೌನರೂ ನರಪತಿಗಳಾಗುವರು. ॥ ೩೦॥ ಮೌನರಲ್ಲದೆ ಇವ ರೆಲ್ಲರೂ ಒಂದು ಸಾವಿರದ ತೊಂಭತ್ತೊಂಭತ್ತು ವರ್ಷಗಳು ಭೂಮಿಯನ್ನಾಳುವರು. ಹನ್ನೊಂದು ಮಂದಿ ಮೌನರು ಮುನ್ನೂರು ವರ್ಷಗಳವರೆಗೆ ಪೃಥಿವಿಯನ್ನು ಆಳುವರು. ಇವರ ಆಳ್ವಿಕೆಯು ಮುಗಿದುಹೋದಾಗ ಕಿಲಕಿಲಾ ಎಂಬ ನಗರದಲ್ಲಿ ಭೂತನಂದನೆಂಬ ರಾಜನಾಗುವನು. ಭೂತನಂದನನಿಗೆ ವಂಗಿ ರನೂ, ಅವನ ಸೋದರರಾದ ಶಿಶುನಂದಿ ಹಾಗೂ ಯಶೋನಂದಿ ಮತ್ತು ಪ್ರವೀರಕ ಇವರು ಒಂದು ನೂರಆರು ವರ್ಷಗಳವರೆಗೆ ರಾಜ್ಯವಾಳುವರು. ॥ ೩೧-೩೩ ॥ ಇವರಿಗೆ ಹದಿಮೂರು ಮಂದಿ ಪುತ್ರರಾಗುವರು. ಇವರೆಲ್ಲರಿಗೂ ಬಾಹ್ಲಿಕರೆಂದು ಹೆಸರು. ಇವರ ನಂತರ ಪುಷ್ಯಮಿತ್ರನೆಂಬ ಕ್ಷತ್ರಿಯನೂ ಮತ್ತು ಅವನ ಪುತ್ರನಾದ ದುರ್ಮಿತ್ರನೂ ರಾಜರಾಗುವರು. ॥ ೩೪ ॥

ಏಕಕಾಲಾ ಇಮೇ ಭೂಪಾಃ ಸಪ್ತಾಂಧ್ರಾಃ ಸಪ್ತ ಕೋಸಲಾಃ ।
ವಿದೂರಪತಯೋ ಭಾವ್ಯಾ ನಿಷಧಾಸ್ತತ ಏವ ಹಿ
॥ ೩೫ ॥

ಮಾಗಧಾನಾಂ ತು ಭವಿತಾ ವಿಶ್ವಸ್ಫೂರ್ಜಿಃ ಪುರಂಜಯಃ ।
ಕರಿಷ್ಯತ್ಯಪರೋ ವರ್ಣಾನ್ಪುಲಿಂದ ಯದುಮದ್ರಕಾನ್
॥ ೩೬ ॥

ಪ್ರಜಾಶ್ಚಾಬ್ರಹ್ಮಭೂಯಿಷ್ಠಾಃ ಸ್ಥಾಪಯಿಷ್ಯತಿ ದುರ್ಮತಿಃ ।
ವೀರ್ಯವಾನ್ ಕ್ಷತ್ರಮುತ್ಸಾದ್ಯ ಪದ್ಮವತ್ಯಾಂ ಸ ವೈ ಪುರಿ ।
ಅನುಗಂಗಾಮಾಪ್ರಯಾಗಂ ಗುಪ್ತಾಂ ಭೋಕ್ಷ್ಯತಿ ಮೇದಿನೀಮ್
॥ ೩೭ ॥

ಸೌರಾಷ್ಟ್ರಾವಂತ್ಯಾಭೀರಾಶ್ಚ ಶೂರಾ ಅರ್ಬುದಮಾಲವಾಃ ।
ವ್ರಾತ್ಯಾ ದ್ವಿಜಾ ಭವಿಷ್ಯಂತಿ ಶೂದ್ರಪ್ರಾಯಾ ಜನಾಧಿಪಾಃ
॥ ೩೮ ॥

ಸಿಂಧೋಸ್ತಟಂ ಚಂದ್ರಭಾಗಾಂ ಕೌಂತೀಂ ಕಾಶ್ಮೀರಮಂಡಲಮ್ ।
ಭೋಕ್ಷ್ಯಂತಿ ಶೂದ್ರಾ ವ್ರಾತ್ಯಾದ್ಯಾ ಮ್ಲೇಚ್ಛಾಶ್ಚಾಬ್ರಹ್ಮವರ್ಚಸಃ
॥ ೩೯ ॥

ತುಲ್ಯಕಾಲಾ ಇಮೇ ರಾಜನ್ಮ್ಲೇಚ್ಛಪ್ರಾಯಾಶ್ಚ ಭೂಭೃತಃ ।
ಏತೇಽಧರ್ಮಾನೃತಪರಾಃ ಫಲ್ಗುದಾಸ್ತೀವ್ರಮನ್ಯವಃ
॥ ೪೦ ॥

ಸ್ತ್ರೀಬಾಲಗೋದ್ವಿಜಘ್ನಾಶ್ಚ ಪರದಾರಧನಾದೃತಾಃ ।
ಉದಿತಾಸ್ತಮಿತಪ್ರಾಯಾ ಅಲ್ಪಸತ್ತ್ವಾಲ್ಪಕಾಯುಷಃ
॥ ೪೧ ॥

ಅಸಂಸ್ಕೃತಾಃ ಕ್ರಿಯಾಹೀನಾ ರಜಸಾ ತಮಸಾಽಽವೃತಾಃ ।
ಪ್ರಜಾಸ್ತೇ ಭಕ್ಷಯಿಷ್ಯಂತಿ ಮ್ಲೇಚ್ಛಾ ರಾಜನ್ಯರೂಪಿಣಃ
॥ ೪೨ ॥

ತನ್ನಾಥಾಸ್ತೇ ಜನಪದಾಸ್ತಚ್ಛೀಲಾಚಾರವಾದಿನಃ ।
ಅನ್ಯೋನ್ಯತೋ ರಾಜಭಿಶ್ಚ ಕ್ಷಯಂ ಯಾಸ್ಯಂತಿ ಪೀಡಿತಾಃ
॥ ೪೩ ॥

ಪರೀಕ್ಷಿತನೇ ! ಬಾಹ್ಲೀಕವಂಶದ ರಾಜರು ಒಟ್ಟಿಗೆ ಬೇರೆ-ಬೇರೆ ಪ್ರಾಂತಗಳಲ್ಲಿ ರಾಜ್ಯವನ್ನಾಳುವರು. ಅವರಲ್ಲಿ ಏಳು ಮಂದಿ ಆಂಧ್ರ ದೇಶದ, ಏಳು ಮಂದಿ ಕೋಸಲದೇಶದ, ಕೆಲವರು ವಿದೂರ ಭೂಮಿಗೂ, ಮತ್ತೆ ಕೆಲವರು ನಿಷಧದೇಶಕ್ಕೆ ಶಾಸಕರಾಗುವರು. ॥ ೩೫ ॥

ಅನಂತರ ವಿಶ್ವಸ್ಫೂರ್ಜಿ ಎಂಬುವನು ಮಗಧ ದೇಶಕ್ಕೆ ರಾಜನಾಗುವನು. ಇವನು ಹಿಂದಿನ ಪುರಂಜಯನಲ್ಲದೆ ಎರಡನೇ ಪುರಂಜಯನೆಂದು ಕರೆಯಲ್ಪಡುವನು. ಇವನು ಬ್ರಾಹ್ಮಣರೇ ಆದ ಉಚ್ಚವರ್ಣಿಯರನ್ನು ಪುಲಿಂದ, ಯದು, ಮದ್ರ ಮುಂತಾದ ಮ್ಲೆಚ್ಛಸದೃಶರನ್ನಾಗಿ ಮಾಡುವನು. ॥ ೩೬ ॥ ಇವನು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಇವರನ್ನು ನಾಶಪಡಿಸಿ ಶೂದ್ರಪ್ರಾಯ ಜನರನ್ನು ರಕ್ಷಿಸುವಂತಹ ದುಷ್ಟಬುದ್ಧಿಯಾಗುವನು. ಇವನು ಬಲ- ವಿಕ್ರಮದಿಂದ ಕ್ಷತ್ರಿಯರನ್ನು ನಿರ್ಮೂಲಗೊಳಿಸಿ, ಪದ್ಮಾವತಿ ಪುರವನ್ನು ರಾಜಧಾನಿಯನ್ನಾಗಿಸಿಕೊಂಡು ಹರಿದ್ವಾರದಿಂದ ಪ್ರಯಾಗದವರೆಗಿನ ಸುರಕ್ಷಿತವಾದ ಭೂಮಿಯನ್ನು ಆಳುವನು. ॥ ೩೭ ॥ ಪರೀಕ್ಷಿತನೇ ! ಕಲಿಯುಗವು ಬಂದು ಹೋದಾಗಲೆಲ್ಲ ಸೌರಾಷ್ಟ್ರ, ಅವಂತಿ, ಆಭೀರ, ಶೂರ, ಅರ್ಬುದ ಮತ್ತು ಮಾಲವ ದೇಶಗಳ ಬ್ರಾಹ್ಮಣರು ಸಂಸ್ಕಾರಶೂನ್ಯರಾಗುವರು ಹಾಗೂ ರಾಜರು ಶೂದ್ರರಂತಾಗುವರು. ॥ ೩೮ ॥ ಸಿಂಧುನದಿಯ ತೀರ, ಚಂದ್ರಭಾಗಾ ನದಿಯ ದಡೆದ ಪ್ರದೇಶ, ಕೌಂತಿ ಮತ್ತು ಕಾಶ್ಮೀರ ಮಂಡಲಗಳಲ್ಲಿ ಸಾಮಾನ್ಯವಾಗಿ ಶೂದ್ರರಂತೆ ಸಂಸ್ಕಾರ ಮತ್ತು ಬ್ರಹ್ಮತೇಜದಿಂದ ರಹಿತರಾಗಿ ಹೆಸರಿಗಷ್ಟೇ ಬ್ರಾಹ್ಮಣರೂ ಮತ್ತು ಮ್ಲೇಚ್ಛರೂ ರಾಜ್ಯವನ್ನಾಳುವರು. ॥ ೩೯ ॥

ಪರೀಕ್ಷಿತನೇ ! ಇವರೆಲ್ಲ ರಾಜರೂ ಆಚಾರ-ವಿಚಾರಗಳಲ್ಲಿ ಮ್ಲೇಚ್ಛರಂತಾಗುವರು. ಇವರೆಲ್ಲರೂ ಏಕಕಾಲದಲ್ಲಿ ಬೇರೆ-ಬೇರೆ ಪ್ರಾಂತಗಳಲ್ಲಿ ಆಳ್ವಿಕೆ ನಡೆಸುವರು. ಅಧರ್ಮ-ಅಸತ್ಯಗಳಲ್ಲಿ ನಿರತರಾಗಿದ್ದು ಅಲ್ಪವಾದ ದಾನಕೊಡುವವರಾಗುವರು. ಸಣ್ಣ-ಪುಟ್ಟ ಮಾತುಗಳಿಗೂ ಸಿಟ್ಟಿನಿಂದ ಉರಿದು ಬೀಳುವರು. ॥ ೪೦ ॥ ದುಷ್ಟರಾದ ಇವರು ಸ್ತ್ರೀಯರು, ಮಕ್ಕಳು, ಗೋವು, ಬ್ರಾಹ್ಮಣ ಇವರನ್ನು ಕೊಲ್ಲುವುದರಲ್ಲಿ ಹಿಂದೆ ಸರಿಯಲಾರರು. ಮತ್ತೊಬ್ಬರ ಹಣ, ಹೆಂಡಿರನ್ನು ಅಪಹರಿಸುವುದರಲ್ಲಿ ಸದಾ ಉತ್ಸುಕರಾಗಿರುವರು. ಇವರು ಬೇಗ-ಬೇಗನೆ ಹುಟ್ಟಿ-ಸಾಯುತ್ತಾ ಇರುತ್ತಾರೆ. ಇವರಿಗೆ ಶಕ್ತಿಯೂ ಕಡಿಮೆ, ಆಯುಸ್ಸೂ ಕಡಿಮೆ. ॥ ೪೧ ॥ ಇವರು ರಜೋಗುಣ-ತಮೋಗುಣಗಳಿಂದ ಕುರುಡಾಗಿ ಸಂಸ್ಕಾರ ಹೀನರಾಗಿರುತ್ತಾರೆ. ಕರ್ತವ್ಯ ಕರ್ಮಗಳನ್ನು ತೊರೆಯುವರು. ರಾಜವೇಷದಲ್ಲಿ ಮ್ಲೇಚ್ಛರೇ ಆಗಿದ್ದು, ಪ್ರಜೆಗಳ ರಕ್ತವನ್ನು ಹೀರುವರು. ॥ ೪೨ ॥ ಇಂತಹ ಜನರ ಶಾಸನ ಕಾಲದಲ್ಲಿ ದೇಶದ ಪ್ರಜೆಗಳು ಅಂತಹದೇ ಸ್ವಭಾವ, ಆಚರಣೆ ಮತ್ತು ಮಾತುಗಳು ಹೆಚ್ಚಾಗುವುವು. ರಾಜರೆನಿಸಿದವರು ಪ್ರಜೆಗಳನ್ನು ಶೋಷಣೆ ಮಾಡುವುದಲ್ಲದೆ ತಾವೂ ಪರಸ್ಪರ ಹಿಂಸಕರಾಗಿ ಕೊನೆಗೆ ಎಲ್ಲರೂ ನಾಶವಾಗುವರು. ॥ ೪೩ ॥

*ಮೊದಲನೆಯ ಅಧ್ಯಾಯವು ಮುಗಿಯಿತು. ॥ ೧ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದ್ವಾದಶ ಸ್ಕಂಧೇ ಪ್ರಥಮೋಽಧ್ಯಾಯಃ ॥ ೧ ॥

# ಎರಡನೆಯ ಅಧ್ಯಾಯ

## ಕಲಿಯುಗದ ಧರ್ಮಗಳು

*ಶ್ರೀಶುಕ ಉವಾಚ*

ತತಶ್ಚಾನುದಿನಂ ಧರ್ಮಃ ಸತ್ಯಂ ಶೌಚಂ ಕ್ಷಮಾ ದಯಾ ।
ಕಾಲೇನ ಬಲಿನಾ ರಾಜನ್ ನಂಕ್ಷ್ಯತ್ಯಾಯುರ್ಬಲಂ ಸ್ಮೃತಿಃ ॥ ೧ ॥

ವಿತ್ತಮೇವ ಕಲೌ ನೄಣಾಂ ಜನ್ಮಾಚಾರಗುಣೋದಯಃ ।
ಧರ್ಮನ್ಯಾಯವ್ಯವಸ್ಥಾಯಾಂ ಕಾರಣಂ ಬಲಮೇವ ಹಿ ॥ ೨ ॥

ದಾಂಪತ್ಯೇಽಭಿರುಚಿರ್ಹೇತುರ್ಮಾಯೈವ ವ್ಯಾವಹಾರಿಕೇ ।
ಸ್ತ್ರೀತ್ವೇ ಪುಂಸ್ತ್ವೇ ಚ ಹಿ ರತಿರ್ವಿಪ್ರತ್ವೇ ಸೂತ್ರಮೇವ ಹಿ ॥ ೩ ॥

ಲಿಂಗಮೇವಾಶ್ರಮಖ್ಯಾತಾವನ್ಯೋನ್ಯಾಪತ್ತಿಕಾರಣಮ್ ।
ಅವೃತ್ತ್ಯಾ ನ್ಯಾಯದೌರ್ಬಲ್ಯಂ ಪಾಂಡಿತ್ಯೇ ಚಾಪಲಂ ವಚಃ ॥ ೪ ॥

ಅನಾಢ್ಯತೈವಾಸಾಧುತ್ವೇ ಸಾಧುತ್ವೇ ದಂಭ ಏವ ತು ।
ಸ್ವೀಕಾರ ಏವ ಚೋದ್ವಾಹೇ ಸ್ನಾನಮೇವ ಪ್ರಸಾಧನಮ್ ॥ ೫ ॥

ದೂರೇ ವಾರ್ಯಯನಂ ತೀರ್ಥಂ ಲಾವಣ್ಯಂ ಕೇಶಧಾರಣಮ್ ।
ಉದರಂಭರತಾ ಸ್ವಾರ್ಥಃ ಸತ್ಯತ್ವೇ ಧಾರ್ಷ್ಟ್ಯಮೇವ ಹಿ ॥ ೬ ॥

ದಾಕ್ಷ್ಯಂ ಕುಟುಂಬಭರಣಂ ಯಶೋಽರ್ಥೇ ಧರ್ಮಸೇವನಮ್ ।
ಏವಂ ಪ್ರಜಾಭಿರ್ದುಷ್ಟಾಭಿರಾಕೀರ್ಣೇ ಕ್ಷಿತಿಮಂಡಲೇ ॥ ೭ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ –** ಎಲೈ ಪರೀಕ್ಷಿತನೇ ! ಕಾಲವು ತುಂಬಾ ಬಲಶಾಲಿಯಾದುದು. ಕಲಿಯುಗವು ನಡೆಯುತ್ತಿರುವಂತೆಯೇ ಕ್ರಮೇಣ ಧರ್ಮ, ಸತ್ಯ, ಪವಿತ್ರತೆ, ಕ್ಷಮೆ, ದಯೆ, ಜನರ ಆಯುಸ್ಸು, ಬಲ ಮತ್ತು ಸ್ಮರಣಶಕ್ತಿ ಇವೆಲ್ಲವೂ ಲೋಪ ಹೊಂದುತ್ತಾ ಹೋಗುವವು. ॥ ೧ ॥ ಕಲಿಯುಗದಲ್ಲಿ ಹಣವಿರುವವನನ್ನೇ ಜನರು ಕುಲೀನ, ಸದಾಚಾರಿ, ಸದ್ಗುಣಿಯೆಂದು ತಿಳಿಯುವರು. ಬಲಿಷ್ಠವನಾದವನೇ ಧರ್ಮ ಮತ್ತು ನ್ಯಾಯದ ವ್ಯವಸ್ಥೆಯನ್ನು ತನಗೆ ಅನುಕೂಲವಾಗಿ ಮಾಡಿಕೊಳ್ಳುವನು. ॥ ೨ ॥ ವಿವಾಹ ಸಂಬಂಧದಲ್ಲಿ ಕುಲ-ಶೀಲ-ಯೋಗ್ಯತೆ ಮುಂತಾದವುಗಳಿಗೆ ಬೆಲೆ ಕೊಡದೆ ಯುವಕ-ಯುವತಿಯರು ಪರಸ್ಪರ ಅಭಿರುಚಿಯಿಂದಲೇ ಸಂಬಂಧಗಳು ಏರ್ಪಡುವವು. ಛಲ-ಕಪಟಗಳೇ ವ್ಯವಹಾರ ನಿಪುಣತೆ ಎನಿಸುವುದು. ಸ್ತ್ರೀ-ಪುರುಷರ ಗುಣ ಮಟ್ಟದಲ್ಲಿ ಶೀಲ-ಸಂಯಮಗಳಿರದೆ ರತಿಕೌಶಲವೇ ಇರುವುದು. ಬ್ರಾಹ್ಮಣ ಪರಿಚಯವು ಗುಣ-ಸ್ವಭಾವದಿಂದ ಆಗದೆ ಕೇವಲ ಜನಿವಾರದಿಂದಲೇ ಆಗುವುದು. ॥ ೩ ॥ ಬಟ್ಟೆ, ದಂಡ, ಕಮಂಡಲು ಇವುಗಳೇ ಬ್ರಹ್ಮಚರ್ಯೆ, ಸಂನ್ಯಾಸವೇ ಮೊದಲಾದ ಆಶ್ರಮಗಳ ಗುರುತಾಗುವುದು. ಒಬ್ಬರು ಮತ್ತೊಬ್ಬರ ಚಿಹ್ನೆಗಳನ್ನು ಧರಿಸುವುದೇ ಬೇರೊಂದು ಆಶ್ರಮದಲ್ಲಿ ಪ್ರವೇಶದ ಸ್ವರೂಪವಾಗುವುದು. ಲಂಚ-ಕೊಡಲು, ಹಣವನ್ನು ಖರ್ಚುಮಾಡಲು ಅಸಮರ್ಥನಾದವನಿಗೆ ನ್ಯಾಯಲಯದಲ್ಲಿ ಸರಿಯಾದ ನ್ಯಾಯ ಸಿಗಲಾರದು. ನಡೆ-ನುಡಿಗಳಲ್ಲಿ ನಿಪುಣನಾದವನೇ ದೊಡ್ಡ ಪಂಡಿತನೆಂದು ತಿಳಿಯಲಾಗುವುದು. ॥ ೪ ॥ ಬಡವನಾಗುವುದೇ ಅಸಾಧುತೆಯ-ದೋಷಿಯಾಗುವ ಗುರುತಾಗಬಹುದು. ದಾಂಭಿಕತೆ-ಪಾಖಂಡತೆ ಹೆಚ್ಚು ತೋರುವವನನ್ನೇ ದೊಡ್ಡ ಸಾಧುವೆಂದು ತಿಳಿಯುವರು. ವಿವಾಹಕ್ಕೆ ಪರಸ್ಪರ ಒಪ್ಪಿಗೆಯೇ ಸಾಕಾದೀತು. ಶಾಸ್ತ್ರೀಯ ವಿಧಿ-ವಿಧಾನದ ಸಂಸ್ಕಾರಾದಿಗಳ ಯಾವ ಆವಶ್ಯಕತೆಯೂ ಬೇಕಾಗುವುದಿಲ್ಲ. ಚೆನ್ನಾಗಿ ಕೂದಲನ್ನು ಬಾಚಿ ಸ್ವಚ್ಛವಾದ ಬಟ್ಟೆಗಳನ್ನು ತೊಡುವುದೇ ಸ್ನಾನವೆಂದು ತಿಳಿಯುವರು. ॥ ೫ ॥ ದೂರದಲ್ಲಿರುವ ಕುಂಡವನ್ನೇ ತೀರ್ಥವೆಂದು ತಿಳಿಯುವರು. ಬಳಿಯಲ್ಲಿರುವ ಗಂಗೆ-ಗೋಮತಿ, ತಂದೆ-ತಾಯಿ ಇವುಗಳನ್ನು ಉಪೇಕ್ಷಿಸುವರು. ತಲೆಯಲ್ಲಿ ಉದ್ದ-ಉದ್ದ ಕೂದಲು ಬೆಳೆಸುವುದೇ ಶರೀರದ ಸೌಂದರ್ಯ ಚಿಹ್ನೆಯೆಂದು ತಿಳಿಯುವರು. ತನ್ನ ಹೊಟ್ಟೆ ತುಂಬಿಸಿಕೊಳ್ಳುವುದೇ ಎಲ್ಲಕ್ಕಿಂತ ದೊಡ್ಡ ಪುರುಷಾರ್ಥವೆಂದಾದೀತು. ಎಷ್ಟು ಉದ್ಧಟತನದಿಂದ ಮಾತನಾಡುವನೋ ಅಷ್ಟೇ ದೊಡ್ಡ ಸತ್ಯಸಂಧನೆನಿಸುವನು. ॥ ೬ ॥ ತನ್ನ ಕುಟುಂಬವನ್ನು ಸಾಕುವುದೇ ಮನುಷ್ಯನ ಯೋಗ್ಯತೆ-ಚತುರತೆಯ ದೊಡ್ಡ ಲಕ್ಷಣವಾಗುವುದು. ಕೀರ್ತಿಗಾಗಿ ಧರ್ಮವನ್ನು ಆಚರಿಸಲಾಗುವುದು. ಹೀಗೆ ಇಡೀ ಪೃಥಿವಿಯಲ್ಲಿ ದುಷ್ಟರು ತುಂಬಿಹೋದಾಗ ಬ್ರಾಹ್ಮಣ,

ಬ್ರಹ್ಮವಿಟ್‌ಕ್ಷತ್ರಶೂದ್ರಾಣಾಂ ಯೋ ಬಲೀ ಭವಿತಾ ನೃಪಃ ।
ಪ್ರಜಾ ಹಿ ಲುಬ್ಧೈ ರಾಜನ್ಯೈರ್ನಿರ್ಘೃಣೈರ್ದಸ್ಯುಧರ್ಮಭಿಃ ॥ ೮ ॥

ಆಚ್ಛಿನ್ನದಾರದ್ರವಿಣಾ ಯಾಸ್ಯಂತಿ ಗಿರಿಕಾನನಮ್ ।
ಶಾಕಮೂಲಾಮಿಷಕ್ಷೌದ್ರಫಲಪುಷ್ಪಾಷ್ಟಿಭೋಜನಾಃ ॥ ೯ ॥

ಅನಾವೃಷ್ಟ್ಯಾ ವಿನಂಕ್ಷ್ಯಂತಿ ದುರ್ಭಿಕ್ಷಕರಪೀಡಿತಾಃ ।
ಶೀತವಾತಾತಪಪ್ರಾವೃಡ್ಹಿಮೈರನ್ಯೋನ್ಯತಃ ಪ್ರಜಾಃ ॥ ೧೦ ॥

ಕ್ಷುತ್ತೃಡ್ಭ್ಯಾಂ ವ್ಯಾಧಿಭಿಶ್ಚೈವ ಸಂತಪ್ಸ್ಯಂತೇ ಚ ಚಿಂತಯಾ ।
ತ್ರಿಂಶದ್ವಿಂಶತಿವರ್ಷಾಣಿ ಪರಮಾಯುಃ ಕಲೌ ನೃಣಾಮ್ ॥ ೧೧ ॥

ಕ್ಷೀಯಮಾಣೇಷು ದೇಹೇಷು ದೇಹಿನಾಂ ಕಲಿದೋಷತಃ ।
ವರ್ಣಾಶ್ರಮವತಾಂ ಧರ್ಮೇ ನಷ್ಟೇ ವೇದಪಥೇ ನೃಣಾಮ್ ॥ ೧೨ ॥

ಪಾಖಂಡಪ್ರಚುರೇ ಧರ್ಮೇ ದಸ್ಯುಪ್ರಾಯೇಷು ರಾಜಸು ।
ಚೌರ್ಯಾನೃತವೃಥಾಹಿಂಸಾನಾನಾವೃತ್ತಿಷು ವೈ ನೃಷು ॥ ೧೩ ॥

ಶೂದ್ರಪ್ರಾಯೇಷು ವರ್ಣೇಷುಚ್ಛಾಗಪ್ರಾಯಾಸು ಧೇನುಷು ।
ಗೃಹಪ್ರಾಯೇಷ್ವಾಶ್ರಮೇಷು ಯೌನಪ್ರಾಯೇಷು ಬಂಧುಷು ॥ ೧೪ ॥

ಅಣುಪ್ರಾಯಾಸ್ವೋಷಧೀಷು ಶಮೀಪ್ರಾಯೇಷು ಸ್ಥಾಸ್ನುಷು ।
ವಿದ್ಯುತ್ಪ್ರಾಯೇಷು ಮೇಘೇಷು ಶೂನ್ಯಪ್ರಾಯೇಷು ಸದ್ಮಸು ॥ ೧೫ ॥

ಇತ್ಥಂ ಕಲೌ ಗತಪ್ರಾಯೇ ಜನೇ ತು ಖರಧರ್ಮಿಣಿ ।
ಧರ್ಮತ್ರಾಣಾಯ ಸತ್ತ್ವೇನ ಭಗವಾನವತರಿಷ್ಯತಿ ॥ ೧೬ ॥

ಕ್ಷತ್ರಿಯ, ವೈಶ್ಯ ಮತ್ತು ಶೂದ್ರರಲ್ಲಿ ಹೆಚ್ಚು ಬಲಶಾಲಿಯಾದವನೇ ರಾಜನಾಗುವನು. ಆಗಿನ ರಾಜರು ನೀಚರೂ, ನಿರ್ದಯರೂ, ಕ್ರೂರಿಗಳೂ ಕಡುಲೋಭಿಗಳೂ, ಕಸಿದುಕೊಳ್ಳುವ ಮತ್ತು ಲೂಟಿ ದರೋಡೆ ಮಾಡುವವರಾಗುವರು. ಇವರು ಪ್ರಜೆಗಳ ಹಣ ಹೆಂಡಿರನ್ನು ಕಿತ್ತುಕೊಳ್ಳುವರು. ಇವರಿಗೆ ಹೆದರಿದ ಪ್ರಜೆಗಳು ಬೆಟ್ಟ ಕಾಡುಗಳಿಗೆ ಓಡಿ ಹೋಗುವರು. ಆ ಸಮಯದಲ್ಲಿ ಪ್ರಜೆಯು ಗೆಡ್ಡೆ-ಗೆಣಸು, ಮಾಂಸ, ಜೇನು, ಹಣ್ಣು, ಹೂವು, ಬೀಜ ಮುಂತಾದವುಗಳನ್ನು ತಿಂದುಕೊಂಡು ಹೊಟ್ಟೆಹೊರೆಯುವರು. ॥ ೭-೯ ॥ ಮಳೆಯೇ ಬಾರದೆ ಕ್ಷಾಮ ತಲೆದೋರಿತು. ಆಗಲೂ ಮೇಲಿಂದ ಮೇಲೆ ಕಂದಾಯ ಹೇರಲಾಗುವುದು. ಕೆಲವೊಮ್ಮೆ ಮೈಸುಡುವ ಸೆಕೆ ಉಂಟಾದೀತು. ಕೆಲವೊಮ್ಮೆ ಪ್ರಾಣಾಂತಕವಾದ ಜಲಪ್ರವಾಹ ಬಂದೀತು. ಇಂತಹ ಉತ್ಪಾತಗಳಿಂದ, ಪರಸ್ಪರ ಸಂಘರ್ಷದಿಂದ ಪ್ರಜೆಯು ಅತ್ಯಂತ ಪೀಡಿತವಾಗಿ ನಾಶವಾಗಿ ಹೋಗುವುದು. ॥ ೧೦ ॥ ಜನರು ಹಸಿವು-ಬಾಯಾರಿಕೆಗಳಿಂದ ಕಂಗೆಟ್ಟು ನಾನಾ ರೀತಿಯ ಚಿಂತೆಗಳಿಂದ ದುಃಖಿತರಾಗಿ, ನಾನಾ ರೋಗಗಳಿಗೆ ತುತ್ತಾಗುವರು. ಕಲಿಯುಗದಲ್ಲಿ ಮನುಷ್ಯರ ಪರಮಾಯುಸ್ಸು ಕೇವಲ ಇಪ್ಪತ್ತು ಅಥವಾ ಮೂವತ್ತು ವರ್ಷಗಳಿರುವುದು. ॥ ೧೧ ॥

ಪರೀಕ್ಷಿತನೇ ! ಕಲಿಯದೋಷದಿಂದ ಪ್ರಾಣಿಗಳ ಶರೀರಗಳು ಸಣ್ಣದಾಗಿಯೂ, ಕ್ಷೀಣವಾಗಿಯೂ, ರೋಗಗ್ರಸ್ತವಾಗಿರುವವು. ವರ್ಣಾಶ್ರಮಗಳ ಧರ್ಮವನ್ನು ಹೇಳುವ ವೇದ ಮಾರ್ಗವು ನಷ್ಟಪ್ರಾಯವಾಗುವುದು. ॥ ೧೨ ॥ ಧರ್ಮದಲ್ಲಿ ಪಾಖಂಡತನವೇ ಪ್ರಧಾನವಾದೀತು. ರಾಜ-ಮಹರಾಜರು ದರೋಡೆಕೋರರಾಗುವರು. ಜನರು ಕಳ್ಳತನ, ಸುಳ್ಳು, ನಿರಪರಾಧಿಗಳ ಹಿಂಸೆ ಮುಂತಾದ ಅನೇಕ ವಿಧದ ಕೆಟ್ಟಕೆಲಸಗಳಿಂದ ಜೀವನ ನಡೆಸುವರು. ॥ ೧೩ ॥ ನಾಲ್ಕು ವರ್ಣದ ಜನರು ಶೂದ್ರರಂತೆ ಆಗಿ ಹೋಗುವರು. ಹಸುಗಳು ಕುರಿಗಳಂತೆ ಸಣ್ಣ-ಸಣ್ಣದಾಗಿ ಕಡಿಮೆ ಹಾಲು ಕೊಡುವವು. ವಾನಪ್ರಸ್ಥರು ಮತ್ತು ಸಂನ್ಯಾಸಿ ಮುಂತಾದ ವಿರಕ್ತ ಆಶ್ರಮದವರೂ ಕೂಡ ಮನೆ-ಮಠಕಟ್ಟಿಕೊಂಡು ಗೃಹಸ್ಥರಂತೆ ವ್ಯಾಪಾರ ಮಾಡುವರು. ವಿವಾಹ ಸಂಬಂಧವಿರುವವರೇ ತಮ್ಮ ಸಂಬಂಧಿಗಳೆಂದು ತಿಳಿಯುವರು. ॥ ೧೪ ॥ ಭತ್ತ, ಗೋಧಿ ಮುಂತಾದ ಗಿಡಗಳು ಕಡುಚಿಕ್ಕದಾಗಿ ಬಿಡುವವು. ವೃಕ್ಷಗಳಲ್ಲಿ ಹೆಚ್ಚಿನವು ಶಮಿಯಂತೆ ಸಣ್ಣದಾಗಿ, ಮುಳ್ಳುಗಿಡಗಳೇ ಉಳಿಯುವವು. ಮೋಡಗಳಲ್ಲಿ ಮಿಂಚು ಬಳ್ಳಿಗಳು ಹೆಚ್ಚಾಗಿ ಕಾಣಿಸಿಕೊಂಡು ಮಳೆ ಕಡಿಮೆ ಬೀಳುವುದು. ಗೃಹಸ್ಥರ ಮನೆಗಳು ಅತಿಥಿ-ಸತ್ಕಾರ ಅಥವಾ ವೇದಧ್ವನಿರಹಿತವಾದ ಕಾರಣ ಅಥವಾ ಜನಸಂಖ್ಯೆಯು ಕಡಿಮೆಯಾಗಿ ಶೂನ್ಯವಾಗುವವು. ॥ ೧೫ ॥ ಪರೀಕ್ಷಿತನೇ ! ಕಲಿಯುಗವು ಮುಗಿಯುತ್ತಿರುವಂತೆ ಮನುಷ್ಯರ ಸ್ವಭಾವಗಳು ಕತ್ತೆಗಳಂತೆ ಆಗುವವು. ಜನರು ಸಂಸಾರದ ಹೊರೆಯನ್ನು ಹೊರುವ ವಿಷಯಿಗಳಾಗಿ ಹೋಗುವರು. ಇಂತಹ ಸ್ಥಿತಿಯಲ್ಲಿ ಧರ್ಮವನ್ನು ರಕ್ಷಿಸಲಿಕ್ಕಾಗಿ, ಭಗವಂತನು ಸತ್ವಗುಣವನ್ನು ಸ್ವೀಕರಿಸಿ ಅವತರಿಸುವನು. ॥ ೧೬ ॥

ಚರಾಚರಗುರೋರ್ವಿಷ್ಣೋರೀಶ್ವರಸ್ಯಾಖಿಲಾತ್ಮನಃ ।
ಧರ್ಮತ್ರಾಣಾಯ ಸಾಧೂನಾಂ ಜನ್ಮ ಕರ್ಮಾಪನುತ್ತಯೇ
॥ ೧೭ ॥

ಶಂಭಲಗ್ರಾಮಮುಖ್ಯಸ್ಯ ಬ್ರಾಹ್ಮಣಸ್ಯ ಮಹಾತ್ಮನಃ ।
ಭವನೇ ವಿಷ್ಣು ಯಶಸಃ ಕಲ್ಕಿಃ ಪ್ರಾದುರ್ಭವಿಷ್ಯತಿ
॥ ೧೮ ॥

ಅಶ್ವಮಾಶುಗಮಾರುಹ್ಯ ದೇವದತ್ತಂ ಜಗತ್ಪತಿಃ ।
ಅಸಿನಾಸಾಧುದಮನಮಷ್ಟೈಶ್ವರ್ಯಗುಣಾನ್ವಿತಃ
॥ ೧೯ ॥

ವಿಚರನ್ನಾಶುನಾ ಕ್ಷೋಣ್ಯಾಂ ಹಯೇನಾಪ್ರತಿಮದ್ಯುತಿಃ ।
ನೃಪಲಿಂಗಚ್ಛದೋ ದಸ್ಯೂನ್ಕೋಟಿಶೋ ನಿಹನಿಷ್ಯತಿ
॥ ೨೦ ॥

ಅಥ ತೇಷಾಂ ಭವಿಷ್ಯಂತಿ ಮನಾಂಸಿ ವಿಶದಾನಿ ವೈ ।
ವಾಸುದೇವಾಂಗರಾಗಾತಿಪುಣ್ಯಗಂಧಾನಿಲಸ್ಪೃಶಾಮ್ ।
ಪೌರಜಾನಪದಾನಾಂ ವೈ ಹತೇಷ್ವಖಿಲದಸ್ಯುಷು
॥ ೨೧ ॥

ತೇಷಾಂ ಪ್ರಜಾವಿಸರ್ಗಶ್ಚ ಸ್ಥವಿಷ್ಠಃ ಸಂಭವಿಷ್ಯತಿ ।
ವಾಸುದೇವೇ ಭಗವತಿ ಸತ್ತ್ವಮೂರ್ತೌ ಹೃದಿ ಸ್ಥಿತೇ
॥ ೨೨ ॥

ಯದಾವತೀರ್ಣೋ ಭಗವಾನ್ ಕಲ್ಕಿರ್ಧರ್ಮಪತಿರ್ಹರಿಃ ।
ಕೃತಂ ಭವಿಷ್ಯತಿ ತದಾ ಪ್ರಜಾಸೂತಿಶ್ಚ ಸಾತ್ತ್ವಿಕೀ
॥ ೨೩ ॥

ಯದಾಚಂದ್ರಶ್ಚ ಸೂರ್ಯಶ್ಚ ತಥಾ ತಿಷ್ಯಬೃಹಸ್ಪತೀ ।
ಏಕರಾಶೌ ಸಮೇಷ್ಯಂತಿ ತದಾ ಭವತಿ ತತ್ ಕೃತಮ್
॥ ೨೪ ॥

ಯೇಽತೀತಾ ವರ್ತಮಾನಾ ಯೇ ಭವಿಷ್ಯಂತಿ ಚ ಪಾರ್ಥಿವಾಃ ।
ತೇ ತ ಉದ್ದೇಶತಃ ಪ್ರೋಕ್ತಾ ವಂಶೀಯಾಃ ಸೋಮಸೂರ್ಯಯೋಃ
॥ ೨೫ ॥

ಆರಭ್ಯ ಭವತೋ ಜನ್ಮ ಯಾವನ್ನಂದಾಭಿಷೇಚನಮ್ ।
ಏತದ್ವರ್ಷಸಹಸ್ರಂ ತು ಶತಂ ಪಂಚದಶೋತ್ತರಮ್
॥ ೨೬ ॥

ಪ್ರಿಯಪರೀಕ್ಷಿತನೇ! ಸರ್ವವ್ಯಾಪಕ ಭಗವಾನ್ ವಿಷ್ಣುವು ಸರ್ವ ಶಕ್ತನಾಗಿರುವನು. ಅವನು ಸರ್ವಸ್ವರೂಪನಾಗಿದ್ದರೂ ಚರಾಚರ ಜಗತ್ತಿಗೆ ನಿಜವಾದ ಸದ್ಗುರುವಾಗಿದ್ದಾನೆ. ಅವನು ಸಾಧು-ಸತ್ಪುರುಷರ ಧರ್ಮವನ್ನು ರಕ್ಷಿಸಲಿಕ್ಕಾಗಿ, ಅವರ ಕರ್ಮಬಂಧವನ್ನು ತುಂಡರಿಸಿ ಅವರನ್ನು ಜನ್ಮ-ಮೃತ್ಯುವಿನ ಚಕ್ರದಿಂದ ಬಿಡಿಸಲೆಂದೇ ಅವತರಿಸಿರುವನು. ॥ ೧೭ ॥ ಆ ದಿನಗಳಲ್ಲಿ ಶಂಬಲಗ್ರಾಮದಲ್ಲಿ ವಿಷ್ಣುಯಶನೆಂಬ ಬ್ರಾಹ್ಮಣನೋರ್ವನು ಇರುವನು. ಅವನು ಉದಾರ ಹೃದಯಿಯೂ, ಭಕ್ತಿಭಾವ ಸಂಪನ್ನನಾಗುವನು. ಅವನ ಮನೆಯಲ್ಲಿ ಭಗವಂತನು ಕಲ್ಕಿಯಾಗಿ ಅವತರಿಸುವನು. ॥ ೧೮ ॥ ಅಷ್ಟಸಿದ್ಧಿಗಳ ಹಾಗೂ ಸಮಸ್ತ ಸದ್ಗುಣಗಳ ಏಕಮಾತ್ರ ಆಶ್ರಯನು ಭಗವಂತನೇ ಆಗಿರುವನು. ಸಮಸ್ತ ಚರಾಚರ ಜಗತ್ತಿನ ರಕ್ಷಕನೂ, ಸ್ವಾಮಿಯೂ ಆಗಿದ್ದಾನೆ. ಅವನು ದೇವದತ್ತವೆಂಬ ಶೀಘ್ರಗಾಮಿಯಾದ ಕುದುರೆಯನ್ನೇರಿ ಖಡ್ಗದಿಂದ ದುಷ್ಟರನ್ನು ತರಿದು ಬಿಡುವನು. ॥ ೧೯ ॥ ಅವನ ರೋಮ-ರೋಮಗಳಲ್ಲಿ ಅತುಲ ತೇಜವು ಹೊರಹೊಮ್ಮುವುದು. ಅವನು ತನ್ನ ಮಹಾವೇಗಶಾಲಿಯಾದ ಕುದುರೆಯನ್ನೇರಿ ಪೃಥಿವಿಯಲ್ಲಿ ಎಲ್ಲೆಡೆ ಸಂಚರಿಸಿ, ರಾಜರವೇಷದಲ್ಲಿ ಅಡಗಿಕೊಂಡಿದ್ದ ಕೋಟಿ-ಕೋಟಿ ದಸ್ಯುಗಳನ್ನು ಸಂಹರಿಸುವನು. ॥ ೨೦ ॥

ಪ್ರಿಯಪರೀಕ್ಷಿತನೇ! ಸಮಸ್ತ ದಸ್ಯುಗಳ ಸಂಹಾರವಾದಾಗ ನಗರದ ಮತ್ತು ದೇಶದ ಸಮಸ್ತ ಪ್ರಜೆಗಳ ಹೃದಯ ಪವಿತ್ರತೆಯಿಂದ ತುಂಬಿ ಹೋದೀತು. ಏಕೆಂದರೆ, ಕಲ್ಕಿ ಭಗವಂತನ ಶರೀರಕ್ಕೆ ಹಚ್ಚಿದ ಅಂಗರಾಗದ ಸ್ಪರ್ಶವನ್ನು ಪಡೆದ ಅತ್ಯಂತ ಪವಿತ್ರವಾದ ವಾಯುವು ಅವರನ್ನು ಸ್ಪರ್ಶಿಸುವುದರಿಂದ ಅವರು ಭಗವಂತನ ಶ್ರೀವಿಗ್ರಹದ ದಿವ್ಯ ಸುಗಂಧವನ್ನು ಪಡೆದುಕೊಳ್ಳುವರು. ॥ ೨೧ ॥ ಅವರ ಪವಿತ್ರ ಹೃದಯಗಳಲ್ಲಿ ಸತ್ತ್ವಮೂರ್ತಿಯಾದ ಭಗವಾನ್ ವಾಸುದೇವನು ವಿರಾಜಮಾನಾಗುವನು. ಮತ್ತೆ ಅವರ ಸಂತಾನಗಳು ಮೊದಲಿನಂತೆ ಹೃಷ್ಟ-ಪುಷ್ಟರೂ ಬಲಿಷ್ಠರೂ ಆಗುವರು.॥ ೨೨ ॥ ಪ್ರಜೆಯ ನಯನಮನೋಹರ ಹರಿಯೇ ಧರ್ಮದ ರಕ್ಷಕನು ಸ್ವಾಮಿಯೂ ಆಗಿರುವನು. ಅಂತಹ ಭಗವಂತನು ಕಲ್ಕಿಯಾಗಿ ಅವತರಿಸಿದಾಗಲೇ ಕೃತಯುಗದ ಪ್ರಾರಂಭವಾಗುವುದು ಹಾಗೂ ಪ್ರಜೆಯ ಸಂತಾನ-ಪರಂಪರೆಯು ತಾನಾಗಿಯೇ ಸತ್ತ್ವಗುಣದಿಂದ ಯುಕ್ತರಾಗುವರು. ॥ ೨೩ ॥ ಚಂದ್ರ, ಸೂರ್ಯ ಮತ್ತು ಬೃಹಸ್ಪತಿಯು ಒಂದೇ ಸಮಯದಲ್ಲಿ ಒಟ್ಟಿಗೆ ಪುಷ್ಯನಕ್ಷತ್ರದ ಪ್ರಥಮ ಚರಣದಲ್ಲಿ ಒಂದೇ ರಾಶಿಯಲ್ಲಿ ಪ್ರವೇಶಿಸಿದಾಗಲೇ ಕೃತಯುಗದ ಪ್ರಾರಂಭವಾಗುತ್ತದೆ. ॥ ೨೪ ॥

ಪರೀಕ್ಷಿತನೇ! ಚಂದ್ರವಂಶ ಮತ್ತು ಸೂರ್ಯವಂಶದಲ್ಲಿ ಆಗಿ ಹೋದ ರಾಜರ ಕುರಿತು, ಮುಂದೆ ಆಗುವವರ ಕುರಿತು ಎಲ್ಲವನ್ನು ಸಂಕ್ಷೇಪವಾಗಿ ನಾನು ನಿನಗೆ ವರ್ಣಿಸಿರುವೆನು. ॥ ೨೫ ॥ ನಿನ್ನ ಜನ್ಮದಿಂದ ಹಿಡಿದು ನಂದರಾಜನ ಪಟ್ಟಾಭಿಷೇಕದವರೆಗೆ ಒಂದು ಸಾವಿರದ ನೂರಹದಿನೈದು ವರ್ಷಗಳ ಸಮಯ ತಗಲುವುದು. ॥ ೨೬ ॥

ಸಪ್ತರ್ಷೀಣಾಂ ತು ಯೌ ಪೂರ್ವೌ ದೃಶ್ಯೇತೇ ಉದಿತೌ ದಿವಿ ।
ತಯೋಸ್ತು ಮಧ್ಯೇ ನಕ್ಷತ್ರಂ ದೃಶ್ಯತೇ ಯತ್ಸಮಂ ನಿಶಿ ॥ ೨೭ ॥

ತೇನೈತ ಋಷಯೋ ಯುಕ್ತಾಸ್ತಿಷ್ಠಂತ್ಯಬ್ದಶತಂ ನೃಣಾಮ್ ।
ತೇ ತ್ವದೀಯೇ ದ್ವಿಜಾಃ ಕಾಲೇ ಅಧುನಾ ಚಾಶ್ರಿತಾ ಮಘಾಃ ॥ ೨೮ ॥

ವಿಷ್ಣೋರ್ಭಗವತೋ ಭಾನುಃ ಕೃಷ್ಣಾಖ್ಯೋಽಸೌ ದಿವಂ ಗತಃ ।
ತದಾವಿಶತ್ಕಲಿರ್ಲೋಕಂ ಪಾಪೇ ಯದ್ರಮತೇ ಜನಃ ॥ ೨೯ ॥

ಯಾವತ್ಸ ಪಾದಪದ್ಮಾಭ್ಯಾಂ ಸ್ಪೃಶನ್ನಾಸ್ತೇ ರಮಾಪತಿಃ ।
ತಾವತ್ಕಲಿರ್ವೈ ಪೃಥಿವೀಂ ಪರಾಕ್ರಾಂತುಂ ನ ಚಾಶಕತ್ ॥ ೩೦ ॥

ಯದಾ ದೇವರ್ಷಯಃ ಸಪ್ತ ಮಘಾಸು ವಿಚರಂತಿ ಹಿ ।
ತದಾ ಪ್ರವೃತ್ತಸ್ತು ಕಲಿರ್ದ್ವಾದಶಾಬ್ದಶತಾತ್ಮಕಃ ॥ ೩೧ ॥

ಯದಾ ಮಘಾಭ್ಯೋ ಯಾಸ್ಯಂತಿ ಪೂರ್ವಾಷಾಢಾಂ ಮಹರ್ಷಯಃ ।
ತದಾ ನಂದಾತ್ಪ್ರಭೃತ್ಯೇಷ ಕಲಿರ್ವೃದ್ಧಿಂ ಗಮಿಷ್ಯತಿ ॥ ೩೨ ॥

ಯಸ್ಮಿನ್ಕೃಷ್ಣೋ ದಿವಂ ಯಾತಸ್ತಸ್ಮಿನ್ನೇವ ತದಾಹನಿ ।
ಪ್ರತಿಪನ್ನಂ ಕಲಿಯುಗಮಿತಿ ಪ್ರಾಹುಃ ಪುರಾವಿದಃ ॥ ೩೩ ॥

ದಿವ್ಯಾಬ್ದಾನಾಂ ಸಹಸ್ರಾಂತೇ ಚತುರ್ಥೇ ತು ಪುನಃ ಕೃತಮ್ ।
ಭವಿಷ್ಯತಿ ಯದಾ ನೃಣಾಂ ಮನ ಆತ್ಮಪ್ರಕಾಶಕಮ್ ॥ ೩೪ ॥

ಇತ್ಯೇಷ ಮಾನವೋ ವಂಶೋ ಯಥಾ ಸಂಖ್ಯಾಯತೇ ಭುವಿ ।
ತಥಾ ವಿಟ್ಶೂದ್ರ ವಿಪ್ರಾಣಾಂ ತಾಸ್ತಾ ಜ್ಞೇಯಾ ಯುಗೇ ಯುಗೇ ॥ ೩೫ ॥

ಏತೇಷಾಂ ನಾಮಲಿಂಗಾನಾಂ ಪುರುಷಾಣಾಂ ಮಹಾತ್ಮನಾಮ್ ।
ಕಥಾಮಾತ್ರಾವಶಿಷ್ಟಾನಾಂ ಕೀರ್ತಿರೇವ ಸ್ಥಿತಾ ಭುವಿ ॥ ೩೬ ॥

ದೇವಾಪಿಃ ಶಂತನೋರ್ಭ್ರಾತಾ ಮರುಶ್ಚೇಕ್ಷ್ವಾಕುವಂಶಜಃ ।
ಕಲಾಪಗ್ರಾಮ ಆಸಾತೇ ಮಹಾಯೋಗಬಲಾನ್ವಿತೌ ॥ ೩೭ ॥

ಆಕಾಶದಲ್ಲಿ ಸಪ್ತರ್ಷಿಯರ ಉದಯವಾದ ಸಮಯದಲ್ಲಿ ಮೊದಲಿಗೆ ಅವರಲ್ಲಿ ಎರಡೇ ನಕ್ಷತ್ರಗಳು ಕಂಡುಬರುತ್ತವೆ. ಅವುಗಳ ಮಧ್ಯದಲ್ಲಿ ದಕ್ಷಿಣೋತ್ತರ ರೇಖೆಯ ಸಮಭಾಗದಲ್ಲಿ ಅಶ್ವಿನಿಯೇ ಮೊದಲಾದ ನಕ್ಷತ್ರಗಳಲ್ಲಿನ ಒಂದೇ ನಕ್ಷತ್ರವು ಕಂಡುಬರುತ್ತದೆ. ॥ ೨೭ ॥ ಆ ನಕ್ಷತ್ರದೊಂದಿಗೆ ಸಪ್ತರ್ಷಿಗಳು ಮನುಷ್ಯಮಾನದ ಒಂದುನೂರು ವರ್ಷಗಳವರೆಗೆ ಇರುತ್ತಾರೆ. ಅವರು ನಿನ್ನ ಜನ್ಮ ಸಮಯದಲ್ಲಿ ಹಾಗೂ ಈಗಲೂ ಮಘಾನಕ್ಷತ್ರದಲ್ಲೇ ಇದ್ದಾರೆ. ॥ ೨೮॥

ಭಗವಂತನು ಶ್ರೀಕೃಷ್ಣನೆಂಬ ಹೆಸರಿನಿಂದ ಅವತರಿಸಿ ದಿವ್ಯ ಲೀಲೆಗಳನ್ನು ನಡೆಸಿ ತನ್ನ ಪರಮ ದಿವ್ಯಧಾಮಕ್ಕೆ ಹೊರಟುಹೋದ ಬಳಿಕ ಕಲಿಯು ಈ ಲೋಕವನ್ನು ಆಕ್ರಮಿಸಿದನು. ಅದರಿಂದಲೇ ಮನುಷ್ಯರ ಮತಿ-ಗತಿ ಪಾಪದ ಕಡೆಗೆ ವಾಲಿತು. ॥ ೨೯ ॥ ಲಕ್ಷ್ಮೀಪತಿಯಾದ ಭಗವಾನ್ ಶ್ರೀಕೃಷ್ಣನು ತನ್ನ ಚರಣಕಮಲಗಳಿಂದ ಭೂಮಿಯನ್ನು ಸ್ಪರ್ಶಿಸುತ್ತಿದ್ದವರೆಗೆ ಕಲಿಯುಗವು ಪೃಥಿವಿಯಲ್ಲಿ ತನ್ನ ಕಾಲನ್ನು ಊರದಾದನು. ॥ ೩೦ ॥ ಪರೀಕ್ಷಿತನೇ ! ಸಪ್ತರ್ಷಿಗಳು ಮಘಾನಕ್ಷತ್ರದಲ್ಲಿ ಸಂಚರಿಸುವ ಸಮಯದಲ್ಲೇ ಕಲಿಯುಗದ ಪ್ರಾರಂಭವಾಗುತ್ತದೆ. ಕಲಿಯುಗದ ಅವಧಿ ದೇವತೆಗಳ ವರ್ಷಗಣನೆಯಂತೆ ಹನ್ನೆರಡುನೂರು ವರ್ಷಗಳು ಅಂದರೆ, ಮನುಷ್ಯರ ಗಣನೆಯಂತೆ ನಾಲ್ಕು ಲಕ್ಷ ಮೂವತ್ತೆರಡು ಸಾವಿರ ವರ್ಷಗಳು. ॥ ೩೧ ॥ ಸಪ್ತರ್ಷಿಗಳು ಮಘಾನಕ್ಷತ್ರದಿಂದ ಪೂರ್ವಾಷಾಢಾ ನಕ್ಷತ್ರಕ್ಕೆ ಹೋದಾಗ ನಂದರಾಜನ ರಾಜ್ಯವಿರುವುದು. ಆಗಿನಿಂದಲೇ ಕಲಿಯುಗದ ವೃದ್ಧಿ ಪ್ರಾರಂಭವಾಗುವುದು. ॥ ೩೨ ॥ ಭಗವಾನ್ ಶ್ರೀಕೃಷ್ಣನು ತನ್ನ ಪರಮಧಾಮಕ್ಕೆ ಪ್ರಯಾಣ ಮಾಡಿದ ದಿನವೇ ಕಲಿಯುಗದ ಪ್ರಾರಂಭವಾಯಿತೆಂದು ಪುರಾತತ್ತ್ವವನ್ನು ಬಲ್ಲವರು ಹೇಳುತ್ತಾರೆ. ॥ ೩೩ ॥ ಪರೀಕ್ಷಿತನೆ! ದೇವತೆಗಳ ವರ್ಷಗಣನೆಯಂತೆ ಒಂದು ಸಾವಿರ ವರ್ಷಗಳು ಕಳೆದುಹೋದಾಗ ಕಲಿಯುಗದ ಕೊನೆಯ ದಿನಗಳಲ್ಲಿ ಪುನಃ ಭಗವಾನ್ ಕಲ್ಕಿಯ ಕೃಪೆಯಿಂದ ಮನುಷ್ಯರ ಮನಸ್ಸುಗಳಲ್ಲಿ ಸಾತ್ತ್ವಿಕತೆಯ ಸಂಚಾರವಾಗುವುದು. ಜನರು ತಮ್ಮ ವಾಸ್ತವಿಕ ಸ್ವರೂಪವನ್ನು ತಿಳಿದುಕೊಳ್ಳುವರು ಹಾಗೂ ಆಗಿನಿಂದಲೇ ಕೃತಯುಗದ ಪ್ರಾರಂಭವೂ ಆಗುವುದು. ॥ ೩೪॥

ಪರೀಕ್ಷಿತನೇ ! ನಾನಾದರೋ ನಿನಗೆ ಕೇವಲ ಮನುವಂಶವನ್ನೇ ಸಂಕ್ಷೇಪವಾಗಿ ವರ್ಣಿಸಿರುವೆನು. ಮನುವಂಶದ ಗಣನೆಯಾಗುವಂತೆಯೇ ಪ್ರತಿಯೊಂದು ಬ್ರಾಹ್ಮಣ, ವೈಶ್ಯ, ಶೂದ್ರರ ವಂಶ ಪರಂಪರೆಯನ್ನು ಭಾವಿಸಬೇಕು. ॥ ೩೫ ॥ ರಾಜನೇ! ಯಾವ ಪುರುಷರ ಮತ್ತು ಮಹಾತ್ಮರ ಕುರಿತು ನಾನು ನಿನಗೆ ವರ್ಣಿಸಿರುವೆನೋ, ಅವರನ್ನು ಕೇವಲ ಹೆಸರಿನಿಂದಲೇ ಈಗ ಗುರುತಿಸಲಾಗುತ್ತದೆ. ಈಗ ಅವರಿಲ್ಲ ಕೇವಲ ಅವರ ಕಥೆಗಳು ಉಳಿದುಕೊಂಡಿವೆ. ಈಗ ಅವರ ಕೀರ್ತಿಯೇ ಪೃಥಿವಿಯಲ್ಲಿ ಅಲ್ಲಲ್ಲಿ ಕೇಳಲು ಬರುತ್ತದೆ. ॥ ೩೬ ॥ ಭೀಷ್ಮಪಿತಾಮಹರ ತಂದೆ ರಾಜಾಶಂತನುವಿನ ತಮ್ಮ ದೇವಾಪಿಯು ಮತ್ತು ಇಕ್ಷ್ವಾಕುವಂಶದ ಮರು ಎಂಬುವರು ಈ ಸಮಯದಲ್ಲಿ ಕಲಾಪಗ್ರಾಮದಲ್ಲಿ ನೆಲೆಸಿರುವರು. ಅವರು ಬಹಳ ದೊಡ್ಡ ಯೋಗಬಲದಿಂದ ಕೂಡಿರುವರು. ॥ ೩೭ ॥

ತಾವಿಹೃತ್ಯ ಕಲೇರಂತೇ ವಾಸುದೇವಾನುಶಿಕ್ಷಿತೌ ।
ವರ್ಣಾಶ್ರಮಯುತಂ ಧರ್ಮಂ ಪೂರ್ವವತ್ಪ್ರಥಯಿಷ್ಯತಃ
॥ ೩೮ ॥

ಕಲಿಯುಗದ ಕೊನೆಯಲ್ಲಿ ಭಗವಾನ್ ಕಲ್ಕಿಯ ಅಪ್ಪಣೆಯಂತೆ ಅವರು ಪುನಃ ಇಲ್ಲಿಗೆ ಬಂದು ಮೊದಲಿನಂತೆ ವರ್ಣಾಶ್ರಮ ಧರ್ಮವನ್ನು ವಿಸ್ತಾರಗೊಳಿಸುವರು. ॥೩೮ ॥

ಕೃತಂ ತ್ರೇತಾ ದ್ವಾಪರಂ ಚ ಕಲಿಶ್ಚೇತಿ ಚತುರ್ಯುಗಮ್ ।
ಅನೇನ ಕ್ರಮಯೋಗೇನ ಭುವಿ ಪ್ರಾಣಿಷು ವರ್ತತೇ
॥ ೩೯ ॥

ಕೃತ, ತ್ರೇತ, ದ್ವಾಪರ ಮತ್ತು ಕಲಿ ಎಂಬ ಈ ನಾಲ್ಕುಯುಗಗಳು ಹಿಂದಿನ ಕ್ರಮದಂತೆ ತಮ್ಮ-ತಮ್ಮ ಸಮಯದಲ್ಲಿ ಪೃಥಿವಿಯಲ್ಲಿನ ಪ್ರಾಣಿಗಳ ಮೇಲೆ ತಮ್ಮ ಪ್ರಭಾವವನ್ನು ಬೀರುತ್ತಾ ಇರುವವು. ॥ ೩೯ ॥

ರಾಜನ್ನೇತೇ ಮಯಾ ಪ್ರೋಕ್ತಾ ನರದೇವಾಸ್ತಥಾಪರೇ ।
ಭೂಮೌ ಮಮತ್ವಂ ಕೃತ್ವಾಂತೇ ಹಿತ್ವೇಮಾಂ ನಿಧನಂ ಗತಾಃ
॥ ೪೦ ॥

ಪರೀಕ್ಷಿತನೇ ! ನಾನು ನಿನಗೆ ವರ್ಣಿಸಿದ ರಾಜರೆಲ್ಲರೂ ಹಾಗೂ ಇವರಲ್ಲದೆ ಇತರ ರಾಜರೂ ಕೂಡ ಈ ಪೃಥಿವಿಯನ್ನು ನನ್ನದು-ನನ್ನದು ಎಂದು ಹೇಳುತ್ತಲೇ ಇದ್ದರು. ಆದರೆ ಕೊನೆಗೆ ಸತ್ತು ಮಣ್ಣುಪಾಲಾದರು. ॥ ೪೦ ॥

ಕೃಮಿವಿಡ್ಭಸ್ಮಸಂಜ್ಞಾಂತೇ ರಾಜನಾಮ್ನೋಽಪಿ ಯಸ್ಯ ಚ ।
ಭೂತಧ್ರುಕ್ ತತ್ ಕೃತೇ ಸ್ವಾರ್ಥಂ ಕಿಂ ವೇದ ನಿರಯೋ ಯತಃ
॥ ೪೧ ॥

ಈ ಶರೀರವನ್ನು ಯಾರೇ ರಾಜರೆಂದು ಹೇಳಲಿ; ಆದರೆ ಕೊನೆಯಲ್ಲಿ ಇದು ಕ್ರಿಮಿಗಳ ರಾಶಿ ಅಥವಾ ಬೂದಿಯಾಗಿಯೇ ಪರಿಣತವಾಗುವುದು. ಬೂದಿಯಾಗಿಯೇ ಇರುವುದು. ಇದೇ ಶರೀರಕ್ಕಾಗಿ ಅಥವಾ ಇದರ ಸಂಬಂಧಿಗಳಿಗಾಗಿ ಯಾವುದೇ ಪ್ರಾಣಿಯನ್ನು ಹಿಂಸಿಸುವವರು ತಮ್ಮ ಸ್ವಾರ್ಥವಾಗಲೀ, ಪರಮಾರ್ಥವಾಗಲೀ ಅರಿತವರಲ್ಲ. ಏಕೆಂದರೆ, ಪ್ರಾಣಿಗಳನ್ನು ಹಿಂಸಿಸುವುದು ನರಕದ ದ್ವಾರವೇ ಆಗಿದೆ. ॥ ೪೧ ॥

ಕಥಂ ಸೇಯಮಖಂಡಾ ಭೂಃ ಪೂರ್ವೈರ್ಮೇ ಪುರುಷೈರ್ಧೃತಾ ।
ಮತ್ಪುತ್ರಸ್ಯ ಚ ಪೌತ್ರಸ್ಯ ಮತ್ಪೂರ್ವಾ ವಂಶಜಸ್ಯ ವಾ
॥ ೪೨ ॥

ನನ್ನ ತಾತ-ಮುತ್ತಾತಂದಿರು ಈ ಅಖಂಡ ಭೂಮಂಡಲಕ್ಕೆ ಶಾಸಕರಾಗಿದ್ದರು. ಈಗ ಇದು ನನ್ನ ಅಧೀನದಲ್ಲಿದೆ. ನಾನು ಸತ್ತ ಬಳಿಕ ನನ್ನ ಮಕ್ಕಳು-ಮೊಮ್ಮಕ್ಕಳು, ನನ್ನ ವಂಶದವರು ಹೀಗೆ ಇದನ್ನು ಅನುಭವಿಸುವರು ಎಂದು ಆ ಜನರು ಯೋಚಿಸುತ್ತಲೇ ಇರುವರು. ॥ ೪೨ ॥

ತೇಜೋಽಬನ್ನಮಯಂ ಕಾಯಂ ಗೃಹೀತ್ವಾಽತ್ಮತಯಾ ಬುಧಾಃ ।
ಮಹೀಂ ಮಮತಯಾ ಚೋಭೌ ಹಿತ್ವಾಂತೇಽದರ್ಶನಂ ಗತಾಃ
॥ ೪೩ ॥

ಅಂತಹ ಆ ಮೂರ್ಖರು ಬೆಂಕಿ, ನೀರು, ಮಣ್ಣಿನ ಈ ಶರೀರವನ್ನು ತನ್ನದೆಂದು ತಿಳಿದುಕೊಂಡು, ದುರಭಿಮಾನದಿಂದ ಈ ಪೃಥಿವಿಯು ನನ್ನದಾಗಿದೆ ಎಂದು ಜಂಭಕೊಚ್ಚಿಕೊಳ್ಳುವರು. ಕೊನೆಗೆ ಈ ಶರೀರ ಮತ್ತು ಪೃಥಿವಿಯನ್ನು ಬಿಟ್ಟು ಅವರು ಅದೃಶ್ಯರಾಗಿ ಹೋಗುವರು. ॥ ೪೩ ॥

ಯೇ ಯೇ ಭೂಪತಯೋ ರಾಜನ್ ಭುಂಜಂತಿ ಭುವಮೋಜಸಾ ।
ಕಾಲೇನ ತೇ ಕೃತಾಃ ಸರ್ವೇ ಕಥಾಮಾತ್ರಾಃ ಕಥಾಸು ಚ
॥ ೪೪ ॥

ಪ್ರಿಯ ಪರೀಕ್ಷಿತನೇ! ಯಾವ ಯಾವ ರಾಜರು ಬಹಳ ಉತ್ಸಾಹದಿಂದ ಮತ್ತು ಬಲ-ಪೌರುಷದಿಂದ ಈ ಭೂಮಿಯನ್ನು ಅನುಭವಿಸಿದರೋ ಅವರೆಲ್ಲರನ್ನೂ ಕಾಲವು ತನ್ನ ವಿಕರಾಳ ಮುಖದಿಂದ ನುಂಗಿಹಾಕಿತು. ಈಗ ಕೇವಲ ಇತಿಹಾಸದಲ್ಲಿ ಅವರ ಕಥೆಮಾತ್ರ ಉಳಿದುಕೊಂಡಿದೆ. ॥ ೪೪ ॥

*ಎರಡನೆಯ ಅಧ್ಯಾಯವು ಮುಗಿಯಿತು. ॥ ೨ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದ್ವಾದಶಸ್ಕಂಧೇ ದ್ವಿತೀಯೋಽಧ್ಯಾಯಃ ॥ ೨ ॥

# ಮೂರನೆಯ ಅಧ್ಯಾಯ

## ಕಲಿಯುಗಧರ್ಮ ಮತ್ತು ಕಲಿಯುಗದ ದೋಷಗಳಿಂದ ಪಾರಾಗುವ ಉಪಾಯ – ನಾಮಸಂಕೀರ್ತನೆ

ಶ್ರೀಶುಕ ಉವಾಚ

ದೃಷ್ಟ್ವಾಽತ್ಮನಿ ಜಯೇ ವ್ಯಗ್ರಾನ್ನೃಪಾನ್ ಹಸತಿ ಭೂರಿಯಮ್ ।

ಅಹೋ ಮಾ ವಿಜಿಗೀಷಂತಿ ಮೃತ್ಯೋಃ ಕ್ರೀಡನಕಾ ನೃಪಾಃ
॥ ೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ರಾಜರುಗಳು ತನ್ನ ಮೇಲೆ ವಿಜಯ ಸಾಧಿಸಲು ಹಾತೊರೆಯುತ್ತಿರುವುದನ್ನು ನೋಡಿ ಭೂದೇವಿಯು – 'ಎಂತಹ ಮೂರ್ಖರು ಇವರು ? ತಾವೇ ಮೃತ್ಯುವಿನ ಬೊಂಬೆಯಾಗಿರುವಾಗ ನನ್ನನ್ನು ಜಯಿಸಬೇಕೆಂದು ಹವಣಿಸುತ್ತಿದ್ದಾರಲ್ಲ! ಎಂದು ನಗುತ್ತಾಳೆ. ॥ ೧ ॥

ಕಾಮ ಏಷ ನರೇಂದ್ರಾಣಾಂ ಮೋಘಃ ಸ್ಯಾದ್ವಿದುಷಾಮಪಿ ।
ಯೇನ ಫೇನೋಪಮೇ ಪಿಂಡೇ ಯೇಽತಿವಿಶ್ರಂಭಿತಾ ನೃಪಾಃ ॥ ೨ ॥

ಪೂರ್ವಂ ನಿರ್ಜಿತ್ಯ ಷಡ್ವರ್ಗಂ ಜೇಷ್ಯಾಮೋ ರಾಜಮಂತ್ರಿಣಃ ।
ತತಃ ಸಚಿವಪೌರಾಪ್ತಕರೀಂದ್ರಾನಸ್ಯ ಕಂಟಕಾನ್ ॥ ೩ ॥

ಏವಂ ಕ್ರಮೇಣ ಜೇಷ್ಯಾಮಃ ಪೃಥ್ವೀಂ ಸಾಗರಮೇಖಲಾಮ್ ।
ಇತ್ಯಾಶಾಬದ್ಧಹೃದಯಾ ನ ಪಶ್ಯಂತ್ಯಂತಿಕೇಽಂತಕಮ್ ॥ ೪ ॥

ಸಮುದ್ರಾವರಣಾಂ ಜಿತ್ವಾ ಮಾಂ ವಿಶಂತ್ಯಬ್ಧಿಮೋಜಸಾ ।
ಕಿಯದಾತ್ಮಜಯಸ್ಯೈತನ್ಮುಕ್ತಿರಾತ್ಮಜಯೇ ಫಲಮ್ ॥ ೫ ॥

ಯಾಂ ವಿಸೃಜ್ಯೈವ ಮನವಸ್ತತ್ಸುತಾಶ್ಚ ಕುರೂದ್ವಹ ।
ಗತಾ ಯಥಾಗತಂ ಯುದ್ಧೇ ತಾಂ ಮಾಂ ಜೇಷ್ಯಂತ್ಯಬುದ್ಧಯಃ ॥ ೬ ॥

ಮತ್ಕೃತೇ ಪಿತೃಪುತ್ರಾಣಾಂ ಭ್ರಾತೄಣಾಂ ಚಾಪಿ ವಿಗ್ರಹಃ ।
ಜಾಯತೇ ಹ್ಯಸತಾಂ ರಾಜ್ಯೇ ಮಮತಾಬದ್ಧಚೇತಸಾಮ್ ॥ ೭ ॥

ಮಮೈವೇಯಂ ಮಹೀ ಕೃತ್ಸ್ನಾ ನ ತೇ ಮೂಢೇತಿ ವಾದಿನಃ ।
ಸ್ಪರ್ಧಮಾನಾ ಮಿಥೋ ಘ್ನಂತಿ ಮ್ರಿಯಂತೇ ಮತ್ಕೃತೇ ನೃಪಾಃ ॥ ೮ ॥

ಪೃಥುಃ ಪುರೂರವಾ ಗಾಧಿರ್ನಹುಷೋ ಭರತೋಽರ್ಜುನಃ ।
ಮಾಂಧಾತಾ ಸಗರೋ ರಾಮಃ ಖಟ್ವಾಂಗೋ ಧುಂಧುಹಾ ರಘುಃ ॥ ೯ ॥

ತೃಣಬಿಂದುರ್ಯಯಾತಿಶ್ಚ ಶರ್ಯಾತಿಃ ಶಂತನುರ್ಗಯಃ ।
ಭಗೀರಥಃ ಕುವಲಯಾಶ್ವಃ ಕಕುತ್ಸ್ಥೋ ನೈಷಧೋ ನೃಗಃ ॥ ೧೦ ॥

ತಾವು ಒಂದಲ್ಲ ಒಂದು ದಿನ ಸಾವನ್ನು ಅಪ್ಪಲೇಬೇಕು ಎಂದು ತಿಳಿದಿದ್ದರೂ ಈ ರಾಜರು ನನ್ನನ್ನು ಜಯಿಸಬೇಕೆಂದು ವ್ಯರ್ಥವಾಗಿ ಬಯಸುತ್ತಿದ್ದಾರಲ್ಲ! ನಿಜವಾಗಿ ಕಾಮನೆಗಳಿಂದ ಕುರುಡರಾದ ಇವರು ನೀರಮೇಲಣ ಗುಳ್ಳೆಯಂತೆ ಕ್ಷಣಭಂಗುರವಾದ ಶರೀರದ ಮೇಲೆ ವಿಶ್ವಾಸವಿರಿಸಿ ಮೋಸಹೋಗುತ್ತಿದ್ದಾರಲ್ಲ! ॥ ೨ ॥ ಅವರು ಯೋಚಿಸುತ್ತಾರೆ – ನಾವು ಮೊದಲು ಮನಸ್ಸು ಸಹಿತ ಐದು ಇಂದ್ರಿಯಗಳನ್ನು ವಶಪಡಿಸಿಕೊಳ್ಳುವೆವು. ಏಕೆಂದರೆ, ಇವನ್ನು ಗೆದ್ದುಕೊಳ್ಳದೆ ಹೊರಗಿನ ಶತ್ರುಗಳನ್ನು ಗೆಲ್ಲುವುದು ಕಷ್ಟವಾಗಿದೆ. ಅನಂತರ ನಮ್ಮ ಶತ್ರುಗಳನ್ನು, ಮಂತ್ರಿ-ಅಮಾತ್ಯರನ್ನು, ನಾಗರಿಕರನ್ನು, ಮುಖಂಡರನ್ನು, ಸೈನ್ಯವನ್ನು ವಶಪಡಿಸಿಕೊಳ್ಳುವೆವು. ನಮ್ಮ ವಿಜಯದ ಹಾದಿಯಲ್ಲಿ ಮುಳ್ಳಾಗುವವರನ್ನು ನಾವು ಜಯಿಸಿಬಿಡಬಹುದು. ॥ ೩ ॥ ಹೀಗೆ ನಿಧಾನವಾಗಿ ಇಡೀ ಪೃಥ್ವಿಯೇ ನಮ್ಮ ಕೈವಶವಾಗಬಹುದು. ಮತ್ತೆ ಸಮುದ್ರವೇ ಕಂದಕದಂತೆ ನಮಗೆ ಉಪಯೋಗವಾಗಬಹುದು. ಇಂತಹ ಅನೇಕ ಆಸೆಗಳನ್ನು ಮನಸ್ಸಿನಲ್ಲಿರಿಸಿಕೊಳ್ಳುವರು. ಆದರೆ ಅವರ ತಲೆಯ ಮೇಲೆ ಮೃತ್ಯುವೇ ಕೂತಿದೆ ಎಂಬುದು ಸ್ವಲ್ಪವೂ ತೋಚುವುದಿಲ್ಲ. ॥ ೪ ॥ ಇಷ್ಟೇ ಅಲ್ಲ, ಒಂದು ದ್ವೀಪವು ಕೈವಶವಾದರೆ ಮತ್ತೊಂದು ದ್ವೀಪವನ್ನು ಗೆದ್ದುಕೊಳ್ಳಲು ಬಹಳ ಸಕ್ತಿ, ಉತ್ಸಾಹದಿಂದ ಸಮುದ್ರ ಯಾತ್ರೆಯನ್ನು ಮಾಡುತ್ತಾರೆ. ತನ್ನ ಮನಸ್ಸು ಇಂದ್ರಿಯಗಳನ್ನು ವಶಪಡಿಸಿಕೊಂಡು ಜನರು ಮುಕ್ತಿಯನ್ನು ಪಡೆಯ ಬಹುದಾಗಿದೆ. ಆದರೆ ಇವರು ಅವುಗಳನ್ನು ವಶಪಡಿಸಿಕೊಂಡರೂ ಅಲ್ಪವಾದ ಭೂಭಾಗವನ್ನು ಪಡೆದುಕೊಳ್ಳುತ್ತಾರೆ. ಇಷ್ಟು ಪರಿಶ್ರಮದ ಮತ್ತು ಆತ್ಮಸಂಯದ ಫಲವು ಎಷ್ಟು ತುಚ್ಛವಾಗಿದೆ ?" ॥ ೫ ॥ ಪರೀಕ್ಷಿತನೇ ! ಪೃಥಿವಿಯು ಹೇಳುತ್ತಾಳೆ – "ದೊಡ್ಡ-ದೊಡ್ಡ ಮನುಗಳು, ಅವರ ವೀರಪುತ್ರರು ನನ್ನನ್ನು ಬಿಟ್ಟು ಎಲ್ಲಿಂದ ಬಂದಿದ್ದರೋ ಅಲ್ಲಿಗೆ ಬರಿಗೈಯಿಂದ ಹೊರಟುಹೋದರು. ನನ್ನನ್ನು ತಮ್ಮೊಂದಿಗೆ ಕೊಂಡೊಯ್ಯಲಾಗಲಿಲ್ಲ. ಈಗ ಈ ಮೂರ್ಖರಾಜರು ನನ್ನನ್ನು ಯುದ್ಧದಲ್ಲಿ ಗೆದ್ದು ವಶಪಡಿಸಿಕೊಳ್ಳಲು ಬಯಸುತ್ತಿದ್ದಾರೆ. ॥ ೬ ॥ ಈ ಪೃಥಿವಿಯು ನನ್ನದಾಗಿದೆ ಎಂಬ ದುರಾಗ್ರಹವು ಯಾರ ಚಿತ್ತದಲ್ಲಿ ದೃಢಮೂಲವಾಗಿದೆಯೋ ಅಂತಹ ದುಷ್ಟರ ರಾಜ್ಯದಲ್ಲಿ ನನಗಾಗಿ ತಂದೆ-ಮಕ್ಕಳು, ಅಣ್ಣ-ತಮ್ಮಂದಿರು ಪರಸ್ಪರ ಕಾದಾಡುತ್ತಾರೆ. ॥ ೭ ॥ ಅವರು ಒಬ್ಬರು ಮತ್ತೊಬ್ಬರಿಗೆ – ಎಲೈ ಮೂರ್ಖನೇ ! ಈ ಇಡೀ ಪೃಥಿವಿಯು ನನ್ನದಾಗಿದೆ, ನಿನ್ನದಲ್ಲ, ಹೀಗೆ ರಾಜರು ಹೇಳುತ್ತಾ ಇರುತ್ತಾರೆ. ಹೀಗೆ ಪರಸ್ಪರ ಸ್ಪರ್ಧಿಸುತ್ತಾ ನನಗಾಗಿ ಒಬ್ಬರು ಮತ್ತೊಬ್ಬರನ್ನು ಕೊಲ್ಲುತ್ತಾ ತಾವು ಸತ್ತುಹೋಗುವರು. ॥ ೮ ॥ ಪೃಥು, ಪುರೂರವ, ಗಾಧಿ, ನಹುಷ, ಭರತ, ಸಹಸ್ರಾರ್ಜುನ, ಮಾಂಧಾತಾ, ಸಗರ, ರಾಮ, ಖಟ್ವಾಂಗ, ಧುಂಧುಮಾರ, ರಘು, ತೃಣಬಿಂದು, ಯಯಾತಿ, ಶರ್ಯಾತಿ, ಶಂತನು, ಗಯ, ಭಗೀರಥ, ಕುವಲಯಾಶ್ವ, ಕಕುಸ್ಥ ನಳ, ನೃಗ, ಹಿರಣ್ಯಕಶಿಪು, ವೃತ್ರಾಸುರ, ಲೋಕದ್ರೋಹಿರಾವಣ, ನಮೂಚಿ, ಶಂಬರ, ಭೌಮಾಸುರ, ಹಿರಣ್ಯಾಕ್ಷ, ತಾರಕಾಸುರ ಮತ್ತು ಅನೇಕ

ಹಿರಣ್ಯಕಶಿಪುರ್ವೃತ್ರೋ ರಾವಣೋ ಲೋಕರಾವಣಃ ।
ನಮುಚಿಃ ಶಂಬರೋ ಭೌಮೋ ಹಿರಣ್ಯಾಕ್ಷೋಽಥ ತಾರಕಃ
॥ ೧೧ ॥

ಅನ್ಯೇ ಚ ಬಹವೋ ದೈತ್ಯಾ ರಾಜಾನೋ ಯೇ ಮಹೇಶ್ವರಾಃ ।
ಸರ್ವೇ ಸರ್ವವಿದಃ ಶೂರಾಃ ಸರ್ವೇ ಸರ್ವಜಿತೋಽಜಿತಾಃ
॥ ೧೨ ॥

ಮಮತಾಂ ಮಯ್ಯವರ್ತಂತ ಕೃತ್ವೋಚ್ಚೈರ್ಮರ್ತ್ಯಧರ್ಮಿಣಃ ।
ಕಥಾವಶೇಷಾಃ ಕಾಲೇನ ಹ್ಯಕೃತಾರ್ಥಾಃ ಕೃತಾ ವಿಭೋ
॥ ೧೩ ॥

ಕಥಾ ಇಮಾಸ್ತೇ ಕಥಿತಾ ಮಹೀಯಸಾಂ
ವಿತಾಯ ಲೋಕೇಷು ಯಶಃ ಪರೇಯುಷಾಮ್ ।
ವಿಜ್ಞಾನವೈರಾಗ್ಯವಿವಕ್ಷಯಾ ವಿಭೋ
ವಚೋವಿಭೂತೀರ್ನ ತು ಪಾರಮಾರ್ಥ್ಯಮ್ ॥ ೧೪ ॥

ಯಸ್ತೂತ್ತಮಶ್ಲೋಕಗುಣಾನುವಾದಃ
ಸಂಗೀಯತೇಽಭೀಕ್ಷ್ಣಮಮಂಗಲಘ್ನಃ ।
ತಮೇವ ನಿತ್ಯಂ ಶೃಣುಯಾದಭೀಕ್ಷ್ಣಂ
ಕೃಷ್ಣೇಽಮಲಾಂ ಭಕ್ತಿಮಭೀಪ್ಸಮಾನಃ ॥ ೧೫ ॥

ರಾಜೋವಾಚ

ಕೇನೋಪಾಯೇನ ಭಗವನ್ಕಲೇರ್ದೋಷಾನ್ಕಲೌ ಜನಾಃ ।
ವಿಧಮಿಷ್ಯಂತ್ಯುಪಚಿತಾಂಸ್ತನ್ಮೇ ಬ್ರೂಹಿ ಯಥಾ ಮುನೇ
॥ ೧೬ ॥

ಯುಗಾನಿ ಯುಗಧರ್ಮಾಂಶ್ಚ ಮಾನಂ ಪ್ರಲಯಕಲ್ಪಯೋಃ ।
ಕಾಲಸ್ಯೇಶ್ವರರೂಪಸ್ಯ ಗತಿಂ ವಿಷ್ಣೋರ್ಮಹಾತ್ಮನಃ
॥ ೧೭ ॥

ಶ್ರೀಶುಕ ಉವಾಚ

ಕೃತೇ ಪ್ರವರ್ತತೇ ಧರ್ಮಶ್ಚತುಷ್ಪಾತ್ತಜ್ಜನೈರ್ಧೃತಃ ।
ಸತ್ಯಂ ದಯಾ ತಪೋ ದಾನಮಿತಿ ಪಾದಾ ವಿಭೋರ್ನೃಪ
॥ ೧೮ ॥

ಸಂತುಷ್ಟಾಃ ಕರುಣಾ ಮೈತ್ರಾಃ ಶಾಂತಾ ದಾಂತಾಸ್ತಿತಿಕ್ಷವಃ ।
ಆತ್ಮಾರಾಮಾಃ ಸಮದೃಶಃ ಪ್ರಾಯಶಃ ಶ್ರಮಣಾ ಜನಾಃ
॥ ೧೯ ॥

ದೈತ್ಯರು, ಶಕ್ತಿಶಾಲಿಯಾದ ರಾಜರು ಆಗಿ ಹೋದರು. ಇವರೆಲ್ಲರೂ ಎಲ್ಲವನ್ನೂ ಅರಿತಿದ್ದರು. ಶೂರರಾಗಿದ್ದರು. ಎಲ್ಲರೂ ದಿಗ್ವಿಜಯ ದಲ್ಲಿ ಇತರರನ್ನು ಸೋಲಿಸಿದರು, ಇತರರು ಇವರನ್ನು ಗೆಲ್ಲ ಲಾಗಲಿಲ್ಲ; ಆದರೆ ಎಲ್ಲರೂ ಮೃತ್ಯುವಿಗೆ ತುತ್ತಾದರು. ರಾಜನೇ! ಅವರು ತಮ್ಮ ಅಂತಃಕರಣದಲ್ಲಿ ನನ್ನ (ಪೃಥಿವಿ) ಕುರಿತು ಮಮತೆ ಯನ್ನಿಟ್ಟಿದ್ದರು ಹಾಗೂ 'ಈ ಪೃಥಿವಿಯು ನನ್ನದಾಗಿದೆ' ಎಂದು ಭಾವಿಸಿದ್ದರು. ಆದರೆ ವಿಕರಾಳವಾದ ಕಾಲನು ಅವರ ಲಾಲಸೆ ಯನ್ನು ಪೂರ್ಣವಾಗಲು ಬಿಡಲಿಲ್ಲ. ಈಗ ಅವರ ಬಲ-ಪೌರುಷ, ಶರೀರ ಮುಂತಾದವುಗಳು ಯಾವುದೂ ಉಳಿಯದೇ ಕೇವಲ ಅವರ ಕಥೆ ಮಾತ್ರ ಉಳಿದುಕೊಂಡಿದೆ. ॥ ೯-೧೩ ॥

ಪರೀಕ್ಷಿತನೇ! ಜಗತ್ತಿನಲ್ಲಿ ದೊಡ್ಡ-ದೊಡ್ಡ ಪ್ರತಾಪಿಗಳಾದ ಮಹಾಪುರುಷರು ಆಗಿದ್ದಾರೆ. ಅವರು ಲೋಕಗಳಲ್ಲಿ ತಮ್ಮ ಕೀರ್ತಿ ಯನ್ನು ವಿಸ್ತರಿಸಿ ಇಲ್ಲಿಂದ ಹೊರಟುಹೋದರು. ನಾನು ನಿನಗೆ ಜ್ಞಾನ ಮತ್ತು ವೈರಾಗ್ಯದ ಉಪದೇಶವನ್ನು ಕೊಡಲೆಂದೇ ಅವರ ಕಥೆಗಳನ್ನು ಹೇಳಿರುವೆನು. ಇದೆಲ್ಲವೂ ವಾಣಿಯ ವಿಲಾಸವಾಗಿದೆ. ಇದರಲ್ಲಿ ಪಾರಮಾರ್ಥಿಕ ಸತ್ಯವು ಸ್ವಲ್ಪವೂ ಇಲ್ಲ. ॥ ೧೪ ॥ ಭಗವಾನ್ ಶ್ರೀಕೃಷ್ಣನ ಗುಣಾನುವಾದವೇ ಸಮಸ್ತ ಅಮಂಗಳವನ್ನು ನಾಶಮಾಡುವಂತಹುದು. ದೊಡ್ಡ-ದೊಡ್ಡ ಮಹಾತ್ಮರೂ ಅದನ್ನೇ ಗಾಯನಮಾಡುತ್ತಾ ಇರುತ್ತಾರೆ. ಭಗವಾನ್ ಶ್ರೀಕೃಷ್ಣನ ಚರಣ ಗಳಲ್ಲಿ ಅನನ್ಯ ಪ್ರೇಮಮಯ ಭಕ್ತಿಯ ಬಯಕೆಯಿರುವವರು ನಿತ್ಯ-ನಿರಂತರ ಭಗವಂತನ ದಿವ್ಯ ಗುಣಾನುವಾದವನ್ನೇ ಶ್ರವಣ ಸುತ್ತಾ ಇರಬೇಕು. ॥ ೧೫ ॥

**ಪರೀಕ್ಷಿದ್ರಾಜನು ಕೇಳಿದನು** - ಮಹಾತ್ಮರೇ! ನನಗಾದರೋ ಕಲಿಯುಗದಲ್ಲಿ ರಾಶಿ-ರಾಶಿಯಾಗಿ ದೋಷಗಳೇ ಕಂಡುಬರುತ್ತವೆ. ಹಾಗಿರುವಾಗ ಜನರು ಯಾವ ಉಪಾಯದಿಂದ ಆ ದೋಷ ಗಳನ್ನು ನಾಶಪಡಿಸಬಲ್ಲರು? ಇದಲ್ಲದೆ ಯುಗಗಳ ಸ್ವರೂಪ, ಅವುಗಳ ಧರ್ಮ, ಕಲ್ಪದಸ್ಥಿತಿ, ಪ್ರಳಯದ ಪರಿಮಾಣ ಹಾಗೂ ಸರ್ವವ್ಯಾಪಕ, ಸರ್ವಶಕ್ತನಾದ ಭಗವಂತನ ಕಾಲಸ್ವರೂಪವನ್ನು ನಿರೂಪಣೆ ಮಾಡಿರಿ. ॥ ೧೬-೧೭ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ಕೃತಯುಗದಲ್ಲಿ ಧರ್ಮಕ್ಕೆ ನಾಲ್ಕು ಚರಣಗಳಿರುತ್ತವೆ. ಸತ್ಯ, ದಯೆ, ತಪಸ್ಸು ದಾನ - ಇವೇ ಆ ನಾಲ್ಕು ಪಾದಗಳು. ಆ ಸಮಯದಲ್ಲಿ ಜನರು ಪೂರ್ಣನಿಷ್ಠೆಯಿಂದ ತಮ್ಮ-ತಮ್ಮ ಧರ್ಮ ವನ್ನು ಪಾಲಿಸುತ್ತಾರೆ. ಧರ್ಮವು ಸಾಕ್ಷಾತ್ ಭಗವಂತನ ಸ್ವರೂಪ ವಾಗಿದೆ. ॥ ೧೮ ॥ ಕೃತಯುಗದ ಜನರು ಬಹಳ ಸಂತೋಷಿಗಳೂ, ದಯಾಳುಗಳೂ ಆಗಿರುತ್ತಾರೆ. ಅವರು ಎಲ್ಲರೊಂದಿಗೆ ಮೈತ್ರಿಯ ವ್ಯವಹಾರಮಾಡುತ್ತಾ ಶಾಂತರಾಗಿರುತ್ತಾರೆ. ಮನಸ್ಸು-ಇಂದ್ರಿಯ ಗಳು ಅವರ ವಶದಲ್ಲಿರುತ್ತವೆ. ಸುಖ-ದುಃಖಾದಿ ದ್ವಂದ್ವಗಳನ್ನು ಅವರು ಸಮವಾಗಿ ಸಹಿಸುತ್ತಾರೆ. ಹೆಚ್ಚಿನವರು ಸಮದರ್ಶಿಯೂ, ಆತ್ಮಾರಾಮರೂ ಆಗಿರುತ್ತಾರೆ. ಉಳಿದ ಜನರು ಸ್ವಸ್ವರೂಪ ಸ್ಥಿತಿಗಾಗಿ ಅಭ್ಯಾಸದಲ್ಲಿ ತತ್ಪರರಾಗಿರುತ್ತಾರೆ. ॥ ೧೯ ॥